೧೧ ನೇ ವರುಷದ ೫ ನೆಯ ಕಿರಣ

# ಕ್ರಾಂತಿಯರ ಕನಸು

ಕಾದಂಬರಿ

ಜನಾರ್ದನ ಗುರ್ಕಾರ್

ಪ್ರತಿಭಾ ಗ್ರಂಥಮಾಲೆ
ಭಗತ್ ಸಿಂಗ್ ಬೀದಿ, ಧಾರವಾಡ.

' ಮಾಲೆ ' ಯ
ವಾರ್ಷಿಕ ಚಂದಾ
ಏಳು ರೂಪಾಯಿ
( ಅಂಚೆ ವೆಚ್ಚ ಸೇರಿ )

ಪ್ರಥಮ ಮುದ್ರಣ
೧೫ ಜೂನ್ ೧೯೫೪

ಬೆಲೆ
೧ ರೂ. ೮ ಆಣೆ.



ಮುದ್ರಕರು: ಪ್ರಕಾಶಕರು:
ಬಾಲಚಂದ್ರ ವೆಂಕಟೇಶ ಘಾಣೇಕರ
ಪ್ರತಿಭಾ ಮುದ್ರಣ ಸಮಾಜ ಪುಸ್ತಕಾಲಯ
ಧಾರವಾಡ. ಧಾರವಾಡ.

# ಮುನ್ನುಡಿ

ಇಬ್ಬರು ಸೋದರಿಯರ ಬಗ್ಗೆ ಅವರ ಬಳಗದವರು ಮತ್ತು ಅವರೇ ಕಂಡ ಕನಸುಗಳನ್ನು ಮುಖ್ಯವಾಗಿ ಒಂದು ಸೂತ್ರವೆಂದಿಟ್ಟುಕೊಂಡು ಈ ಕಾದಂಬರಿಯನ್ನು ಬರೆಯಲೆತ್ನಿಸಿದ್ದೇನೆ

ಅದೇ ರೀತಿಯಲ್ಲಿ ಆ ಕನಸುಮರ ಅವರೆಲ್ಲ ಬಯಸಿದಂತೆ ಕಲ್ಪತರು ವಾಗಲಿಲ್ಲವೆಂಬುದೂ ಈ ಕಾದಂಬರಿಯಲ್ಲಿ ಸುವಿಸ್ತೃತವಾಗಿ ಬಂದಿದೆ ಅದೇ ವಸ್ತು ನನ್ನನ್ನು ಈ ಕೃತಿ ನಿರ್ಮಿಸುವಂತೆ ಜುಲುಮೆಗೊಳಿಸಿತು

ಹೆಣ್ಣಿನ ಬಾಳಿನಲ್ಲಿ ಮದುವೆಯೆಂಬುದೊಂದು ಅದೃಷ್ಟದ ಬಾಗಿಲು ಇದ್ದಂತೆ ಮದುವೆಯಾಗುವ ಪೂರ್ವಜೀವನವೊಂದು ತೆರನಾದರೆ ಆಮೇಲಿನ ಅಪರಜೀವನ ಮತ್ತೊಂದು ತೆರನಾಗಿರುತ್ತವೆ ಈ ಕಥಾಸರಣಿಯೊಳಗಿನ ಸುಮತಿ—ಸಂಜೀವಿಯರ ಜೀವನವನ್ನು ಆ ತೆರನಾಗಿ ನೋಡಿದ್ದರೂ ಅವರ ಅಪರಜೀವನವನ್ನೇ ಹೆಚ್ಚು ದಕ್ಷತೆಯಿಂದ ಚಿತ್ರಿಸಿ--ಅದಕ್ಕೇ ಬಹಳ ಮಹತ್ವ ಕೊಡಲಾಗಿದೆ

ಮುಖ್ಯವಾಗಿ ಆ ಇಬ್ಬರು ಸೋದರಿಯರಲ್ಲಿ ತಮ್ಮ ಬಾಳನ್ನು ಯಾರು ಯಾವ ರೀತಿಯಲ್ಲಿ ರೂಪಿಸಿಕೊಂಡರೆಂಬುದನ್ನು ವ್ಯಕ್ತಗೊಳಿಸುವಾಗ ವೈಯು ಕ್ತಿಕ ಹಾಗೂ ಸಾಮಾಜಿಕ ಮನೋಜೀವನದ ವೃತ್ತಿ—ಪ್ರವೃತ್ತಿಗಳು ಎಷ್ಟರ ಮಟ್ಟಿಗೆ ತಮ್ಮ ಶಕ್ತಿಯನ್ನು ತೋರಿಸಬಲ್ಲವೆಂಬುದನ್ನು ಗಮನಿಸತಕ್ಕ— ವಿಷಯ. ಸಹನೆ, ತಾಳ್ಮೆ, ಸಹಾನುಭೂತಿಗಳ ಮೂರ್ತಿಯೇ ಆದರೂ ಮಾನವ ಜೀವಿ ಸುತ್ತುಮುತ್ತಲಿನ ಕ್ಷೇತ್ರದ—ಆವರಣದ ಪ್ರತಿಕ್ರಿಯೆಯ ಆಘಾತಕ್ಕೆ ಒಳಪಟ್ಟು ಹೇಗೆ ರೌದ್ರಮೂರ್ತಿಯಾಗಬಹುದೆಂಬುದನ್ನು ಇಲ್ಲಿನ ಒಂದೆರಡು ಪಾತ್ರಗಳಲ್ಲಿ ಕಾಣಬಹುದಾಗಿದೆ

ಸಂಜೀವಿಯ ಪಾತ್ರದಲ್ಲಿ ತನ್ನ ವೈಯುಕ್ತಿಕ ಜೀವನಕ್ಕೆ ತಿಲಾಂಜಲಿ ಯನ್ನು ಎರೆದು—ಎಲ್ಲವನ್ನೂ ನುಂಗಿ, ಆ ಮೂಲಕವೇ ತನ್ನ ಹಾಗೂ ಸುತ್ತು ಮುತ್ತಲಿನ ಜೀವನವನ್ನು ಬೆಳಗಿಸುವ ಶೀಲನಿರೂಪಣೆಯಲ್ಲಿ ಆದರ್ಶವೇನನ್ನೂ ಕಾಣಲು ಸಾಧ್ಯವಿಲ್ಲ.

ಹೀಗೆ ಇಬ್ಬರು ಸೋದರಿಯರ (ಸಂಜೀವಿ—ಸುಮತಿ) ಜೀವನ ಒಂದೇ ಸ್ಥಿರಬಿಂದುವಿನಿಂದ ಹೊರಟದ್ದರೂ ಎದ್ದು ಕಾಣುವಂಥ ಎರಡು ದಾರಿಗಳನ್ನು ಅದು ನಿರ್ಮಿಸಿ ತಕ್ಕ ಹೆಗ್ಗಳಿಕೆಯನ್ನು ಗಳಿಸಿದೆ. ಸುಮತಿ—

ಸಂಜೀವಿಯರು ಅಂಥ ಆದರ್ಶದೀಪಿಯರಲ್ಲ ತಕ್ಕಕಾಲ ಕ್ಷೇತ್ರಗಳ ಹಿನ್ನಲೆಯಲ್ಲಿ ಮೂಡಿಬರುವ ಸಾಧ್ಯ ಪಾತ್ರಗಳೇ ಅವರೆಂದು ನಂಬಿದ್ದೇನೆ

ಈ ಕಥಾನಕದಲ್ಲಿ ಎರಡು—ಮೂರು ಮನೆತನಗಳ ಚಿತ್ರಿಸಲ್ಪಟ್ಟಿವೆ ಆದ್ದರಿಂದ ಲೇಖಕ ಒಂದೇ ಪಾತ್ರಕ್ಕೆ ನಾಯಕನ ಪಟ್ಟಕಟ್ಟುವ ಪ್ರಯತ್ನ ವಹಿಸಿಕೊಂಡಿಲ್ಲ ಅಂತೇ ಕಥೆಗೊಬ್ಬ ನಾಯಕ, ಒಬ್ಬಳು ನಾಯಕಿ ಬೇಕೆಂಬ ಅಜ್ಜ ನೆಟ್ಟ ಆಲದ ಮರಕ್ಕೆ ನೇತಾಡಬೇಕೆಂಬ ಯಾವ ನಿಯಮ-ನಿರ್ಬಂಧನೆಯೂ ಇಲ್ಲವಷ್ಟೆ ?

ಕೊನೆಯದಾಗಿ ಇಲ್ಲಿ ಕೆಲವೆಡೆಗೆ ವೈದ್ಯಕೀಯ ಜೀವನದ ಅಂಶವೂ ಬರುತ್ತದೆ ಆ ಮಟ್ಟಿಗಷ್ಟೆ ನಾನು ವೈದ್ಯ—ಹೊರತು ಸ್ವಂತಕ್ಕೆ ನಾನು ಡಾಕ್ಟರನಲ್ಲ ಅಲ್ಲಿಯಾದರೂ ಕೂಡ ದೂರದಿಂದ ಗಳಿಸಿದ ಅನುಭವವೇ ನನಗೆ ಸಹಾಯವಾಗಿರುತ್ತದೆ

ನಾರಾಯಣಯ್ಯನಂಥ ವೈದ್ಯರನ್ನು ನಾನು ಜೀವನದಲ್ಲಿ ಕಂಡು ಸಂತೋಷಿತನಾಗಿದ್ದೇನೆ ಅವನ ಜೀವನದ ಬೆಳಕಿನ ಭಾಗ ನನ್ನನ್ನು ಮುಗ್ಧಗೊಳಿಸಿದ

ಇಷ್ಟು ಹೇಳಿದ್ದೇ ಹೆಚ್ಚಾಯಿತೆಂದು ಕಾಣುತ್ತದೆ ಇರಲಿ ಮಿಕ್ಕದ್ದನ್ನಾದರೂ ಕಾದಂಬರಿಯೆ ವಿಸ್ತರಿಸುತ್ತದೆಂದು ಹೇಳಿ ವಿರಮಿಸುತ್ತೇನೆ

**ಲೇಖಕ**

# ಪ್ರಕಾಶಕರ ನುಡಿ.

ಪ್ರತಿಭಾ ಗ್ರಂಥಮಾಲೆಯ ಕೊನೆಯ ಕಿರಣದಲ್ಲಿ ಅನಿರೀಕ್ಷಿತ ಬದಲಾವಣೆ ಯಾಗಿದೆ "ಮೃಗಜಲ" ಈ ವರುಷದ ಕೊನೆಯ ಕಿರಣವೆಂದು ಮೊದಲು ತಿಳಿಸಲಾಗಿತ್ತು ಆದರೆ ಅದರ ರಕ್ಷಾಕವಚದ ಪಡಿಯಚ್ಚು ಬರಲು ತುಸು ವಿಲಂಬವಾದುದರಿಂದ ಅದನ್ನು ಹನ್ನೆರಡನೆಯ ವರುಷದ ಆರಂಭದ ಕಿರಣವನ್ನಾಗಿ ಪ್ರಕಟಿಸಲು ನಿರ್ಧರಿಸಿದ್ದೇವೆ

ಇದೀಗ 'ಮೃಗಜಲ' ದ ಬದಲು ಶ್ರೀ ಜನಾರ್ದನ ಗುರ್ಕಾರ್ ಅವರು ಬರೆದ "ಕಾಂತೆಯರ ಕನಸು" ಚಂದಾದಾರರಿಗೆ ಸಲ್ಲಿಸಿದ್ದೇವೆ ಇಲ್ಲಿಗೆ ಮಾಲೆಯ ಹನ್ನೊಂದನೆಯ ವರುಷ ಪೂರ್ತಿಯಾದಂತಾಯಿತು.

ಈ ವರುಷ ನಮ್ಮ ಮಾಲೆಯು ಹನ್ನೆರಡುನೂರು ಪುಟಕ್ಕಿಂತ ಹೆಚ್ಚು ಸಾಹಿತ್ಯವನ್ನು ಐದು ಕಿರಣಗಳ ರೂಪದಲ್ಲಿ ಸಕಾಲಕ್ಕೆ ಸಲ್ಲಿಸಿದೆಯೆಂದು ತಿಳಿಸಲು ಒಂದು ಬಗೆಯ ಹೆಮ್ಮೆಯೆನಿಸುತ್ತದೆ

ಮಾಲೆಯು ಸಲ್ಲಿಸುತ್ತಿರುವ ಸೇವೆಯನ್ನು ಮೆಚ್ಚುತ್ತ ಬಂದ ಓದುಗರೆಲ್ಲ ಮುಂದಾದರೂ ತಮ್ಮ ಸಹಾಯವನ್ನು ನೀಡುವರೆಂದು ನಂಬಿದ್ದೇವೆ ಆಗಸ್ಟ ತಿಂಗಳ ಮೊದಲನೆಯ ವಾರದಲ್ಲೇ ನಮ್ಮ ಹನ್ನೆರಡನೆ ವರುಷದ ಆರಂಭದ ಕಿರಣವನ್ನು ಎಂದಿನಂತೆ ವ್ಹಿ ಪಿ ಮೂಲಕ ಕಳಿಸುತ್ತೇವೆ. ಕಾರಣಾಂತರದಿಂದ ತಮಗೆ ಚಂದಾದಾರರಾಗಲು ಇಷ್ಟವಿಲ್ಲದವರು ಮೊದಲೇ ತಿಳಿಸಿದರೆ ಬೇಸರವಿಲ್ಲ ದಯವಿಟ್ಟು ಬಾಗಿಲಿಗೆ ವ್ಹಿ. ಪಿ. ಬಂದ ಮೇಲೆ ಮಾತ್ರ ಯಾರೂ ಹಿಂತಿರುಗಿ ಕಳಿಸಬಾರದಾಗಿ ಬಿನ್ನವಿಸಿ ಕೊಳ್ಳುತ್ತೇವೆ

ಮಾಲೆಯ ಓದುಗರಿಗೂ, ಚಂದಾದಾರರಿಗೂ, ಮಾಲೆಯ ಕೀರ್ತಿಗೆ ಮುಖ್ಯವಾಗಿ ಕಾರಣರಾದಂಥ ಎಲ್ಲ ಲೇಖಕರಿಗೂ ಮಾಲೆಯು ಚಿರಋಣಿಯಾಗಿರುವುದು ಮಾಲೆಯು ತಮ್ಮದೇ ಎಂಬ ಅಭಿಮಾನವಿಟ್ಟು ಪ್ರತಿ ಪುಸ್ತಕಕ್ಕೂ ತಮ್ಮ ಕಲಾಪೂರ್ಣವಾದಂಥ ಚಿತ್ರಗಳನ್ನು ಬರೆದುಕೊಟ್ಟು ತಮ್ಮ ನೆರವನ್ನು ನೀಡುತ್ತ ಬಂದ ಶ್ರೀ ಜಿ. ಕೆ. ಮೂರ್ತಿಯವರಿಗೆ ಮಾಲೆಯು ಋಣವಾಗಿ ಕೃತಜ್ಞತೆಯನ್ನು ಸೂಚಿಸದೆ ಇರಲಾರೆವು.

# ೧

ಮೂಡುಮನೆ ಹೊನ್ನಪ್ಪಯ್ಯನವರಿಗೆ ಒಬ್ಬ ಅಳಿಯ, ಎಡಹಿತ್ತಲು ಅಣ್ಣಪಯ್ಯನವರಿಗೂ ಒಬ್ಬ ಅಂಥವನೇ ಅಳಿಯ ಎಂದೊಡನೆ ಇಬ್ಬರು ಜಾಮಾತೃಗಳಲ್ಲಿ ಏನಾದರೂ ಸಂಬಂಧವಿದೆಯೆಂದಲ್ಲ ಕೆಲವೊಂದು ವಿಷಯಗಳಲ್ಲಿ ಅವರಿಬ್ಬರಿಗೂ ಸಾಮ್ಯವಿರಬಹುದು ಆ ಮಾತೇ ಬೇರೆ ಆದರೆ ಮಾವಂದಿರಲ್ಲಿ ಮಾತ್ರ ನಿಕಟವಾದ ಬಾಂಧವ್ಯ ಇತ್ತು. ಅವರು ಒಂದೇ ತಾಯಿಯ ಮಕ್ಕಳು ಅಣ್ಣಪ್ಪಯ್ಯ ಹೊನ್ನಪ್ಪಯ್ಯನವರಿಗೆ ತಮ್ಮ ಆಗಬೇಕು ಈ ಸಹೋದರರ ತಂದೆ–ಸುಬ್ರಾಯರಿಗೆ ಐದು ಮಕ್ಕಳು. ಅವೆಲ್ಲ ಗಂಡೇ ಹೆಣ್ಣು ಅವರ ಸಂತಾನಕ್ಕೇ ಕಡಿಮೆ ಆ ವಂಶದ ಹೇತು ಸುಬ್ರಾಯರಿಗೆ ಸ್ವಲ್ಪಬಲವಾಗಿ ಬಡೆದು ಹೆಣ್ಣೇ ಜನಿಸಲಿಲ್ಲವೊ ಏನೋ! ಅವರು ಆ ಬಗ್ಗೆ ಆಸೆ ಪಡಲಿಲ್ಲ ಬದಲು, ಅವರಿಗೊಂದು ದೊಡ್ಡ ಹೆಮ್ಮೆ ಇತ್ತು ಯಾರಾದರೂ ಸೈ, "ನಿಮಗೆಷ್ಟು ಮಕ್ಕಳು ?" ಎಂದು ಕೇಳಿದರೆ ಸಾಕು. ಬಲಗೈ ಸ್ವಲ್ಪ ಮೇಲೆ ಎತ್ತಿ ಐದೂ ಬೆರಳುಗಳನ್ನು ಮೊಗ್ಗೆಯಂತೆ ಮುಡಚುತಿದ್ದರು ಕ್ಷಣದಲ್ಲೆ ಅವುಗಳನ್ನು ಹೂವಿನಂತೆ ಅರಳಿಸಿ, "ನನಗೆ ಐದು ಜನ ಪಂಚಪಾಂಡವರು" ಎನ್ನುತ್ತ ಮುಗುಳು ನಗೆ ನಕ್ಕು ಹಿಗ್ಗುತ್ತಿದ್ದರು ಈ ಪಂಚಪುತ್ರರನ್ನು ಮನದಣಿಯ ನೋಡಿ ಅವರು ಪಂಚತ್ವವನ್ನೂ ಸೇರಿದರಂತೆ ಒಟ್ಟಿನಲ್ಲಿ ಅವರೇ ಭಾಗ್ಯಶಾಲಿಗಳು ಅವರ ಹಿಂದೇ ಮೂವರು ಮಕ್ಕಳೂ ಅವರ ಪತ್ನಿಯೂ ಅಳಿದರು ತೀರಿಕೊಂಡ ಮಕ್ಕಳಿಗೆ ಮದುವೆಯಾಗಿರಲಿಲ್ಲ ಇತ್ತ ಹೊನ್ನಪ್ಪಯ್ಯ ಮತ್ತು ಅಣ್ಣಪ್ಪಯ್ಯ, ತಮ್ಮ ತಮ್ಮ ಮದುವೆಯನ್ನು ತಾವೇ ಮಾಡಿಕೊಳ್ಳಬೇಕಾಯಿತು ಮುಂದೆ ಪಾಲೂ ಆಯಿತು. ಜಗಳ ಮಾಡಿಕೊಂಡು ಪಾಲಾಗಲಿಲ್ಲ ಸಂತೋಷದಿಂದಲೇ ಬೇರೆಯಾದರೂ, ಬಹಳ ದೂರ ಹೋಗಿಯೂ ವಾಸಿಸಲಿಲ್ಲ. ಅಣ್ಣಪ್ಪಯ್ಯ ಎಡಹಿತ್ತಲಿಗೆ ಬಂದು ಮನೆ ಕಟ್ಟಿಸಿದರು ಹೊನ್ನಪ್ಪಯ್ಯನವರದ್ದು ಪುರಾತನ ಮೂಡುಮನೆಯಲ್ಲೆ ಬಿಡಾರವಾಯಿತು

ಈ ಎರಡೂ ಮನೆಗಳ ನಡುವೆ ಒಂದು ತೋಡು ಚಾಚಿದೆ ಅದರ ಈಚೆ ದಡದ ಬೆಟ್ಟುಗದ್ದೆಗಳ ಮಧ್ಯಕ್ಕೆ ಎತ್ತರದಲ್ಲಿ ಹೊನ್ನಪ್ಪಯ್ಯನವರ ಮನೆಯಿದೆ ಆಚೆ ಬದಿಯಲ್ಲಿ ಬಯಲುಗದ್ದೆಗಳ ಪಕ್ಕದಲ್ಲೆ ಎತ್ತರದಲ್ಲಿ ಅಣ್ಣಪ್ಪಯ್ಯ ಮನೆ ಕಟ್ಟಿಸಿದ್ದರು

ಅಣ್ಣಪ್ಪಯ್ಯನವರ ಮನೆಯ ಎಡಕ್ಕೆ ಸುಮಾರು ಒಂದು ಕಲ್ಲೊಗೆತದ ದೂರದಲ್ಲಿ ಈಗ ಹೇಳಿದ ತೋಡು ಹರಿಯುತ್ತದೆ ಅದು ಎಡಹಿತ್ತಲಿನ ಹತ್ತಿರ ಬಂದೊಡನೆ " ಮದುಮಗಳ ಅಬ್ಬಿ " ಎಂದು ಕರೆಯಲ್ಪಡುತ್ತದೆ. ಹಾಗೆ ಅದಕ್ಕೆ ಯಾಕೆ ನಾಮಕಾರಣ ಮಾಡಿದರೋ ತಿಳಿಯದು ಆದರೆ ಈಗಲೂ ಹೊಸ ಮದುಮಗ ತನ್ನ ನಲ್ಲೆಯನ್ನು ಅಲ್ಲಿಂದ ಒಂದು ಮೈಲು ದೂರದಿಂದ ಕರೆದೊಯ್ಯುತ್ತಾನೆ " ಹಾಗೇಕೆ ? " ಎಂದು ಯಾರಾದರೂ ಕೇಳಿದರೆ, " ಅದರಲ್ಲಿ ಹಿಂದಕ್ಕೊಬ್ಬಳು ಮದುಮಗಳು ಮಾಯವಾದ ಳಂತೆ! " ಎಂಬ ಉತ್ತರ ದೊರೆಯುತ್ತದೆ. ಅಬ್ಬಿಯ ಅಕ್ಕಪಕ್ಕದ ಯಾವನ ಮನೆಯಲ್ಲಿ ಮದುವೆಯಾದರೂ ಮದುಮಗಳನ್ನು ಎಂದಿಗೂ ಅಜ್ಜ ಅಜ್ಜಿಯಂದಿರು ಅಲ್ಲಿಗೆ ಹೋಗಲು ಬಿಡುವುದಿಲ್ಲ

ಮೇಲೆ ಹೇಳಿದ ಅಬ್ಬಿಗೆ ಮಳೆಗಾಲದಲ್ಲಿ ಮಾತ್ರ " ಮದುಮಗಳ ಅಬ್ಬಿ " ಎಂದು ಮನದುಂಬಿ ಕರೆಯಬಹುದು. ಬೇಸಿಗೆಯಲ್ಲಿ ಮೇಲಿನಿಂದ ಬೀಳುವ ತೋಡಿನ ನೀರು ಮಾಯವಾಗುತ್ತದೆ. ಆಗ ಅಬ್ಬಿಯೂ ಮೌನ ಚಿತ್ತದಿಂದ ಮಾಯವಾಗುವಳು ಆದರೂ ಅವಳು ತೋಡಿಟ್ಟು ಹೋದ ಹೊಂಡದಲ್ಲಿ ಯಾವಾಗಲೂ ನೀರೇ ನೀರು. ಅಲ್ಲಿಯ ಆಳ ಎಷ್ಟಿದೆಯೆಂಬುದು ಇನ್ನೂ ತಿಳಿದಿಲ್ಲ ಈ ಸಮಯದಲ್ಲಿ " ಮದುಮಗಳ ಅಬ್ಬಿ " ಕೇವಲ ಒಂದು ಕೊಳ್ಳವಾಗಿ ಕೂತಿರುತ್ತಾಳೆ ಅಲ್ಲಿಯ ವಾತಾವರಣದಲ್ಲಿ ಯಾವ ಆಭರಣ ಅಲಂಕಾರಗಳ ಮೋಹಕತೆಯೂ ಕಾಣಿಸದು. ಬದಲು ಗಭೀರ ನೀರವತೆ ತುಂಬಿತುಳುಕುತ್ತದೆ. ಮಳೆಗಾಲದ ಅವಳ ಉಬ್ಬನ್ನು ಕಂಡು ಸಂತೋಷಿಸಿದವರಿಗೆ, ಬೇಸಿಗೆಯಲ್ಲಿ ಅವಳು ನಿರುತ್ಸಾಹದಿಂದ ಕುಗ್ಗಿ ಮನದಲ್ಲೇ ಕೊರಗುವುದನ್ನು ನೋಡಿ ಕರುಣೆ ಬಾರದಿರದು. ಆಗ ಅವಳು ಹೇಗೆ ಬಿದ್ದರೂ ಮದುಮಗಳ ಅಬ್ಬಿ, ಈಗ ಆಕೆ ಹೇಗೆ ಇದ್ದರೂ ನೀರು ತುಂಬಿಕೊಂಡು ಕೂತಿರುವ ಬರಡು ಡಬ್ಬಿ !

ಬೇಸಗೆ ಕಾಲದಲ್ಲಿ ಆದರೂ ಮದುಮಗಳ ಅಬ್ಬಿಯ ಬಳಿಗೆ ಹಲವಾರು ಜನ ಬರುತ್ತಾರೆ ಮಧ್ಯಾಹ್ನಹೊತ್ತಿನಲ್ಲಿ ಎಮ್ಮೆ ಕೋಣಗಳೂ ಅಲ್ಲಿಗೆ ನೀರಿನ ತಂಪು ಪಡೆಯಲು ಬರುವುದುಂಟು ಹಳ್ಳಿಯ ಹತ್ತಾರು ತರುಣರೂ ಅಲ್ಲಿಗೆ ಈಸುವ ಏರಾಟ ನಡೆಸಲು ಬರುವರು ಆದರೆ ಸಂಜೆಯು ಸೂರ್ಯ ಪಡುಗಡಲಿಗೆ ಬಿದ್ದಮೇಲೆ ಅಲ್ಲಿ ವಿಶೇಷವಾಗಿ ಹೆಂಗಸರೇ ಕಾಣುತ್ತಾರೆ ಅವರೆಲ್ಲ ತಮ್ಮ ನಿತ್ಯದ ಕೆಲಸಕ್ಕಾಗಿ ಅಬ್ಬಿಗೆ ಬರುವರು ಕೆಲಸವೆಂದರೆ – ಅಲ್ಲಿಂದ ನೀರು ಹೊರಲಿಕ್ಕೆ ಅಥವಾ ಹೊಯಿಗೆ ಹೊರಲಿಕ್ಕ ಅಲ್ಲ ಅಬ್ಬಿಯ ಸುತ್ತುಮುತ್ತಲೂ ಹಾಯಾಗಿ ಹಾಸಿರುವ ಹಸಿರು ಹೊಲಗದ್ದೆಗಳ ಪುಣಿಗಳಲ್ಲಿ ಹುಲ್ಲು ಬೇಸಗೆಯಲ್ಲೂ ಬೆಳೆದಿರುತ್ತದೆ ಅದನ್ನು ಅಗೆಯುವುದೇ ಹಲವಾರು ಹಳ್ಳಿಯ ಹೆಂಗಸರ ಕೆಲಸ ಹಸಿರು ಹುಲ್ಲಿನ ಎಳೆಯನ್ನೂ ಕಾಣದ ದನಕರುಗಳಿಗೆ ಅವುಗಳನ್ನು ಒಯ್ದು ಹಾಕುವರು ಇದರಿಂದ ಎಷ್ಟೋ ಬೈಹುಲ್ಲಿನ ಉಳಿತಾಯವಾಗುತ್ತದೆ ಸಂಜೆಯಹೊತ್ತು ಗದ್ದೆ ಪುಣಿಗಳಲ್ಲಿ ಬೇಸರವಿಲ್ಲದೆ ಸಾಗುತ್ತದೆ

ಇಂದು ಯಾಕೋ ಏನೋ ಸುಮತಿ ಅಲ್ಲಿಗೆ ಬರಲೇ ಇಲ್ಲ. ಸಂಜೀವಿ ಹುಲ್ಲು ತೆಗೆಯುವಾಗ ನೂರಾರು ಸಲ ಎದ್ದು ನಿಂತು ಮೂಡುಮನೆಯತ್ತ ನೋಡಿದಳು ಪ್ರತಿದಿನವೂ ಬರುವ ಸುಮತಿ ಇಂದೇಕೆ ಬರಲಿಲ್ಲವೆಂದು ಆಕೆ ಎಣಿಸುತ್ತ ಹುಲ್ಲು ತೆಗೆಯುತ್ತಿದ್ದಳು ಹಾಗೆ ವಿಚಾರಿಸುತ್ತ ಇರುವಾಗ ಅವಳ ಹುಲ್ಲಿನ ಬುಟ್ಟಿ ಹೇಗೆ ತುಂಬಿತೋ ಅವಳಿಗೇ ತಿಳಿಯಲಿಲ್ಲ ಅವಳಿಗಿಂತ ಮೊದಲು ಬಂದವರು ನಾಲ್ಕಾರು ಜನ ಹುಲ್ಲು ಹೊತ್ತುಕೊಂಡು ಅಷ್ಟರಲ್ಲಿಯೇ ಮನೆ ತಲುಪಿಯಾಗಿತ್ತು. ಅವರೊಡನೆ ಈಕೆ ಮಾತಾಡಿರಲಿಲ್ಲ ಈಕೆಯ ಪರಿಚಯವಿದ್ದರೂ ಅವರಾರೂ ಇವಳನ್ನು ಮಾತಾಡಿಸಲಿಲ್ಲ ಒಬ್ಬಿಬ್ಬರು ಮಾತ್ರ ಮುಖ ನೋಡಿ ಮುಗುಳು ನಗೆ ಬೀರಿ ಹೋಗಿದ್ದರು ಸೂರ್ಯ ಪಡುವಲಲ್ಲಿ ಮುಳುಗದಿದ್ದರೂ ಅವನ ಕಿರಣಗಳನ್ನು ಕಡಿದು ನಿಬಿಡವಾದ ಮರಗಿಡಗಳ ಹರದೆ ಇಳಿದುದರಿಂದ ಆ ತಾವಿಗೆ ಕತ್ತಲು ಮುಸುಕತೊಡಗಿತ್ತು ಸಂಜೀವಿ ಒಮ್ಮೆಲೇ ಹಿಂದೆ ನೋಡಿದಳು ಸೂರ್ಯ ಕಾಣಿಸಲಿಲ್ಲ ಕತ್ತಲೆಯಾಯಿತೆಂದು, ಬಗೆದು ಲಗುಬಗೆಯಿಂದ ಹುಲ್ಲಿನ ಬುಟ್ಟಿಯನ್ನು ಸೊಂಟಕ್ಕೆ ಏರಿಸಿ, ಬಲಗಡೆ ಬಾಗಿ ಅಬ್ಬಿಯತ್ತ ನಡೆದಳು.

ಅಲ್ಲಿಂದ ಅಬ್ಬಿಗೆ ಹತ್ತೇ ಮಾರು ಅಂತರವಿತ್ತು  ಗದ್ದೆಯ ಪುಣಿಯಿಂದ ಅಬ್ಬಿಗೆ ಇಳಿದಳು  ಅಬ್ಬಿಯ ನೀರು ಕೆಸರಾಗಿತ್ತು  ಯಾಕಂದರೆ, ಅವಳಿಗಿಂತ ಮೊದಲು ಎಷ್ಟೋ ಜನರು  ಅಲ್ಲಿ ಹುಲ್ಲು ತೊಳೆದು ನೀರನ್ನು ಕಳಂಕಿಸಿ ಹೋಗಿದ್ದರು  ಅಲ್ಲಿ ಯಾರೂ ಇರಲಿಲ್ಲ  ಆದರೆ ಸಂಜೀವಿ ಹುಲ್ಲಿನ ಬುಟ್ಟಿ ಕೆಳಗಿಟ್ಟ ಕ್ಷಣದಲ್ಲೇ, ಧ್ಯಾನಮಗ್ನವಾಗಿದ್ದ ಮೀನಚುಳ್ಳಿಯು ಚಿಕ್ಕನೆ ನೀರಲ್ಲಿ ಮುಳುಗಿ ಒಂದು ಮೀನನ್ನು ಎತ್ತಿಕೊಂಡು ಹೋಯಿತು  ಆ ಹಕ್ಕಿ ನೀರಲ್ಲಿ ಬಿದ್ದ ಸಪ್ಪಳಕ್ಕೆ ಸಂಜೀವಿ ಒಮ್ಮೆ ವ್ಯೃತೆಗೆದಳು !  ಅದು ಮೀನುಚುಳ್ಳಿ ಎಂದು ನಿರ್ಧರಿಸಬೇಕಾದರೆ ಆಕೆ ಮೇಲೆ ನೋಡಬೇಕಾಯಿತು  ಅವಳು ನಿಂತ ಎಡಕ್ಕೆ ಅಬ್ಬಿಯ ದಡ ಭೂತಾಕಾರವಾಗಿ ಬಾಯಿತೆರೆದಂತೆ ಬಗ್ಗಿ ನಿಂತಿತ್ತು  ಒಂದೆರಡು ಎತ್ತರದ ಮರಗಳೂ ಜೀವ ಹಿಡಿದುಕೊಂಡು ಬೆಳೆದಿದ್ದವು  ಪೊದೆಯಂತು ದಟ್ಟವಾಗಿ ಹಬ್ಬಿತ್ತು  ಒಂದು ಎತ್ತರದ ಮರದಲ್ಲಿ ಮೀನುಚುಳ್ಳಿಯು ಮೀನನ್ನು ಕೊಕ್ಕಿನಲ್ಲಿ ಕಚ್ಚಿಕೊಂಡು ಕೂತಿತ್ತು. ಆ ನೋಟ ಆಕೆಗೆ ಹೊಸದಲ್ಲ. ಅವಳ ಮನಸ್ಸಿಗೆ ಅದರಿಂದ ಯಾವ ಪರಿಣಾಮವೂ ಆಗಲಿಲ್ಲ  ಆಕ ಪುನಃ ಕೆಳಗೆ ಬಗ್ಗಿ ನೀರಲ್ಲಿ ಹುಲ್ಲು ಹಾಕಿದಳು. ಮೇಲಿನ ಬಯಲುಗದ್ದೆಗಳ ಕತ್ತಲೆಗಿಂತ ಆ ಹೊಂಡದಲ್ಲಿ ತಿಮಿರ ದಟ್ಟವಾಗಿತ್ತು. ತಾನಿನ್ನು ಬೇಗನೆ ಮನೆ ಸೇರಬೇಕೆಂದು ಸಂಜೀವಿ ಹುಲ್ಲು ತೊಳೆಯತೊಡಗಿದಳು  ಹುಲ್ಲಿಗೆ ಮೆತ್ತಿದ್ದ ಮಣ್ಣು ಎಲ್ಲ ನೀರಲ್ಲಿ ಕರಗಿ ಹೋಯಿತು. ಮೊದಲಿನಂತೆ, ಆ ತೊಯ್ದ ಹುಲ್ಲನ್ನು ಬುಟ್ಟಿಯಲ್ಲಿ ತುಂಬಿಸಿದಳು. ಅದನ್ನು ಎತ್ತಿ ತಂದು ಸ್ವಲ್ಪ ದೂರವಿರುವ ಒಂದು ಕಲ್ಲಿನ ಮೇಲೆ ಇರಿಸಿದಳು. ಅದರೊಳಗಿಂದ ನೀರು ಜಾರಿ ಹೋಗಲಿ ಎಂದು ಹಾಗೆ ಇಟ್ಟಳೆಂದು ಕಾಣುತ್ತದೆ  ಕತ್ತಿಯನ್ನೂ ಬುಟ್ಟಿಯ ಮೇಲಿಟ್ಟಳು. ಆ ಮೇಲೆ ಕೈಕಾಲು ಮುಖ ತೊಳೆಯಲು ಸ್ವಲ್ಪ ಸ್ವಚ್ಛವಾದ ನೀರನ್ನು ಅರಸುತ್ತ ಅಬ್ಬಿಯ ಬದಿಯಲ್ಲಿ ನಡೆಯತೊಡಗಿದಳು. ಕೊನೆಗೆ ಒಂದೆಡೆ ಆಕೆ ಬಯಸಿದ ನೀರು ಇತ್ತು  ಅಲ್ಲಿಯೇ ಬಗ್ಗಿ ಕೈಕಾಲು ತಿಕ್ಕಿಕೊಂಡಳು. ಮುಖವನ್ನು ತೊಳೆದಳು. ಆಗ ಅವಳ ಹಣೆಯ ಕುಂಕುಮ ಕೈಗೆ ತಾಗಿತು. ಅದೂ ತೊಳೆದು ಹೋಗಿತ್ತು. ಅದರ ಕೆಂಪು ಅಂಗೈಗೆ ಅಂಟಿತ್ತು. ಆ ಕೆಂಪು ಅವಳ ಮನಸ್ಸನ್ನು ಕದಡಿಸಿತು. ಕ್ಷಣಹೊತ್ತು ತನ್ನ ಕೆಂಪು ಅಂಗೈಗಳನ್ನು ನೋಡುತ್ತ

ನಿಂತಳು "ನಾನು ಇಲ್ಲಿ ಈ ನೀರಲ್ಲಿ ಮುಖ ತೊಳೆಯಬಾರದಿತ್ತು ಹಣೆಯ ಕುಂಕುಮ ತೊಳೆದು ಹೋಯಿತು ಕುಂಕುಮವಿಲ್ಲದೆ ನನ್ನಂಥ ಸೌಭಾಗ್ಯವತಿಯರು ಹೆಜ್ಜೆ ಮುಂದೆ ಹಾಕಬಾರದು ಥೂ ನನ್ನ ಬುದ್ಧಿಯೇ!" ಎಂದು ಮನಸ್ಸಿನಲ್ಲೇ ತನ್ನನ್ನು ಹಳಿದಳು ಕೈಗಳನ್ನು ಮತ್ತೊಮ್ಮೆ ತೊಳೆದಳು ಮುಂದಕ್ಕೆ ಇರುವ ಅಬ್ಬಿಯ ಆವರಣವು ಆಕೆಯ ದೃಷ್ಟಿಯನ್ನು ಹೇಗೋ ಸೆಳೆದುಕೊಂಡಿತು ಆಕ ಅಬ್ಬಿಯನ್ನೇ ನೋಡುತ್ತ ಮುಗ್ಧಳಾಗಿ ನಿಂತಳು ಸಂಜೀವಿಗೆ "ಮದುಮಗಳ ಅಬ್ಬಿ"ಯ ಗುರುತು ಇಲ್ಲವೇ ? ಆದರೆ ಆಕೆ ನಿಂತು ನೋಡುವಾಗ ಅವಳ ದೃಷ್ಟಿಯಲ್ಲಿ ಅಂಥ ಹೊಸತನವಿತ್ತು ಅವಳು ನಿಂತು ನಿರೀಕ್ಷಿಸುತ್ತಿರುವ ಭಂಗಿಯಲ್ಲಿ ಯಾವ ಮೋಹಕತೆಯೂ ಇರಲಿಲ್ಲ ನಿಜ ಆದರೂ ಅವಳು ಅಬ್ಬಿಯನ್ನು ಅಪರಚಿತಳಂತೆ ನಿಂತು ಹುಚ್ಚಳಾಗಿ ನೋಡುತ್ತಿದ್ದಳು ಕ್ಷಣಕಾಲ ಅವಳಿಗೆ ತಾನೆಲ್ಲಿದ್ದೇನೆಂಬುದೂ ತಿಳಿಯಲಿಲ್ಲ ದಿನಕ್ಕೆ ಸಾವಿರಾರು ಸಲ ಮದುಮಗಳ ಅಬ್ಬಿಯನ್ನು ಅವಳು ಈಕ್ಷಿಸುತ್ತಿದ್ದಳು ಇಂದು ಅವಳಿಗೆ ಅದರ ಬಗ್ಗೆ ಕರುಣೆ ಹುಟ್ಟಿತು

ಮಳೆಗಾಲದಲ್ಲಿ ಮದುಮಗಳಂತೆ ಮೆರೆಯುವ ಅಬ್ಬಿ ಇಂದು ಹೀಗೆ ಬತ್ತಿ—ಬಚ್ಚಿ ಹೋಗಿದ್ದಾಳಲ್ಲ! ಇದೇ ಭಾವನೆ ಸಂಜೀವಿಯ ಮನಸ್ಸಿಗೆ ಚುಚ್ಚಿತು ಇಂದು ಬರಿದಾದ ತಾವು, ಅಲ್ಲಿ ಹಿಂದೆ ಹೇಗೆ ಶೋಭಿಸುತ್ತಿತ್ತು! ಇಂದು ಆಕೆ ನಿಂತ ಮುಂದಿನ ಕೊರಕಲು ಕಲ್ಲುಗಳ ಕಣಿವೆ ಮುರಿದ ಅಸ್ಥಿ ಪಂಜರದ ಭೀಕರತೆಯನ್ನು ತೋರತೊಡಗಿದೆ. ಹಿಂದೆ ಅಲ್ಲಿಂದ ನಲಿದಾಡಿ ಉರುಳುವ ನೀರು ಅರ್ಭಟಿಸಿ ತಾಂಡವ ಆಡುತ್ತಿತ್ತು! ಈಗ ಅದು ಇಲ್ಲ ಆ ನೀರು ಇಲ್ಲದ್ದರಿಂದ ಬೇರೆ ಸೊಬಗೂ ಮಾಯವಾಗಿದೆ ಇತ್ತ ಕತ್ತಲು ಬೇಗಬೇಗ ಕವಿಯುತ್ತಿತ್ತು ಅಲ್ಲಿಯ ದೃಶ್ಯ ನಿಮಿಷ ನಿಮಿಷಕ್ಕೂ ನೀರ ವತೆಯಿಂದ ನಂದಿ ಹೋಗುತ್ತಲೂ ಇತ್ತು. ಆದರೂ ಸಂಜೀವಿ ಅತ್ತ ಇಟ್ಟ ಕಣ್ಣುಗಳನ್ನು ತೆಗೆಯಲಾರಳು. ಅವಳಿಗೂ ಆ ಅಬ್ಬಿಯ ಜೀವನ ತನ್ನಂತೆ ಇದೆ ಎಂದು ಅನಿಸಿರಬಹುದು ಆಗ ಅವಳ ಕಣ್ಣುಗಳಿಂದ ಒಮ್ಮೆಲೇ ಎರಡು ಹನಿ ನೀರು ಕೆಳಗೆ ಅಬ್ಬಿಯ ನೀರಲ್ಲಿ ಬಿದ್ದಿತು "ನನ್ನ

ಕಣ್ಣೀರ ಹೊಂಡದಲ್ಲಿ ನೀನೂ ನೀರು ಚೆಲ್ಲಿದೆಯಾ ?" ಎನ್ನುವಂತೆ ಅಬ್ಬಿ ಇವಳಿಗೆ ಮೌನವಾಗಿ ಉತ್ತರಿಸಿರಬೇಕು. ಆಗ ಒಮ್ಮೆಲೇ ಸಂಜೀವಿಯ ಬಾಯಿಂದ-- "ನಿನ್ನಂತೆ ನಾನೂ ಕಾದು ಕುಳಿತೆ !" ಎಂಬ ನುಡಿಗಳು ತುಟಿಜಾರಿ ಬಿದ್ದವು ಆಕೆಗೆ ತಾನು ಮಾತಾಡಿದ್ದೂ ತಿಳಿಯಲಿಲ್ಲ ಸ್ವಲ್ಪ ಹೊತ್ತು ಪುನಃ ಮೌನದಿಂದ ಕಳೆಯಿತು ಅಷ್ಟರಲ್ಲಿ ಅಲ್ಲಿಗೆ ಯಾರದೋ ಒಂದು ಎಮ್ಮೆ ಬಂದು "ವ್ಯಾಂ" ಎಂದು ಒದರಿತು ಪುಣ್ಯಾಕ್ಕೆ ಈಕೆ ತೆಗೆದಿಟ್ಟ ಹುಲ್ಲನ್ನು ಧ್ವಂಸ ಮಾಡುವ ಸಾಹಸಕ್ಕೆ ಅದು ಹೋಗಲಿಲ್ಲ ಸಂಜೀವಿ ಅದರ ಕೂಗಿಗೆ ಎಚ್ಚತ್ತಳು ಆದರೂ ಭಾವನಾ ಸಮಾಧಿಯಲ್ಲೇ ಇದ್ದಳು ತಿರುಗಿ ಹಾಗೇ ಆಕೆ ನಿಂತಳು ಅವಳ ಮನದಲ್ಲಿ ಹಲವಾರು ಭಾವನೆಗಳು ಉಕ್ಕೇರುತ್ತ ಅಡಗುತ್ತಿದ್ದವು. ಆದರೆ ಆಕೆಗೆ ಇಂದು ಗೊತ್ತಾಯಿತು—ಈ ಅಬ್ಬಿಗೂ ಒಂದು ಜೀವನವಿದೆ, ಒಂದು ಒಲವು ಇದೆ, ಒಂದು ಚೆಲುವು ಇದೆ, ಒಂದು ಮದುಮಗಳ ಮೋಹಕತೆಯೇ ಇದೆ—ಎಂದು ! ಅವಳ ಜೀವನದಲ್ಲಿ ನೂರಾರು ಸಲ ಮದುಮಗಳಾಗಿ ಮೆರೆಯುವ ಪುಣ್ಯವಿದೆ. ತನ್ನ ಬಾಳಿಗೆ ಅಂಥ ಯೋಗ್ಯತೆ ಇಲ್ಲ ತನಗೆ ಒಮ್ಮೆ ಮದುವೆಯಾದ ಮೇಲೆ ಮುಂದೆ ಮದುಮಗಳು ಆಗುವ ಸಂದರ್ಭವಿಲ್ಲ. ತನ್ನ ಬಾಳಿಗೆ ಒಂದೇ ಮದುವೆ, ಒಂದೇ ಹರಯ, ಒಂದೇ ಬಾಲ್ಯ—ಎಲ್ಲವೂ ಒಂದೇ. ತನ್ನ ಪಾಲಿಗೆ ದೊರೆತ ಒಂದೇ ಹರಯವೂ ಹೀಗೆ ಬರಡಾಗಿ ನಿಂತಿದೆಯಲ್ಲ! ನಿಂತಿಲ್ಲ—ಅದು ಹಳೆಯದಾಗುತ್ತ ನಡೆದಿದೆ. ಮುಂದೆ ಅದಕ್ಕೆ ಹೊಸತನವಿಲ್ಲ ಹೀಗೆ ನಾನಾ ವಿಧವಾಗಿ ಚಿಂತಿಸಿ ಚಿಂತಿಸಿ ಕೊನೆಗೆ "ನೀನು ಪುಣ್ಯವಂತಳು !" ಎಂದು ಆಕೆಯನ್ನು ಈಕೆ ಹರಸಿದಳು. ಕಟ್ಟಕಡೆಗೆ ಸಂಜೀವಿಯ ಚಿತ್ತ "ನಾನು ಅಂದು ಮದುಮಗಳಾಗಿರುವಾಗ ನಿನ್ನ ಹತ್ತಿರ ಯಾಕೆ ಬರಲಿಲ್ಲ? ನೀನು ಆಗ ನನ್ನನ್ನು ಪ್ರೀತಿಯಿಂದ ಒಯ್ಯುತ್ತಿದ್ದೆ" ಎಂದು ಒಮ್ಮೆ ಪ್ರಶ್ನಿಸಿತು. ಆಕೆ ಮದುಮಗಳಾದಾಗ ಅವಳ ದೊಡ್ಡಮ್ಮ "ಮಗೂ ನೀನು ಅಬ್ಬಿಯ ಬಳಿ ಹೋಗಬೇಡಮ್ಮಾ" ಎಂದು ಎಚ್ಚರಿಸಿದ ಮಾತು ನೆನಪಿಗೆ ಬಂದಿತು ಅವುಗಳ ಪುನರಾವರ್ತನೆ ಅವಳನ್ನು ಕುಕ್ಕಲು ಪ್ರಾರಂಭಿಸಿತು. "ನಾನು ಅಂದೇ ನಿನ್ನಲ್ಲಿ ಬಂದಿದ್ದರೆ.................." ಎನ್ನುವ ಅಸ್ಪಷ್ಟವಾದ ಶಬ್ದಗಳನ್ನು ಅವಳ ತುಟಿಗಳು ಚೆನ್ನಾಗಿ ಹೊರಗೆ

ದಾಟಿಸಲಿಲ್ಲ ಮತ್ತೆ ಎರಡು ಕಣ್ಣೀರ ಹನಿಗಳನ್ನು ಅಬ್ಬಿಗೆ ಅರ್ಪಿಸಿದಳು ಆಗ ಮನೆಯಿಂದ “ ಸಂಜೀವೀ ” ಎಂಬ ಕೂಗು ಕೇಳತೊಡಗಿತು ಕತ್ತ-ಲೆಯೂ ಆಗಿತ್ತು ಸಂಜೀವಿ ಅತ್ತಿತ್ತ ನೋಡಿದಳು ಅವಳಿಗೆ ಏನೂ ಕಾಣಿಸಲಿಲ್ಲ ಎಲ್ಲವೂ ಕತ್ತಲಿನಂತೆ ಕಾಣಿಸಿತು ಎತ್ತ ಹೋಗಬೇಕೆಂದು ತಿಳಿಯಲಿಲ್ಲ “ ಅಯ್ಯೋ ! ಅಯ್ಯೋ ! ” ಎಂದು ಚಿಟ್ಟನೆ ಚೀರಿದಳು ಈ ಬೊಬ್ಬೆ ಎಡಹಿತ್ತಲಿಗೆ ಕೇಳಿಸಿತು ಆದರೆ, ಅಣ್ಣಪ್ಪಯ್ಯ ಅಲ್ಲಿಗೆ ಬರುವುದ ರೊಳಗೆ, ಅಬ್ಬಿಯ ಮೇಲಿನ ಗದ್ದೆಯ ಮನೆಯವರು ಬಂದು ಅಲ್ಲಿ ನೆರೆ ದಿದ್ದರು “ ಏನಾಯಿತು ? ಏನಾಯಿತು ? ” ಎಂದು ಎಲ್ಲರೂ ಕೇಳುತ್ತಿದ್ದರು ಅದಕ್ಕೆ ಸಂಜೀವಿ “ ಏನೂ ಇಲ್ಲ ಆ ಎಮ್ಮೆ ಹಾಯಲಿಕ್ಕೆ ಬಂತು ” ಎಂದಳು ನಿಜಸ್ಥಿತಿಯನ್ನು ಹೇಳಲಿಲ್ಲ ಹೇಳಿದರೂ ಅವರಿಗೆ ಅದೆಲ್ಲ ತಿಳಿ ಯುವಂತೂ ಇರಲಿಲ್ಲ ಅಣ್ಣಪ್ಪಯ್ಯ ಮಗಳನ್ನು ಕರೆದುಕೊಂಡು ಮನೆಗೆ ನಡೆದರು ಹುಲ್ಲಿನ ಬುಟ್ಟಿಯನ್ನು ತಾವೇ ಹೊತ್ತುಕೊಂಡಿದ್ದರು “ ಏನಾ ಯಿತು ಸಂಜೀವಿ ? ಏನಾಯಿತು ? ” ಎಂದು ಹಾದಿಯುದ್ದಕ್ಕೂ ಮಗಳಿಗೆ ಪ್ರಶ್ನಿಸುತ್ತ ಹೊರಟರು ಸಂಜೀವಿ ಆದ ಸಂಗತಿಯನ್ನು ತಿಳಿಸಲಿಲ್ಲ ಬದಲು ತಂದೆಯ ಕೈಯಿಂದ ಬುಟ್ಟಿಯನ್ನು ಕಸೆದುಕೊಳ್ಳಲು ಹಂಬಲಿಸಿ ದಳು ಅಣ್ಣಪ್ಪಯ್ಯ ಅದನ್ನು ಆಕೆಗೆ ಕೊಡಲಿಲ್ಲ ಹಾಗೇ ಅವರು ಮನೆ ಯನ್ನೂ ತಲಪಿದರು. ಹುಲ್ಲಿನ ಬುಟ್ಟಿಯನ್ನು ಹಟ್ಟಿಯಲ್ಲಿ ಇಟ್ಟು ಬೇಗನೆ ಬಂದರು—ಅಣ್ಣಪ್ಪಯ್ಯ ಆಗ ಸಂಜೀವಿ ಮನೆಯಲ್ಲಿ ದೀಪ ಬೆಳಗಿದಳು. ತನಗೆ ಏನೂ ಆಗಲಿಲ್ಲವೆಂದು ತಂದೆಗೆ ಖಚಿತವಾಗಲೆಂದು ಅವಳು ಮನೆ ಗೆಲಸಗಳನ್ನು ಆಸ್ಥೆಯಿಂದ ಮಾಡಹತ್ತಿದಳು. ಆದರೆ ಅಣ್ಣಪ್ಪಯ್ಯನವರ ಮನಸ್ಸು ಕೇಳದು ಮಗಳಿಗೆ ಎಲ್ಲಿಯಾದರೂ “ ನೀರಕನ್ಯೆ ” ಬಡೆಯಿತೋ— ಎಂಬುದು ಅವರು ಸಂಶಯ. ತನಗೆ ಯಾವುದೂ ತಿಳಿಯುದಲ್ಲ ! ಒಟ್ಟೆ ನಲ್ಲಿ ಮನೆಯಲ್ಲಿ ಒಂದು ಹಿರಿಯ ಹೆಣ್ಣು ಇರಬೇಕು. ಅದಿಲ್ಲದೆ ಹೋದರೆ ಆಗುವ ಗತಿ ಹೀಗೆ ಅವಳು ಇದ್ದಿದ್ದರೆ, ತಾನಿಷ್ಟು ಚಿಂತಿಸಬೇಕಾಗಿರಲಿಲ್ಲ. ಅದಕ್ಕೆಲ್ಲ ಅದೃಷ್ಟಬೇಕು ಎಂದು ತನ್ನ ಅಳಿದ ಪತ್ನಿಯ ನೆನಪನ್ನೂ ತಂದು ಕೊಂಡರು ಮಗಳಿಗೆ ಏನಾಯಿತೆಂಬುದು ಅವರಿಗೆ ತಿಳಿಯದೆ ಉಳಿ ಯಿತು.

ಪೂರ್ಣ ಕತ್ತಲಾಯಿತು ಅಣ್ಣಪ್ಪಯ್ಯನವರ ಮಗ, ರಾಮದಾಸ ಬರುವ ಹೊತ್ತಾಗಿತ್ತು ಅವನು ಬರಲಿಲ್ಲ ರಾಮದಾಸ ಅಲ್ಲಿಯೇ ಹತ್ತಿರದ ಪೇಟೆಯಾದ ಅಶ್ವತ್ಥಪುರ ಶಾಲೆಯ ಮಾಸ್ತರ ಆತ ಸಾಲೆ ಬಿಟ್ಟೊಡನೆ ಮನೆಗೆ ಬರುವ ಚಾಳಿಯವನಲ್ಲ ಪೇಟೆಯಲ್ಲಿ ಅವರಿವರೊಡನೆ ಹರಟೆ ಕೊಚ್ಚಿ, ಕತ್ತಲಾದಮೇಲೆ ಮನೆಯ ಹಾದಿ ಹಿಡಿಯುವವನು. ಇಂದು ಸಾಲೆಯ ಉಪಾಧ್ಯಾಯರ ಪೈಕಿ ಒಬ್ಬರ ' ಮದುವೆಯ ಟೀಪಾರ್ಟಿ ' ಇದ್ದುದರಿಂದ ರಾಮದಾಸ ಮನೆಗೆ ಬರಲು ಎಂದಿಗಿಂತ ಒಂದು ಗಂಟೆ ತಡ ಆಯಿತು ಸಾವಕಾಶವಾಗಿ ಮನೆಯ ಹಾದಿ ತುಳಿಯುತ್ತ ಬಂದ. ಮನೆಯ ಅಂಗಳಕ್ಕೆ ಕಾಲಿರಿಸಿದೊಡನೆ ಅವನಿಗೆ ತಂದೆಯ ಭೇಟಿಯಾಯಿತು

" ಇವತ್ತೇನು ಇಷ್ಟು ತಡಮಾಡಿದೆ ? ನಿನ್ನ ಹಾದಿ ನೋಡಿ ನೋಡಿ ಸಾಕಾಯಿತು " ಎಂದು ಅಣ್ಣಪ್ಪಯ್ಯ ಗಾಬರಿಯಿಂದ ಮಾತಾಡಿಸಿದರು

" ಯಾಕೆ ? ಏನು ದನ ಹಟ್ಟಿಗೆ ಬರಲಿಲ್ಲವೋ? " ಎನ್ನುತ್ತ ರಾಮದಾಸ ಮನೆಯೊಳಗೆ ಹೋಗಲು ಸಿದ್ಧನಾದ. ಚಾವಡಿಯನ್ನೂ ಏರಿದ. ಕೊಡೆಯನ್ನು ಅಲ್ಲಿಯೇ ಗೋಡೆಯ ಗೂಟಕ್ಕೆ ಇಳಿಯಬಿಟ್ಟ. ಅವನ ಹಿಂದೇ ಅಣ್ಣಪ್ಪಯ್ಯ ಬೇಗ ಬಂದು " ಈಗ ಒಂದು ಕೆಲಸ ಮಾಡಬೇಕಲ್ಲ " ಎಂದರು.

" ಏನು ? "

" ಬೇಗಹೋಗಿ ಮೂಡುಮನೆಯಿಂದ ನಿನ್ನ ದೊಡ್ಡಮ್ಮನನ್ನು ಕರೆತರಬೇಕು "

" ಏನೆಂದು ಹೇಳಲಿ ? "

" ಸಂಜೀವಿಗೆ ಸ್ವಲ್ಪ ಮೈ ಬಿಸಿಯಾಗಿದೆ ಅಂತೆ, ಅಬ್ಬಿಯಲ್ಲಿ ಹೆದರಿದಳಂತೆ ಅದಕ್ಕೆ ಬೇಗ ನೀವು ಬಂದು ನೋಡಿ ಹೋಗಬೇಕೆಂದು ಹೇಳಿದರು ಅಂತ ಹೇಳು "

" ಹೆದರಿದರೆ ಜ್ವರ ಬರುತ್ತದೆಯೇ ? ನಿಮ್ಮ ಗೊಡ್ಡುನಂಬಿಗೆಗೆ ತಲೆ ಬುಡವೇಇಲ್ಲ. ದೊಡ್ಡಮ್ಮ ಬಂದು ಏನು ಮಾಡುವುದು ? ಇವಳ ಜ್ವರ ಅವಳಿಗೆ ಹೊರಲಿಕ್ಕೆ ಸಾಧ್ಯವೋ ? "

" ನಿಮಗೆ ಸ್ವಲ್ಪ ವಿದ್ಯೆಬಂದರೆ ಸಾಕು ಎಲ್ಲ ಇಂಗ್ಲೀಷೆ ಮಾಡು ತ್ತೀರಿ! ದೇವರು ದೆವ್ವಗಳ ಮೇಲೆ ಚೂರೂ ವಿಶ್ವಾಸ ಇಡುವುದಿಲ್ಲ ಅದೆಲ್ಲ ಸುಳ್ಳು ಎನ್ನುತ್ತೀರಿ ಥೂ ನೀನೊಬ್ಬ! ಈಗ ನೀನು ಹೋಗುತ್ತಿಯೋ ಅಥವಾ ನಾನೇ ಹೋಗಲೇ ? "

" ಕಾಂತಪ್ಪನನ್ನು ಕರೆದು ಅವನನ್ನೇ ಕಳುಹಿಸುತ್ತೇನೆ "

" ಕಾಂತಪ್ಪ ಮನೆಯಲ್ಲಿ ಇಲ್ಲ ಎಲ್ಲಿಯೋ ಕೋಳಿಕಟ್ಟಕ್ಕೆ ಹೋಗಿ ದ್ದಾನಂತೆ ಅವನಿದ್ದರೆ ನಿನಗೆ ಹೇಳುತ್ತಿದ್ದಿಲ್ಲ "

" ಈಗಲೇ ಬರಲಿಕ್ಕೆ ಹೇಳಬೇಕೋ ? " ಎನ್ನುತ್ತ ರಾಮದಾಸ ಮೂಡುಮನೆಗೆ ಹೊರಡಲು ಅನುವಾದ ತನ್ನ ಸಾಲೆಗೆ ಹೋಗುವ ಉಡುಗೆ ತೊಡುಗೆಗಳನ್ನು ತೆಗೆದು ಅಲ್ಲಿಯೇ ಚಾವಡಿಯ ಗೋಡೆಗೆ ನೇತಾಡಿಸಿದ ಮನೆ ಯಲ್ಲಿ ತೊಡುವ ನಿತ್ಯದ ಸಾದಾ ಉಡುಗೆ ತೊಟ್ಟು, ಬ್ಯಾಟ್ರಿ ಹಿಡಿದುಕೊಂಡ. ಅದು ಬೆಳಕು ಮಾಡುತ್ತದೋ ಇಲ್ಲವೋ ನೋಡಲು ಒಮ್ಮೆ ಅದರ ಗುಂಡಿ ಒತ್ತಿದ. ಅದರ ಪ್ರಕಾಶ ಎಲ್ಲೆಲ್ಲೂ ಬೆಳಕು ಮಾಡಿತು. ಈ ಬೆಳಕು ಅವನ ತಂದೆಗೆ ಅಸಮಾಧಾನ ಹುಟ್ಟಿಸಿತು. ಅಣ್ಣಪ್ಪಯ್ಯನವರಿಗೆ ಅದನ್ನು ನೋಡು ವುದಕ್ಕೆ ಆಗಲಿಲ್ಲ ಮಗ ಬ್ಯಾಟ್ರಿಯ ಬೆಳಕಿನಿಂದು ಮೂಡುಮನೆಗೆ ಹೋಗ ಬಾರದು ಅಲ್ಲದೆ ಅದರ ಅವಶ್ಯಕತೆ ಈಗ ಇಲ್ಲ ತಾನಾದರೆ ಕತ್ತಲಲ್ಲೇ ಹೋಗಿಬರುತ್ತಿದ್ದೆ – ಎಂದೂ ಅವರಿಗೆ ಅನಿಸಿತು ನಿಜಕ್ಕೂ ಅವರು ಕತ್ತ ಲಲ್ಲೇ ದಾರಿನಡೆಯುವ ಶೂರರು. ಆದರೆ ಮಗ ಬ್ಯಾಟ್ರಿಯ ಪವರ್ ಸುಡು ವುದು – ಅವರಿಗೆ ಸರಿದೋರಲಿಲ್ಲ. ಯಾಕಂದರೆ - ಬಚ್ಚಲುಕೊಟ್ಟಿಗೆಯ ಅಟ್ಟದ ಮೇಲೆ ಬೇಕಾದಷ್ಟು ಸೂಟೆಗಳು ಇವೆ. ಅವುಗಳನ್ನು ಉರಿಸಿದ ರಾದರೂ ಅಡ್ಡಿಯಿಲ್ಲ ಅವುಗಳಿಗೆ ಹಣ ವ್ಯಯವಾಗಿಲ್ಲ ಅವುಗಳಿಂದ ಹಣ ಬರುತ್ತದೆಂಬುದೇನೋ ನಿಜ. ಆದರೆ ಹಣಕೊಟ್ಟು ತಂದ ಬ್ಯಾಟ್ರಿಯ ಪವರು ಹಾಳಾಗುವುದು ಅವರಿಗೆ ಬೇಡವಾಗಿತ್ತು. ಅದಕ್ಕಾಗಿ " ಬ್ಯಾಟ್ರಿ ಯಾಕೆ ? " ಎಂದು ಸ್ವಲ್ಪ ಜೋರಿನಿಂದ ಕೇಳಿದರು

" ಹೊರಗೆ ಕತ್ತಲು ಕಣ್ಣು ಕುಕ್ಕುವಷ್ಟು ಇದೆ " ಎಂದು ಉತ್ತರಿಸುತ್ತ ಮಗ ಅಂಗಳಕ್ಕೆ ಇಳಿದ - ಬ್ಯಾಟ್ರಿ ಹಿಡಿದುಕೊಂಡೇ

" ನಾನಾದರೆ ಕೈಯಲ್ಲಿ ಬೆಳಕಿಗೆ ಏನೂ ಇಲ್ಲದೆ ಹೋಗಿಬರುತ್ತಿದ್ದೆ ಆ ಬ್ಯಾಟ್ರಿ ಯಾಕೆ ? ಅದನ್ನು ಅಲ್ಲಿಯೇ ಒಯ್ದು ಇಡು ಮೊನ್ನೆ ಶುಕ್ರವಾರ ದಿನವೇ ಅದಕ್ಕೆ ಮೂಡುಬಿದ್ರೆ ಸಂತೆಯಲ್ಲಿ ಪವರ್ ಹಾಕಿಸಿದ್ದು ! ಅದನ್ನು ಅಲ್ಲಿ ಇಡು ಬೆಳಕಿಗ ಸೂಟೆ ಒಯ್ಯಬಾರದೇ ? ಬೇಕಾದಷ್ಟು ಕಟ್ಟಿಟ್ಟಿದ್ದು ಇವೆ ಬ್ಯಾಟ್ರಿಯಲ್ಲಿ ಪವರ್ ಇದ್ದರೆ ಹಾಳಾಗುತ್ತದೆಯೋ ? ರಾತ್ರಿಯಲ್ಲಿ ಫಕ್ಕನೆ ಅನಪತ್ಯಕ್ಕೆ ಅದು ಬೇಕಂದ್ರೆ ಯಾರೂ ಕೊಡುವುದಿಲ್ಲ ನಾನು ಸೂಟೆ ಹೊತ್ತಿಸಿ ತಂದುಕೊಡುತ್ತೇನೆ " ಎಂದು ಅಣ್ಣಪ್ಪಯ್ಯ ಕತ್ತಲಲ್ಲೇ ಬಚ್ಚಲು ಕೊಟ್ಟಿಗೆಗೆ ಹೋದರು ಹೋದವರೇ ಸೂಟೆಯನ್ನೂ ತಂದರು. ಅಂಗಳದಲ್ಲಿ ಮಗ ಇದ್ದಾನೋ ಇಲ್ಲವೋ ಎಂಬ ನಿರ್ಧಾರಕ್ಕೆ ಅವರು ಹೋಗ ಲಿಲ್ಲ ಸೀದಾ ಮನೆಯೊಳಗೆ ಹೊಕ್ಕು ಅಡುಗೆ ಮನೆಯಲ್ಲಿ ಉರಿಯುವ ಹೊನ್ನೆಯ ಎಣ್ಣೆಯ ದೀಪಕ್ಕೆ ಒಯ್ದು ಸೂಟೆಯನ್ನು ಹಿಡಿದರು ಅಂತೂ ಸೂಟೆಗೆ ಬೆಂಕಿ ಹತ್ತಿತು ಬೇಗನೆ ಹೊರಗೆ ಬಂದರು – ಸೂಟೆ ಉರಿಸುತ್ತ. ಅವರು ಹೊರಗೆ ಬಂದು ಅಂಗಳದಲ್ಲಿ ನಿಂತು ನೋಡುವಾಗ, ಅಬ್ಬಿಯ ಹತ್ತಿರ ರಾಮದಾಸ ಬ್ಯಾಟ್ರಿ ಉರಿಸಿಕೊಂಡು ಹೋಗುವುದು ಕಂಡಿತು. "ದಾಸಾ"ಎಂದು ಕರೆದರು. ಮಗ ಹಿಂದೆ ಬರಲಿಲ್ಲ " ಪವರ್ ಉರಿಸಿಕೊಂಡೇ ಹೊರಟ ದ್ದಾನಲ್ಲ ! ನಾನೇ ಹೋಗಬೇಕಿತ್ತು ! ಇವನಿಗೆ ಈಗ ತಿಳಿಯುವುದಿಲ್ಲ. ನಾಳೆ ತನ್ನ ಕೈಯಿಂದ ದುಡಿದು ತಿನ್ನುವಾಗ ಗೊತ್ತಾಗುತ್ತದೆ. ಈಗ ಅದೆಲ್ಲ ಯಾಕೆ ? " ಎಂದು ಏನೇನೋ ಹೇಳಿದರು ಕೂಡಲೆ ಸೂಟೆಯನ್ನು ಆರಿ ಸಿದರು. ಅದನ್ನು ಅಲ್ಲಿ ಚೆಲ್ಲಿ ಒಳಗೆ ಹೋದರು ವ ಗಳ ಹಣೆಯಮೇಲೆ ಕೈಯಿಟ್ಟರು. ಅವರ ಜೀವ ಹೇಗೋ ಆಯಿತು " ಸಂಜೀವಿ, ಸಂಜೀವಿ " ಎಂದು ಕರೆದರು " ಓ " ಅಂದಳು ಸಂಜೀವಿ

" ಏನಾಗುತ್ತದೆ ? ಈಗ ಹೇಗಿದೆ ? " ಎಂದು ಪ್ರಶ್ನಿಸಿದರು.

" ಏನೂ ಇಲ್ಲ ನಿಮ್ಮದು ಊಟ ಆಯಿತೇ ? ದಾಸ ಬಂದನೇ ? ಅವನಿಗೆ ಇಟ್ಟ ಅವಲಕ್ಕಿ – ಉಪ್ಕರಿ ಅಲ್ಲಿ ಒಲೆಯ ಮೇಲಿನ ಹಲಗೆಯ ಮೇಲೆ ಗಡ್ಡಾವಿನಲ್ಲಿ ಇದೆ ಎನಗೆ, ಮೈ ಜುಮ್ ಜುಮ್ ಎನ್ನುತ್ತಿದೆ. ಬಹುಶಃ ಶೀತ ಆಗುತ್ತದೆಂದು ಕಾಣುತ್ತದೆ. ನೀವೆಲ್ಲ ಊಟಮಾಡಿ. ನಾನು

ಅಣ್ಣಪ್ಪಯ್ಯನವರ ಕರುಳನ್ನು ಹಿಂಡಿದವು "ಅವಳು ಇರುತ್ತಿದ್ದರೆ. . ನಾನು ಹೀಗೆಲ್ಲ ಕಷ್ಟಪಡಲಿಕ್ಕೆ ಇತ್ತೋ ?" ಎಂದಿತು ಅವರ ಅಂತರಾತ್ಮ

"ನಾವೇ ಬಡಿಸಿಕೊಂಡು ಊಟಮಾಡುತ್ತೇವೆ ಸುಮ್ಮನೆ ಮಲಗು. ಇನ್ನೊಂದು ಕಂಬಳಿ ಕೊಡಲೇ ? ಚಳಿಯಾಗುತ್ತದೆಯೋ ?" ಎಂದು ಕೇಳಿದ್ದಕ್ಕೆ ಸಂಜೀವಿ ಏನೂ ಬೇಡವೆಂದು ಉತ್ತರಿಸಿದಳು ಮನಸ್ಸಿನಲ್ಲಿ ನೂರಾರು ವಿಚಾರಗಳನ್ನು ಚಿಂತಿಸುತ್ತ ಅಣ್ಣಪ್ಪಯ್ಯ ಹೊರಗೆ ಬಂದರು ಅಂಗಳಕ್ಕೆ ಇಣಿಕಿದಾಗ ಅವರ ಕಣ್ಣಿಗೆ ಬ್ಯಾಟ್ರಿಯ ಬೆಳಕು ಬಿತ್ತು ಒಮ್ಮೆ ಸಿಟ್ಟೊ ಬಂತು ಯಾಕಂದರೆ ತನ್ನ ಕಣ್ಣಿಗೆ ಬ್ಯಾಟ್ರಿಯ ಪ್ರಕಾಶ ಕುಕ್ಕಿಸಿದ್ದಕ್ಕೆ ಅಲ್ಲ, ಮಗ ಹೀಗೆಲ್ಲ ಬ್ಯಾಟ್ರಿ ಪವರ್ ಹಾಳುಮಾಡುತ್ತಾನಲ್ಲ — ಎಂದು ಅದಕ್ಕಾಗಿ "ಅಂಗಳದಲ್ಲೂ ನಿನಗೆ ಬ್ಯಾಟ್ರಿ ಬೇಕೇ! ಅಬ್ಬ ನಿನ್ನ ಬೂಟೀ ? ಒಂದು ಪವರಿಗೆ ಈಗ ನಾಲ್ಕಾಣೆ ಕೊಡಬೇಕಾಗುತ್ತದೆ ಅದು ದುಡ್ಡು ಅಲ್ಲವೇ ಮಾಣಿ" ಎಂದು ಗಡಿಬಿಡಿಯಿಂದ ಹೇಳಿದರು ಅಷ್ಟರಲ್ಲಿ ಆ ಬ್ಯಾಟ್ರಿಯೇ ಆರಿತು "ನನ್ನ ಕೋಳಿ ಗೆದ್ದಿತು! ನೀವು ಹೇಳಿದ್ದು ನಿಜವಾಯಿತು – ಧನಿಯರೇ" ಎನ್ನುತ್ತ ಕಾಂತಪ್ಪ ಚಾವಡಿಯತ್ತ ಬಂದ "ಕಾಂತಪ್ಪನೇ! . . . ಬಾ, ಬಾ–ನಾನು ನಮ್ಮ ದಾಸ ಎಂದು ತಿಳಿದು ಏನೋ ಹೇಳಿದೆ ಬಾ ಒಳಗೆ ಕೂಡು." ಎಂದು ಕಾಂತಪ್ಪನನ್ನು ಸ್ವಾಗತಿಸಿ, ಚಾವಡಿಯೊಳಗೆ ಪ್ರವೇಶ ಮಾಡಲು ಅಪ್ಪಣೆಕೊಟ್ಟರು — ಅಣ್ಣಪ್ಪಯ್ಯ. ಅಣ್ಣಪ್ಪಯ್ಯನವರ ಮನಸ್ಸಿನ ಸ್ಥಿತಿಯನ್ನು ಅರಿಯದೆ ಕಾಂತಪ್ಪ ತನ್ನ ಹರಟೆಯನ್ನು ಪ್ರಾರಂಭಿಸಿದ

"ನೀವು ಏನೇ ಹೇಳಿ ಧನಿಗಳೇ, ನಮ್ಮ ಕರೆಯಲ್ಲಿ—ಯಾಕೆ ಊರಲ್ಲೇ ಪಂಚಾಂಗ ನೋಡಿ ಜೋತಿಷ್ಯ ಹೇಳುವುದರಲ್ಲಿ ನಿಮಗೆ ಸರಿಯಾದ ಜನ ಇನ್ನೊಬ್ಬರು ಇಲ್ಲ ನೀವು ಒಂದೊಂದು ವೇಳೆಯಲ್ಲಿ ಹೇಳಿದರೆ—ಮುಂದೆ ಆಗುವುದನ್ನು ನೋಡಿ ಬಂದು ಹೇಳಿದಷ್ಟು ಖಾತ್ರಿಯಾಗಿರುತ್ತದೆ"

"ನಾನು ಬೇರೆಯವರಿಗೆಲ್ಲ ಹೇಳುತ್ತೇನೇನೋ ನಿಜ, ನನಗೆ ಹೇಳುವವರು ಯಾರೂ ಇಲ್ಲ ಎಲ್ಲ ನಮ್ಮ ನಮ್ಮ ಹಣೆಬರಹ" ಎಂದು ಅಣ್ಣಪ್ಪಯ್ಯ ನಿರುತ್ಸಾಹ ವ್ಯಕ್ತಪಡಿಸಿದರು.

" ಇವತ್ತು ಯಾಕೋ ಧನಿಗಳಿಗೆ ಉಲ್ಲಾಸವಿಲ್ಲದ ಹಾಗೆ ಕಾಣಿಸುತ್ತದೆ ಏನು, ಸಂಜೀವಮ್ಮ ಕಾಣಿಸುವುದಿಲ್ಲ ? "

" ಒಳಗೆ ಮಲಗಿದ್ದಾಳೆ. ಅದಕ್ಕೇ ಹೇಳಿದ್ದು ಎಲ್ಲ ನಮ್ಮ ನಮ್ಮ ಹಣೆಬರಹ ಎಂದು, ಅವಳು ಇದ್ದಿದ್ದರೆ ನನಗೆ ಇಷ್ಟು ಕಷ್ಟ ಇರುತ್ತಿರಲಿಲ್ಲ "

" ಏನಾಗಿದೆ ? "

" ಏನಾಗಿದೆ ಎಂದು ಹೇಳುವುದು ಮಹಾರಾಯಾ, ಮೈಮೇಲೆ ಕೈ ಯಿಡಲಿಕ್ಕೆ ಸಾಧ್ಯವಿಲ್ಲ ! ಅಷ್ಟು ಜ್ವರ ಕುದಿಯುತ್ತಿದೆ ಮೈ ಅನ್ನುವುದು ಕಾದ ಕಾವಲಿಯ ಹಾಗೆ ಆಗಿದೆ "

" ಎಲಾ ! ಆಗ ಮಧ್ಯಾಹ್ನ ನಾನು ಕೋಳಿ ಅಂಕಕ್ಕೆ ಹೋಗುವ ವರೆಗೆ ಸುಖಾಸಮನ ಇದ್ದರು ! ಇಷ್ಟು ಬೇಗ ಜ್ವರ ಬಂತೇ ? ಅದೆಂಥ ಜ್ವರ ದೇವರೇ ಅದು ! "

" ಎಂಥಾ ಜ್ವರವೋ ದೇವರಿಗೆ ಗೊತ್ತು ಅಬ್ಬಿಯಲ್ಲಿ ' ಅಯ್ಯೋ ' ಎಂದು ಬೊಬ್ಬಿಟ್ಟಳು ಸುಮಾರು ಸೂರ್ಯ ಮುಳುಗಿ ಅರ್ಧ ಗಂಟೆ ಆಗಿರ ಬಹುದು—ಆಗ. ಅಲ್ಲಿಂದ ಬಂದವಳು ಸ್ವಲ್ಪ ಹೊತ್ತು ಅತ್ತ ಇತ್ತ ಕೆಲಸ ಮಾಡಿದಳು. ಆ ಮೇಲೆ ಒಮ್ಮೆಲೇ ಹೋಗಿ ' ನನಗೆ ಚಳಿಯಾಗುತ್ತದೆ ' ಎಂದು ಹೇಳುತ್ತ ಮಲಗಿದಳು. ಜ್ವರ ಏರುತ್ತ ಬಂತು. ಏನೆಂದು ತಿಳಿಯುವು ದಿಲ್ಲ ಅದಕ್ಕೆ ಮೂಡುಮನೆಗೆ ದಾಸನನ್ನು ಕಳುಹಿಸಿದೆ. "

" ಬಹುಶಃ ಹೆದರಿರಬೇಕು. ಒಂದು ಸಣ್ಣ ಬಲಿ ತೆಗೆಯಿರಿ. ಆ ಅಬ್ಬಿಯಲ್ಲಿ ಅಮವಾಸೆ, ಆದಿತ್ಯವಾರ, ಮಂಗಳವಾರ ಮುಂತಾದ ದಿನಗಳಲ್ಲಿ ಸ್ವಲ್ಪ ಸೋಂಕು ಆಗುವ ಸಂಭವ ಇರುತ್ತದೆ ಆದರೂ ಇವತ್ತು ಬುಧ ವಾರ, ಅದು ಹೇಗೆ ಸೋಂಕು ಆಯಿತೋ ತಿಳಿಯದು. ಅದು ಎಲ್ಲ ಒಂದೊಂದು ವೇಳೆಯ ಗುಣ. "

" ಇಂಥ ಕಾಯಿಲೆಗಳಿಗೆಲ್ಲ ನಮ್ಮ ಗಡ್ಡದ ಅಳಿಯ ಗಂಡನ ಹಾಗೆ ಇದ್ದ. ಏನು ಮಾಡುವುದು ? ಅವನ ಬುದ್ಧಿ ಹೀಗಿದೆ—ಎಂದು ಯಾರಿಗೆ ಗೊತ್ತು ? "

" ಅವರೇ ! ಫಲಮಾರು ನನ್ನಿಭಟ್ಟರು ! ಅವರಂಥ ಪಂಡಿತ ಈ ಲೋಕದಲ್ಲೇ ಇಲ್ಲ ಯಾವ ಕಾಯಿಲೆಗೇ ಆಗಲಿ—ಅವರು ಔಷಧ ಕೊಡುವುದಿಲ್ಲ ಅನ್ನುವುದುಂಟೇ ? ಕುಲೆ, ಪಿಶಾಚಿಗಳನ್ನು ಅಂತೂ ಬೂದಿಯಿಂದಲೇ ಹಾರಿಸಿ ಬಿಡುತ್ತಿದ್ದರು ಅವರಂಥ ಜನ ಬಹಳ ಕಡಿಮೆ ಅವರು ಕೊಟ್ಟ ಔಷಧ ರಾಮಬಾಣ ನನಗೊಮ್ಮೆ ಕತ್ತಿ ತಾಗಿದ್ದಕ್ಕೆ ಒಂದು ಮದ್ದಿನ ಎಣ್ಣೆ ಬಿಸಿ ಮಾಡಿಕೊಟ್ಟಿದ್ದರು ! ಅಬ್ಬಾ ಅವರ ಮದ್ದೇ ! ಎಂಟೇ ದಿನಗಳಲ್ಲಿ ಗಾಯ ತುಂಬಿ ಮಾಯವಾಯಿತು ಆದರೆ ಹಣ ಒಂದು ಪೈಯೂ ತೆಗೆದುಕೊಳ್ಳುತ್ತಿದ್ದಿಲ್ಲ ನಿಜಕ್ಕೂ ಅವರೊಬ್ಬ ದೊಡ್ಡ ಋಷಿ ನೀವು ಏನೇ ಹೇಳಿ—ಅವರಂಥ ಹುಶಾರಿ ಬೇರೆ ಇಲ್ಲ "

" ಹುಶಾರಿ, ಪಂಡಿತ ಎಲ್ಲ ಇದ್ದಾನೆ ಹೌದು, ಆದರೆ ಊರು ಬಿಟ್ಟು ಇನ್ನೂ ಪತ್ತೆ ಇಲ್ಲದೆ ಹೋಗಿದ್ದಾನಲ್ಲ "

" ಯಾರೋ ಹೇಳುತ್ತಿದ್ದರು—ಅದು ಯಾವುದೋ ಒಂದು ತುರುಕರ ಊರಂತೆ, ಗಟ್ಟದ ಮೇಲೆ ಅಂತೆ, ಅದರ ಹೆಸರು . . "

" ರಾಯಚೂರು. "

" ಹೌದು ಹೌದು, ರ‍್ಯಾಚೂರು. ಅಲ್ಲಿ ಸನ್ಯಾಸಿಗಳ ಗುರು ಅಂತೆ ಇವರು "

" ಅವನೆಂಥ ಸನ್ಯಾಸಿ ? ಸಂಸಾರದಲ್ಲಿ ಸುಖದುಃಖ ಪಡೆದು ತಪಸ್ಸು ಮಾಡುವುದಕ್ಕೆ ಸರಿಯಾದ ಸನ್ಯಾಸ ಬೇರೆ ಇಲ್ಲ ಕೈಹಿಡಿದವಳನ್ನು ಹೀಗೆ ಬಿಟ್ಟು ಹೋಗಿ ಇರುವುದು ಮೂಢತನ ನನ್ನ ಬಾಯಿಯಲ್ಲಿ ಏನು ಬರುತ್ತದೋ ಏನೋ ! ಸಾಯಲಿ ಅವನ ಸುದ್ದಿ. ಅವನ ಆಸೆಯನ್ನೇ ಬಿಟ್ಟಿದ್ದೇನೆ ಒಟ್ಟಿನಲ್ಲಿ ನಾನೊಬ್ಬ ನೇಣಿನಲ್ಲಿ ಗೋಣು ಹಾಕಿಕೊಂಡು ನಿಂತ ಹಾಗೆ ಆಗಿದ್ದೇನೆ " ಎಂದು ಅಣ್ಣಪ್ಪಯ್ಯ ಒಳಗೆ ಎದ್ದು ಹೋದರು ಪುನಃ ಹೊರಗೆ ಬಂದೂ ಆಯಿತು ಆಗ ಅಲ್ಲಿಗೆ ಕಾಂತಪ್ಪನ ಅಣ್ಣನ ಮಗ ಮೋನಪ್ಪ ಬಂದು ಏನೋ ಕಿವಿಯಲ್ಲೇ ಹೇಳುತ್ತಿದ್ದ—ಕಾಂತಪ್ಪನಿಗೆ. " ಏನು ಮಹಾರಾಯಾ ಅದು ಗುಟ್ಟಿನ ಕೆಲಸ ? " ಎಂದು ಧನಿಗಳು ಮುಖ

ವಲ್ಲಿ ನಗು ವ್ಯಕ್ತಮಾಡಿದರು ಮೋನಪ್ಪ ಅಲ್ಲಿ ಬಹಳ ಹೊತ್ತು ನಿಲ್ಲಲಿಲ್ಲ ತಟಪಟನೆ ಓಡಿಬಿಟ್ಟ

"ಏನಿಲ್ಲ ಧನಿಗಳೇ, ಇವತ್ತು ಕೋಳಿಯ ಸಮರಾಧನೆಯಲ್ಲವೇ? ಕೋಳಿಕಟ್ಟದಲ್ಲಿ ಗೆದ್ದುತಂದ ಹುಂಜ ಸಾಲುವುದಿಲ್ಲವಂತೆ ಪಲ್ಯಕ್ಕೆ ಅದಕ್ಕೆ ಒಂದು ಹೇಂಟೆ ಹೊಡೆಯೋಣವೇ ಎಂದು ಕೇಳಲು ಬಂದಿದ್ದ." ಎಂದು ಆತ ಹೇಳಿ ಮುಗಿಸುವದರೊಳಗೆ 'ಕ್ರೊಕೊಕೋ' ಎಂದು ಹೇಂಟೆಯು ಕುತ್ತಿಗೆ ಹಿಚುಕಿದಾಗ ಕೂಗಿದ ಧ್ವನಿ ಧನಿಗಳ ಮನೆಗೂ ಕೇಳಿಸಿತು "ಹೂಂ, ಕೆಲಸ ಆಯಿತು" ಎಂದರು ಅಣ್ಣಪ್ಪಯ್ಯ ರಾಮದಾಸನಿಗೆ ಹೋಗುವಾಗ "ಬೇಗ ಬಾ" ಎಂದು ಎಚ್ಚರಿಕೆ ಕೊಟ್ಟಿದ್ದರೂ ಆತನ ಆಗಮನ ಇನ್ನೂ ಆಗಿರಲಿಲ್ಲ. ಕಾರಣ, ಅಣ್ಣಪ್ಪಯ್ಯ ತನ್ನ ಒಕ್ಕಲು ಕಾಂತಪ್ಪನಿಗೆ "ನಿನಗೆ ಕೆಲಸವುಂಟೋ?" ಎಂದು ಕೇಳಿದರು.

"ಯಾಕೆ?"

"ಸ್ವಲ್ಪ ಮೂಡುಮನೆಯ ತನಕ ಹೋಗಿ ಬರುತ್ತಿಯಾ? ಇವನು ಇನ್ನೂ ಬರಲಿಲ್ಲ! ಅಲ್ಲಿ ಊಟಕ್ಕೆ ಕೂತನೋ ಏನೋ. ಹಾಗಾದರೆ ಹೋಗುತ್ತೀಯಾ?"

"ಆದೀತು ಮತ್ತು, ಬರುವಾಗ ಏನಾದರೂ ತರಬೇಕೇ?"

"ಏನೂ ಇಲ್ಲ, ಗಾಬರಿಯೇನೂ ಇಲ್ಲ ಎಂದು ಹೇಳು ನೀನೂ ಹೋದವನು ಅಲ್ಲಿಯೇ ಗಟ್ಟಿಯಾಗಬೇಡ ಬೇಗ ಬಾ" ಎಂದು ಅಣ್ಣಪ್ಪಯ್ಯ ಕಾಂತಪ್ಪನಿಗೂ ಎಚ್ಚರಿಕೆ ಇತ್ತರು ಸರಿ, ಕಾಂತಪ್ಪ ತನ್ನ ಬ್ಯಾಟ್ರಿ ಮಿಣಗಿಸುತ್ತ ಆರಿಸುತ್ತ ಹೊರಟ—ಮೂಡುಮನೆಯತ್ತ

ಮೂಡುಮನೆಯ ಮೆಟ್ಟಿಲು ಏರುವಾಗ ನಾಯಿಗಳೆರಡು ಅವನನ್ನು ಓಡಿಸುತ್ತ ಬಂದುವು. "ಮೋಂಟಾ, ಓ ಮೋಂಟಾ, ಎಲ್ಲಿ ಸಾಯಲಿಕ್ಕೆ ಹೋದಿಯೋ? ನಾಯಿಗಳನ್ನು ಕರೆಯ ಬಾರದೇ?" ಎನ್ನುತ್ತ ಕಾಂತಪ್ಪ ಬ್ಯಾಟ್ರಿಯ ಬೆಳಕನ್ನು ಮೂಡುಮನೆಯ ಚಾವಡಿಗೆ ಬಿಟ್ಟ ಮೋಂಟನಿಗೆ ಬ್ಯಾಟ್ರಿಯ ಬೆಳಕನ್ನು ಕಂಡು ಸ್ವರ್ಗಕ್ಕೆ ಹೋದಷ್ಟು ಆನಂದವಾಯಿತು.

ಆತ ಚಾವಡಿಯಿಂದ ಒಂದೇ ಹೆಜ್ಜೆಗೆ ಹಾರಿಬಂದು ಕಾತಂಪ್ಪ ಇದ್ದಲ್ಲಿಗೆ ಹೋದ ಅವನ ಕೈಯೊಳಗಿನಿಂದ ಬ್ಯಾಟ್ರಿಯನ್ನು ಎಳೆಯಲು ಯತ್ನಿಸಿದ ಕಾಂತಪ್ಪ ಅದನ್ನು ಕೊಡಲಿಲ್ಲ ನಾಯಿಗಳು ಮೋಂಟನ ಹಿಂದಿನಿಂದ ಬರುತ್ತಿದ್ದವು "ಹೌದಾ ಮಹಾರಾಯಾ, ಸ್ವಲ್ಪ ನೋಡಿಕೊಡುತ್ತೇನೆ" ಎನ್ನುತ್ತ ಮೋಂಟ ಕಾಂತಪ್ಪನ ಬೆನ್ನು ಬಿಡಲಿಲ್ಲ "ನಿನಗ ದನ ಕಾಯುವ ಪೋರನಿಗೆ ಯಾಕೋ ಇಂಥ ಬ್ಯಾಟ್ರಿ?" ಎಂದು ಕಾಂತಪ್ಪ ಅವನಿಗೆ ಚೇಷ್ಟೆ ಮಾಡಿದ ಹೊರತು ಬ್ಯಾಟ್ರಿ ಕೊಡಲಿಲ್ಲ ಮೋಂಟನಿಗೆ ಆ ಬ್ಯಾಟ್ರಿಯನ್ನು ಕೈಯಲ್ಲಿ ಹಿಡಿದು ಅದು ಹೇಗೆ ಇದೆಯೆಂದು ನೋಡಲು ಉತ್ಕಟವಾದ ಇಚ್ಛೆಯಾಯಿತು ಆತ ಒಂದು ಉಪಾಯವನ್ನು ಕ್ಷಣದಲ್ಲೇ ಯೋಚಿಸಿದ "ನೀನು ಆ ಬ್ಯಾಟ್ರಿನನಗೆ ಸ್ವಲ್ಪ ನೋಡಲಿಕ್ಕೆ ಕೊಡುತ್ತಿಯೋ ಇಲ್ಲ? ಅದನ್ನೇನು ನಾನು ನುಂಗುವುದಿಲ್ಲ" ಎಂದು ಕೇಳಿದರೂ ಕಾಂತಪ್ಪ ಬ್ಯಾಟ್ರಿಯನ್ನು ಇವನಿಗೆ ಕೊಡಲಿಲ್ಲ ಬದಲು ಅಂಗಳದಲ್ಲಿ ನಿಂತು, "ಮನೆಯವರೆಲ್ಲ ಎಲ್ಲಿ?" ಎಂದು ಪ್ರಶ್ನಿಸಿದ ಚಾವಡಿಯಲ್ಲಿ ದೀಪ ಒಂದೇ ಉರಿಯುತ್ತಿತ್ತು ಮನೆಯವರೆಲ್ಲ ಒಳಗೆ ಊಟ ಮಾಡುವುದರಲ್ಲಿ ನಿರತರಾಗಿದ್ದರು ಎಡಹಿತ್ತಲಿನಿಂದ ಒಂದ ರಾಮದಾಸನೂ ಊಟ ಮಾಡುತ್ತಿದ್ದ-ಒಳಗ ಹೊರಗೆ ಈ ದನಕಾಯುವ ಮೋಂಟನಷ್ಟೇ ಇದ್ದ ಆಗ ದಾಸ ಮಾಸ್ತರತಂದ ಬ್ಯಾಟ್ರಿಯ ಬೆಳಕಿಗಿಂತ ಈಗ ಕಾಂತಪ್ಪ ತಂದ ಬ್ಯಾಟ್ರಿಯ ಬೆಳಕು ಚೆನ್ನಾಗಿದೆಯೆಂದು ಅವನಿಗೆ ಹೊಳೆಯಿತು ಮಾಸ್ತರ ಬ್ಯಾಟ್ರಿಯನ್ನು ಒಮ್ಮೆ ಬೆಳಕು ಮಾಡಬೇಕೆಂದು ಇವನ ಇಚ್ಛೆ ಇತ್ತು ಆದರೆ ಅವರೊಡನೆ ಸಲುಗೆ ಇಲ್ಲದಕಾರಣ ಆತ ಹಾಗೆ ಮಾಡಲು ಹವಣಿಸಲಿಲ್ಲ ಈಗ, ಕಾಂತಪ್ಪನ ಬ್ಯಾಟ್ರಿಯನ್ನು ಒಮ್ಮೆ ಪರೀಕ್ಷಿಸದೆ ಬಿಡಬಾರದು ಎಂದು ನಿರ್ಧರಿಸಿ ಆತ ಅಂದ — "ಬ್ಯಾಟ್ರಿ ಕೊಡುತ್ತಿಯೋ ಅಥವಾ ಬಾಡುನಿಗೆ ಛೂ ಬಿಡಲೇ?" "ಈ ಮಂಗನದ್ದೊ ಎಷ್ಟು ಬೂಟೋ? ಬ್ಯಾಟ್ರಿ ಅಂದರೆ ಏನೆಂದು ತಿಳಿದೆ ನೀನು? ಅದನ್ನು ಬಿಟ್ಟರೆ ಹುಲಿ ಕೂಡಾ ಹೆದರಿ ಓಡುತ್ತದೆ!" ಎಂದು ಕಾಂತಪ್ಪ ಹೊಗಳಿಕೊಂಡ ಕಾಂತಪ್ಪನಿಗೆ ಹುಲಿಯ ಹೆದರಿಕೆಗಿಂತ ನಾಯಿಯ ಹೆದರಿಕೆ ಹೆಚ್ಚು ಮೋಂಟನು ಆಗ ನಾಯಿಗಳನ್ನು ಕರೆಯುದಿದ್ದರೆ ಆತ ಹಿಂದೆ ಎಡಹಿತ್ತಲಿಗೆ ಹೋಗುತ್ತಿದ್ದ ಈಗ ಥಕ್ಕನೆ ಮೋಂಟ

ಬಾಡು ನಾಯಿಗೆ ' ಹಚೀ ' ಅಂದರೆ ಕಷ್ಟ ಎಂದು ಬಗೆದು, ಶಾಂತಪ್ಪ ಒಂದು ಕರಾರು ಹಾಕಿಯೇ ಬ್ಯಾಟ್ರಿಯನ್ನು ಅವನಿಗೆ ನೋಡಲು ಕೊಟ್ಟ "ಅದರ ಮೂಗು ಮಾತ್ರ ಒತ್ತಬೇಡ ! ಬೆಳಕಾದೀತು ! ಜಾಗ್ರತೆ—ನಿನ್ನ ಕೈಗೆ ಕರಂಟ ಬಂದೀತು !" ಎಂದು ಹೆದರಿಸಿ ಬ್ಯಾಟ್ರಿಯ ಗುಂಡಿ ಒತ್ತಬಾರದೆಂದು ಅಪ್ಪಣೆ ವಿಧಿಸಿದ—ಶಾಂತಪ್ಪ ಮೋಂಟನಿಗೆ ಅದನ್ನು ಎಷ್ಟು ನೋಡಿದರೂ ತೃಪ್ತಿ ಎನಿಸಲಿಲ್ಲ ಅದನ್ನು ಹತ್ತಾರು ಸಲ ಹೊರಳಿಸಿ ಹೊರಳಿಸಿ ನೋಡಿದ ತನಗೂ ಒಂದು ಅಂಥ ಬ್ಯಾಟ್ರಿ ಬೇಕು ಎಂದು ಅವನ ಮನಸ್ಸು ಹೇಳಿತು ನೂರಾರು ಪ್ರಶ್ನೆಗಳನ್ನು— ಆ ಬ್ಯಾಟ್ರಿಯ ಬಗ್ಗೆ ಕೇಳಿದ ಅವಕ್ಕೆ ಶಾಂತಪ್ಪ ತಕ್ಕ ಉತ್ತರಗಳನ್ನು ಕೊಟ್ಟನೆನ್ನಬಹುದು—ಅವನಿಗೆ ಗೊತ್ತಿದ್ದ ಮಟ್ಟಿಗೆ. ಪ್ರಶ್ನೆ ಕೇಳುತ್ತ ಕೇಳುತ್ತ ಮೋಂಟ, " ಹೌದಾ ಮಹಾರಾಯ, ಈ ಬ್ಯಾಟ್ರಿಗೆ ಚಿಮಿಣಿ ಎಣ್ಣೆ ಎಲ್ಲಿಂದ ಹಾಕುವುದು ? " ಎಂದು ಆಶ್ಚರ್ಯದಿಂದ ಕೇಳಿದ. ಅವನ ಮಾತನ್ನು ಕೇಳಿ ಶಾಂತಪ್ಪ "ಚಿಮಣಿಎಣ್ಣೆ ಹಾಕಲಿಕ್ಕೆ ಅದೇನು ಲಾಟಾನೇ? ಅದು ವಿಲಾಯಿತಿಯಲ್ಲಿ ತಯಾರು ಆದದ್ದು ಮೂಡುಬಿದ್ರೆಯಲ್ಲಿ ಅದಕ್ಕೆ ' ಪಾವರ್ ' ಹಾಕಿಸಬೇಕಾಗುತ್ತದೆ. ಅದನ್ನು ನಾನು ಮೂಡುಬಿದ್ರೆ ಯಲ್ಲೇ ಖರೀದಿ ಮಾಡಿದ್ದು " ಎಂದನು.

" ಅದೇಕೆ ಮೂಡುಬಿದ್ರೆ? ಇಲ್ಲಿಯೇ ಮೊನ್ನೆ ಜಾತ್ರೆಯಲ್ಲಿ ಬೇಕಾದರೆ ಬಂದಿದ್ದವು ಮೂರು ಬ್ಯಾಟ್ರಿ ಬಂದಿದ್ದವು ಅದರಲ್ಲಿ ಒಂದು ನನಗೆ ತೆಗೆದು ಕೊಳ್ಳಬೇಕೆಂದು ಬಹಳ ಮನಸ್ಸು ಇತ್ತು ಅವನು ಅದಕ್ಕೆ ಹತ್ತಾಣೆ ಕ್ರಯ ಹೇಳಿದ ನಾನು ಎಲ್ಲಿಂದ ಕೊಡಲಿ ? ಬ್ಯಾಟ್ರಿಗೆ ಒಮ್ಮೆ ಹತ್ತಾಣೆ ಕೊಟ್ಟರೆ ಮತ್ತೆ ಖರ್ಚು ಮಾಡಬೇಕೆಂದೇ ಇಲ್ಲ ಅಲ್ಲವೋ ? " ಎಂದು ಹೇಳಿ ಮೋಂಟ ಬ್ಯಾಟ್ರಿಯನ್ನು ಶಾಂತಪ್ಪನಿಗೆ ಕೊಟ್ಟ "ನಿನಗೆ ಏನು ಗೊತ್ತುಂಟು? ಒಂದು ಹೆಂಡತಿ ಮಾಡಿಕೊಂಡಮೇಲೆ ಹೇಗೆ ಖರ್ಚು ಸುರು ಆಗುತ್ತದೋ ಹಾಗೆ ಒಂದು ಬ್ಯಾಟ್ರಿ ಕೊಂಡಮೇಲೂ ಖರ್ಚಿಗೆ ಸುರುವಾಗುತ್ತದೆ " ಎಂದು ಶಾಂತಪ್ಪ ನಗುತ್ತ ಹೇಳುವಾಗ ಮೋಂಟ ಬಿದ್ದು ಬಿದ್ದು ನಗಲಿಕ್ಕೆ ಪ್ರಾರಂಭಿಸಿದ. ಆಗ ಒಳಗಿನಿಂದ ಊಟ ಮುಗಿಸಿಕೊಂಡು, ಕೈತೊಳೆಯಲು ನೀರು ಹಿಡಿದುಕೊಂಡು ಹೊನ್ನಪ್ಪಯ್ಯ ಹೊರಗೆ ಬಂದರು ಮೋಂಟನು

ನಗುವುದನ್ನು ಕೇಳಿ ಅವರಿಗೆ ಸಿಟ್ಟು ಬಂತು "ಥೇಟ್ ಮೂರ ಕಾಸಿನ ವನೋ ನೀನು! ಹೊಲೆಯರ ಹಾಗೆ ನಗುತ್ತೀಯಲ್ಲ" ಎನ್ನುತ್ತ ಮುಖ ತೊಳೆದರು ಆಗ ಕಾಂತಪ್ಪನೂ ಅವರ ಕಣ್ಣಿಗೆ ಕಾಣಿಸಿಕೊಂಡ ಮೋಂಟ ಅಲ್ಲಿ ನಿಲ್ಲದೆ--ಒಂದು ಮೂಲೆಯಲ್ಲಿ ಹೋಗಿ ಕುಳಿತುಕೊಂಡ "ಯಾರದು? ಕಾಂತಪ್ಪನೋ?" ಎಂದು ಕೇಳಿದರು ಹೊನ್ನಪ್ಪಯ್ಯ

"ಹೌದು" ಅಂದನು ಕಾಂತಪ್ಪ

"ದೂರ?"

"ಇಲ್ಲಿಗೇ ಬಂದವ್ವು, ಮಾಸ್ತರು ಬಂದು ಬಹಳ ಹೊತ್ತಾಯಿತಂತೆ, ಧನಿಗಳು ಕಳುಹಿಸಿದರು—'ಕರೆದುಕೊಂಡು ಬಾ' ಎಂದು ಹೇಳಿದರು"

"ಕೂಡು ಕೂಡು, ಒಳಗೆ ಊಟ ಮಾಡುತ್ತಿದ್ದಾನೆ ಊಟ ಆಯಿತು, ಈಗ ಬರುತ್ತಾನೆ" ಎಂದು ಹೇಳುತ್ತ ಒಳಗೆ ಹೋಗಿ ಹೊರಗೆ ಬಂದರು ಎಲೆ ಅಡಿಕೆಯ 'ಪೆಟ್ಟಿಗೆಯನ್ನು ತೆರೆದು, ಒಮ್ಮೆ ತಿನ್ನುವಷ್ಟು ಎಲೆ ಅಡಿಕ ಯನ್ನು ಕಾಂತಪ್ಪನಿಗೂ ಕೊಟ್ಟರು ತಾವೂ ತಾಂಬೂಲ ಮೆದ್ದರು ಆಮೇಲೆ ಒಳಗೆ ನೋಡುತ್ತಾ "ಹೌದೇ, ಎಲ್ಲಿ ಹೋದೆ?" ಎಂದು ಕೇಳಿದರು

"ಹಾಂ, ಹಾಂ—ಆಯಿತು ಬಂದೆ" ಎನ್ನುವ ಉತ್ತರ ಹೊರಗೆ ಕೇಳಿಸಿತು. "ಎಡಹಿತ್ತಲಿನಿಂದ ಜನ ಬಂದಿದೆ—ಬೇಗ ಹೊರಟು ಹೋಗು" ಎಂದು ಹೆಂಡತಿಗೆ ಅಪ್ಪಣೆ ಕೊಟ್ಟರು "ಈಗ ಹೇಗಿದೆ ಸಂಜೀವಿಗೆ?" ಎಂದು ಕಾಂತಪ್ಪನಿಗೆ ಪ್ರಶ್ನಿಸಿಯೂ ಆಯಿತು.

"ಎಲ್ಲಿಯೋ ಒಂದು ಚೂರು ಸೋಂಕಾಗಿರಬೇಕು ನಮ್ಮ ಧನಿಗಳ ಗಾಬರಿ ನಿಮಗೇನು ಗೊತ್ತಿಲ್ಲದ್ದೇ? ಸ್ವಲ್ಪ ಜ್ವರ ಬಂದಿದೆ ಎಂದು ಕಾಣುತ್ತದೆ" ಎಂದು ಕಾಂತಪ್ಪ ಹೇಳುವಾಗ ಒಳಗಿನಿಂದ ಸಾವಿತ್ರಿ ಬಂದಳು "ಹಾಗೆಲ್ಲ ಸ್ವಲ್ಪ ಮೈ ಬಿಸಿಯಾದರೆ ಮಲಗುವ ಮಂಗಳು ಸಂಜೀವಿಯಲ್ಲ" ಎನ್ನುತ್ತ ಹತ್ತಿಪ್ಪತ್ತು ಎಲೆಗಳನ್ನೂ, ಒಂದೆರಡು ಅಡಿಕೆಯ ಹೋಳುಗಳನ್ನೂ, ಒಂದೋ ಎರಡೋ ಹೊಗೆ ಸೊಪ್ಪಿನ ಎಸಳನ್ನೂ ಎಲೆ ಅಡಿಕೆಯ ಪೆಟ್ಟಿಗೆಯಿಂದ ಬೇಗ ಬೇಗ ತೆಗೆದು ಮಡಿಲಲ್ಲಿ ಇಟ್ಟುಕೊಂಡಳು "ಹೊಂ ಹೊಂ, ದಾಸಾ—

ಹೋಗೋಣ ಹೋಗೋಣ " ಎಂದಳು ಹೆಂಡತಿ ಎಲೆಅಡಿಕೆಯ ಬುತ್ತಿ ಒಯ್ಯುವುದನ್ನು ನೋಡಿ ಹೊನ್ನಪ್ಪಯ್ಯ , " ಅಲ್ಲಿ ಏನು ಎಲೆಅಡಿಕೆಯ ಸಂತೆ ಇಡಲಿಕ್ಕೆ ಹೋಗುತ್ತೀಯೋ ? " ಎಂದರು " ನಿಮ್ಮ ತಮ್ಮರಾಯರ ಸ್ವಭಾವ ಯಾರಿಗೆ ಗೊತ್ತಿಲ್ಲ ! ಅವರ ಜಿಪುಣತನಕ್ಕೆ ಇತಿಮಿತಿಯೇ ಇಲ್ಲ ಏನೋ ಹೇಳುತ್ತಾರಲ್ಲ, ಎದುರಿನಿಂದ ಇರುವೆಯಷ್ಟೂ ಹೋಗಬಾರದು, ಹಿಂದಿನಿಂದ ಆನೆಯಷ್ಟು ಹೋದರೂ ಗೂತ್ತಿಲ್ಲ ಅನ್ನುತ್ತಾರೆ—ಹಾಗ ! " ಎಂದು ಗಡಿಬಿಡಿಯಿಂದ ಹೊರಟಳು--ಸಾವಿತ್ರಿ ಅಂಗಳಕ್ಕೆ ಇಳಿದೊಡನೆ, "ಆ ಲಾಟಾನು ಆದರೂ ಕೊಡಿ, ಈ ಬ್ಯಾಟ್ರಿಯ ಬೆಳಕು ನನ್ನ ಕಣ್ಣು ಕುಕ್ಕಿ ಕಾಣ ದಂತೆ ಮಾಡುತ್ತದೆ" ಎಂದಳು ಹೊನ್ನಪ್ಪಯ್ಯ ಲಾಟಾನು ಹಚ್ಚಿಕೊಟ್ಟರು ಹೋಗುವಾಗ ಸಾವಿತ್ರಿ ಮಗಳಿಗೆ " ಸುಮತೀ, ನಾನು ಈಗ ಬಂದರೂ ಬಂದೆ ನಾಳೆ ಬಂದರೂ ಬಂದೆ ಬೇಗ್ಗೆ ಬರಲಿಕ್ಕೆ ತಡವಾದರೆ ಎಮ್ಮೆಯ ಹಾಲು ಕರೆಯುವಾಗ ಜಾಗ್ರತೆ ! " ಎಂದು ಹೇಳಿಹೋದಳು ಅಂತೂ ಮೂವರೂ ಹೊರಟರು

ಎಡಹಿತ್ತಲಿನ ಮನೆಯ ಚಾವಡಿಯಲ್ಲಿ ಉರಿಯುವ ಚಿಮಣಿ ಮಾತ್ರ ಇತ್ತು ಸಾವಿತ್ರಿ ಬಂದವಳೇ ಒಳಗೆ ಹೋದಳು ಮಾಸ್ತರ ಮತ್ತೆ ಕಾಂತಪ್ಪ ಚಾವಡಿಯಲ್ಲೇ ಕುಳಿತರು ಕಾಂತಪ್ಪನಿಗೆ ವಿಶೇಷವಾಗಿ ಅವನ ಧನಿಯ ಮನೆಯ ತೊಂದರೆಯಬಗ್ಗೆ ವಿಷಾದವೆನಿಸಲಿಲ್ಲ. ಅವನು ಇಂದು ಕೋಳಿ ಕಟ್ಟದಲ್ಲಿ ಗೆದ್ದುದರಿಂದ ಅವನಿಗೆ ಎಲ್ಲವೂ ಸುಖದಾಯಕವಾಗಿ ಕಾಣುತ್ತಿತ್ತು ಆತ ಗೆಲುವಿನಿಂದಲೇ ಹೇಳಿದ " ಮಾಸ್ತರೇ, ನಮ್ಮ ಬೊಳ್ಳೆಕೋಳಿ ಗೆದ್ದಿ ತಲ್ಲ! ಇವತ್ತು ಕೋಳಿಗೆ ಬಾಲು(ಕತ್ತಿ)ಕಟ್ಟಿದ್ದು ಬೊಮ್ಮಯ್ಯ ಬೊಳ್ಳೆಬಾಲಿನ ಕಾಲನ್ನುಎತ್ತಿ ಒಂದೇ ಕೊಟ್ಟದು! ಕೇಳಬೇಕೇ! ಕೋಳಿಯ ಉಸಿರೇ ತುಂಡಾ ಯಿತು ! ಧೂಮಪ್ಪನ ಮುಖ ಅಡಿಕೆಯಷ್ಟಾಯಿತು ! " " ಹೋ ! ಹಾಗಾ ದರೆ ಇವತ್ತು ರಾತ್ರಿ ಇಡೀ ನೀವು ಮಲಗುವುದಿಲ್ಲ " ಎಂದು ರಾಮದಾಸ ಹೇಳಿದ

" ನಿಮ್ಮ ಮನೆಯ ಯಜಮಾನರು ಪಂಚಾಂಗ ನೋಡಿ, ಲೆಕ್ಕಮಾಡಿ ' ಕಪ್ಪು ಬಣ್ಣದ ಕೋಳಿಯೊಡನೆ ನಿಮ್ಮ ಬಿಳಿಯಬಣ್ಣದ ಬೊಳ್ಳೆಕೋಳಿಯನ್ನು

ಅಂಕಕ್ಕೆ ಬಿಟ್ಟರೆ ಕೇಳಬೇಕೇ! ' ಎಂದು ಹೇಳಿದರು ಅವರು ಹೇಳಿದ ಹಾಗೇ ಆಯಿತು ! ಇವತ್ತು ಎಷ್ಟು ಜನರ ದೂದಿನ ದುಡ್ಡು ಹೋಯಿತು ಗೊತ್ತೇ ! "

" ಇವತ್ತು ಕೋಳಿಕಟ್ಟ ಎಲ್ಲಿ ಇತ್ತು ? "

" ಗೋಳಿಮರದ ಬುಡದಲ್ಲಿ—ಮುಚ್ಚೂರಲ್ಲಿ ನಾವು ಬಹಳ ಹೊತ್ತು ನಿಲ್ಲಲಿಲ್ಲ ಅಲ್ಲಿ ನಮ್ಮ ಕೋಳಿ ಗೆದ್ದೊಡನೆ ಬಂದು ಬಿಟ್ಟೆವು " ಎನ್ನುವಾಗ ಆಗ ಬಂದ ಅವನ ಅಣ್ಣನ ಮಗ ಪುನಃ ಬಂದು " ಊಟಕ್ಕೆ ಬರಬೇಕಂತೆ " ಎಂದು ಹೇಳಿದ " ಆಯಿತು ಸ್ವಾಮಿ, ನಾನು ಹೋಗುತ್ತೇನೆ ರಾತ್ರಿ ಏನಾದರೂ ಅಗತ್ಯ ಬಿದ್ದರೆ ಕರೆಯಿರಿ, ಬಂದೇಬರುತ್ತೇನೆ " ಎಂದು ಮಾಸ್ತರಿಗ ಹೇಳಿ ಕಾಂತಪ್ಪ ತನ್ನ ಮನೆಗೆ ಆ ಹುಡುಗನನ್ನು ಹಿಂದಿನಿಂದ ಕರೆದುಕೊಂಡು ಹೊರಟ ರಾಮದಾಸ ಚಾಪೆಹಾಸಿ ಸ್ವಲ್ಪ ಅಡ್ಡ ಬಿದ್ದ

ಸಾವಿತ್ರಿ ಒಳಗೆ ಹೋದಾಗ ಅಲ್ಲಿಯೂ ಅಣ್ಣಪ್ಪಯ್ಯ ಇರಲಿಲ್ಲ ಹಾಗೇ ದೇವರ ಕೋಣೆಯತ್ತ ನೋಡಿದಳು ಅಲ್ಲಿ ಮಾತ್ರ ಅಣ್ಣಪ್ಪಯ್ಯ ದೊಡ್ಡ ಬಂಡೆಯ ಹಾಗೆ ಅಚಲವಾಗಿ ಕೂತು ತಪಸ್ಸು ಮಾಡುವುದು ಕಂಡಿತು ಕೈಯಲ್ಲಿ ಏನೋ ಹಿಡಿದುಕೊಂಡು ಮಂತ್ರ ಮಾಡುತ್ತಿದ್ದರು ಮಂತ್ರಕ್ಕೆ ಕೂತಾಗ ತಾನು ಅವರನ್ನು ಮಾತಾಡಿಸುವುದು ಸರಿಯಲ್ಲವೆಂದು ಬಗೆದು ಸಾವಿತ್ರಿ ಸಂಜೀವಿ ಮಲಗಿದ ತಾವಿಗೆ ಹೋದಳು ಸಂಜೀವಿ ಎರಡು ಕಂಬಳಿ ಹೊದ್ದುಕೊಂಡು ಮುದ್ದೆಯಾಗಿ ಮಲಗಿದ್ದಳು ಅವಳ ಹಾಸಿಗೆಯ ಬಳಿಯಲ್ಲಿ ಹೋಗಿ ಕಾಲುಚಾಚಿ ಕುಳಿತಳು–ಸಾವಿತ್ರಿ ಮೆಲ್ಲನೆ ಕಂಬಳಿಯನ್ನು ಸರಿಸಿ, ಆಕೆಯ ಹಣೆಯ ಮೇಲೆ ಕೈಯಿಟ್ಟಳು ಸಾವಿತ್ರಿಗೂ ಆ ರೀತಿಯಲ್ಲಿ ಕುದಿಯುವ ಜ್ವರ ನೋಡಿ ಆಶ್ಚರ್ಯವಾಗದಿರಲಿಲ್ಲ "ಸಂಜೀವೀ, ಸಂಜೀವಿ" ಎಂದು ನಾಲ್ಕಾರು ಸಲ ಕರೆದರೂ ಸಂಜೀವಿಗೆ ಎಚ್ಚರವಿಲ್ಲ ಕಾರಣ, ಸಾವಿತ್ರಿ ಕಂಬಳಿಯನ್ನು ಮೊದಲಿನಂತೆ ಹೊದ್ದಿಸಿ ಹೊರಗೆ ಬಂದಳು ದಾಸ ಮಲಗಿದ್ದನಷ್ಟೆ ಅವನನ್ನು ಕರೆದು ಎಬ್ಬಿಸಿದಳು " ಹೇಗುಂಟು ? " ಎಂದು ಕೇಳಿದ ದಾಸ.

“ ಏನು ಹೇಗುಂಟು ? ಹಿಡಿ ಬತ್ತ ಹಾಕಿದರೆ ಉಡಿ ಅರಳು ಹಾರುವಷ್ಟಿದೆ ಜ್ವರ ! ಒಮ್ಮೆಲೇ ಇಷ್ಟೇಕೆ ಜ್ವರ ಬಂತೋ ತಿಳಿಯದು ” ಎನ್ನುತ್ತ ಗಾಬರಿಯಾದಳು ಸಾವಿತ್ರಿ ದೊಡ್ಡ ತಾಯಿಯ ಮಾತು ಕೇಳಿದೊಡನೆ ರಾಮದಾಸನಿಗೂ ಗಾಬರಿಯಾಯಿತು ಒಳಗೆ ಹೋಗುವಾಗ ಅಣ್ಣಪ್ಪಯ್ಯ ಮಂತ್ರಮಾಡುತ್ತ ಸಂಜೀವಿಯ ಹಾಸಿಗೆಯ ಹತ್ತಿರ ನಿಂತು ಬೂದಿ ಹಾರಿಸುತ್ತಿದ್ದರು ಇನ್ನು ಅಲ್ಲಿಗೆ ಹೋಗುವುದು ಯೋಗ್ಯವಲ್ಲ ಎಂದು ತಿಳಿದ ಕೆಲ ಸಮಯ ಇಬ್ಬರೂ ಮೌನದಿಂದ ಕಳೆದರು

“ ರಾಮ ರಾಮ, ಹರೇರಾಮ ” ಎಂದು ರಾಮಸ್ಮರಣೆ ಮಾಡುತ್ತ ಅಣ್ಣಪ್ಪಯ್ಯ ಹೊರಗೆ ಬಂದು ಕೂತರು ಸಾವಿತ್ರಿಯನ್ನು ಕಂಡೊಡನೆ ಅವರ ರಾಮನಾಮ ನಿಂತಿತು “ ಏನೂ ಹೆದರುವುದು ಬೇಡ ! ದೇವರಿದ್ದಾನೆ ನೋಡುವ ಅದೆಲ್ಲ ಮೊನ್ನೆ ಆ ಅಬ್ಬಿಯಲ್ಲಿ ಬಿದ್ದು ಸತ್ತನಲ್ಲ— ಆ ಹಾಳು ಮನುಷ್ಯ, ಅವನದೇ ಉಪದ್ರ ಎಷ್ಟಿದೆ ನೋಡುತ್ತೇನೆ ಅವನ ಸೊಕ್ಕು! ಮಂತ್ರ ಮಾಡಿ, ಅವನ ಪಿಶಾಚಿಯನ್ನು ಅಂತರಿಕ್ಷದಲ್ಲಿ ಹಾರಿಸಿಬಿಟ್ಟೆ ” ಎನ್ನುತ್ತ ಅಣ್ಣಪ್ಪಯ್ಯ ತಮ್ಮ ಮಾಂತ್ರಿಕತೆಯ ಪಾಂಡಿತ್ಯವನ್ನೆ ಹೇಳಿ ಗಾಬರಿಯಾಗಬಾರದೆಂದು ಬೇರೆಯವರಿಗೆ ತಿಳಿಸಿದರು ಈ ಮಾತನ್ನು ಕೇಳಿ ಸಾವಿತ್ರಿಗೆ ಸ್ವಲ್ಪ ಅಸಮಾಧಾನವಾಯಿತೆನ್ನಬಹುದು ಇಲ್ಲದಿದ್ದರೆ ಆಕೆ, “ ‘ಏನೂ ಹೆದರುವುದು ಬೇಡ’ ಎಂದು ನನಗೇ ಬುದ್ಧಿ ಹೇಳುವ ನೀವು, ನನ್ನನ್ನು ಯಾಕೆ ಕರೆಯಿಸಿದ್ದು ? ” ಎಂದು ಕೇಳುತ್ತಿದ್ದಿರಲಿಲ್ಲ. “ ರಾತ್ರಿಯಲ್ಲಿ ಫಕ್ಕನೆ ಏನಾದರೂ ಗಾಬರಿ ಮಾಡಿದಳೆಂದರೆ, ಸ್ವಲ್ಪ ಧೈರ್ಯ ಹೇಳಲಿಕ್ಕಾದರೂ ನಿನ್ನ ಉಪಯೋಗ ಬೀಳಲಿ ಎಂದು ಕರೆಯಿಸಿದೆ ” ಎನ್ನುತ್ತ ಅಣ್ಣಪ್ಪಯ್ಯ ಅಲ್ಲಿಂದ ಎದ್ದು, ಅಡಿಕೆಯ ಪೆಟ್ಟಿಗೆಯನ್ನು ತಂದರು. ಜನಿವಾರದಲ್ಲಿ ತೂಗುತ್ತಿದ್ದ ಕೀಲಿಕೈಯನ್ನು ಎತ್ತಿ, ಪೆಟ್ಟಿಗೆಯ ಬೀಗವನ್ನು ತೆಗೆದರು ಬಾಗಿಲು ಬಿಚ್ಚಿ, “ ಹೋ ! ಇದರಲ್ಲಿ ಹೊಗೆಸೊಪ್ಪೇ ಇಲ್ಲವಲ್ಲ ಇವತ್ತು ತರಬೇಕೆಂದು ಮಾಡಿದ್ದೆ, ಆದರೆ ಮರೆತೇ ಹೋಯಿತು ” ಎಂದು ಅತ್ತಿಗೆಗೆ ಹೇಳಿದರು. ಅವರು ಎಷ್ಟು ಸುಳ್ಳು ಹೊಡೆದರೂ ಸಾವಿತ್ರಿಗೆ ಅವರು ಹೊಗೆಸೊಪ್ಪು ಎಲ್ಲಿ ಇಡುತ್ತಾರೆಂಬುದು ತಿಳಿದ ವಿಷಯವಷ್ಟೇ. ಅವರ ಜಿಪುಣತನವನ್ನು ಬಲ್ಲ ಆಕೆ, ಮನೆಯಿಂದ ಬರುವಾಗಲೇ ಎಲೆಅಡಿಕೆಯ ತಯಾರಿಯಿಂದಲೇ ಬಂದಿದ್ದಳು.

ಮೈದುನನಿಗೆ ಹೆಚ್ಚಿನ ಬುದ್ಧಿ ಹೇಳಲೂ ಆಕೆ ಹೋಗಲಿಲ್ಲ ತನ್ನ ಉಡಿಯೊಳಗೆ ಕೈಹಾಕಿ, ಎಲೆಅಡಿಕೆಯ ಚೀಲ ಹೊರಗೆ ತೆಗೆದಳು "ಅದರಲ್ಲಿ ಹೊಗೆಸೊಪ್ಪು ಇದೆಯೋ?" ಎಂದು ಅಣ್ಣಪ್ಪಯ್ಯ ಕೇಳಿದರು ರಾಮದಾಸನಿಗೆ ತಂದೆಯ ಮಾತನ್ನು ಕೇಳಿ "ಇವರು ಇಷ್ಟೇಕೆ ಜೀನರಾಗುತ್ತಿದ್ದಾರೆ!" ಎಂದು ವ್ಯಥೆಯಾಯಿತು ಕೊನೆಗೆ ಸಾವಿತ್ರಿಯ ಚೀಲದಿಂದಲೇ ಅಣ್ಣಪ್ಪಯ್ಯ ವೀಳ್ಯ ಫಳಾಹಾರ ಮಾಡಿದರು ಸಾವಿತ್ರಿ ಬೇಕೆಂದೇ ಒಂದು ಎಸಳು ಹೊಗೆಸೊಪ್ಪು, ಹತ್ತಿಪ್ಪತ್ತು ವಿಳ್ಯದೆಲೆಗಳನ್ನು ಅಣ್ಣಪ್ಪಯ್ಯವರ ಪೆಟ್ಟಿಗೆಯಲ್ಲಿ ಹಾಕಿದಳು "ನಿಮ್ಮ ಹೊನ್ನ ಎಲ್ಲಿಂದ ಹೊಗೆಸೊಪ್ಪು ಸಂಪಾದಿಸುತ್ತಾನೋ ತಿಳಿಯದು! ಅವನು ತಂದ ಹೊಗೆಸೊಪ್ಪಿನಷ್ಟು ಚುಟಿಯದ್ದು ಅಶ್ವತ್ಥಪುರದ ಅಂಗಡಿಗಳಲ್ಲೇ ಇಲ್ಲ" ಎಂದು ಅಣ್ಣಪ್ಪಯ್ಯ ಹರುಷದಿಂದ ನಡಿದರು ಯಾಕಂದರೆ ಅತ್ತಿಗೆ ಒಂದು ಎಸಳು ಹೊಗೆಸೊಪ್ಪು ದಾನ ಮಾಡಿದಳಲ್ಲ—ಎಂಬ ಹಿಗ್ಗಿನಿಂದ ಮೈದುನರಾಯರಿಗೆ ಸ್ವಲ್ಪವಾದರೂ ಮನಸ್ಸಿಗೆ ಚುಚ್ಚಲೆಂದು ಸಾವಿತ್ರಿ "ಅಶ್ವತ್ಥಪುರ ಬಿಟ್ಟು ಬೇರೆ ಎಲ್ಲಿಗೂ ಹೋಗುವುದಿಲ್ಲ ಅವರು ಆದರೆ ಎಲ್ಲ ಹಣ ಹೇಗೆ ಕೈಬಿಡುತ್ತೇವೋ ಹಾಗೆ ಹಾಗೆ ಗುಣ ನಮ್ಮ ಕೈಸೇರುತ್ತದೆ ನಮ್ಮವರು ಯಾವಾಗಲೂ ರೂಪಾಯಿಗೆ ಸೇರಿನ ಹೊಗೆಸೊಪ್ಪನ್ನು ತರುತ್ತಾರೆ" ಎಂದು ಉತ್ತರಿಸಿದಳು "ಇದು ತನ್ನತ್ತ ಬಿದ್ದ ಮದ್ದು" ಎಂದು ಬಗೆದರು ಅಣ್ಣಪ್ಪಯ್ಯ ಅತ್ತಿಗೆಯಿಂದ ಅಪಮಾನವಾಯಿತೆಂದು ಅವರಿಗೆ ಅನಿಸಿತು ಅವಳು ಆಡಿದ ಮಾತಿನಲ್ಲಿ ತನ್ನ ಜೀನತನಕ್ಕೆ ಕೊಟ್ಟ ಏಟು ಬಲವಾಗಿ ಬಿತ್ತೆಂದು ಬಗೆದರು. ಆ ಅಪಮಾನವನ್ನು ಅವರು ಒಪ್ಪುವವರಲ್ಲ ತನ್ನ ಅಣ್ಣ ಆ ರೀತಿ ಹೇಳಿದ್ದರೆ, ಅವರಿಗೆ ಅಷ್ಟೊಂದೆನಿಸುತ್ತಿರಲಿಲ್ಲ ಅದರ ಪೆಟ್ಟು "ಈ ಹೆಣ್ಣು ಹೀಗೆ ಹೇಳಿದಳಲ್ಲ" ಎಂದು ಮನಸ್ಸಿನಲ್ಲೇ ಕೊರಗಿ, "ಈಕೆಗೆ ಏನಾದರೂ ಹೇಳಬೇಕು" ಎಂದೂ ವಿಚಾರಿಸಿದರು ಕೂಡಲೇ ಅವಳು ಕೊಟ್ಟ ಎಲೆಅಡಿಕೆ ಮೆಲ್ಲುತ್ತ ಹೇಳಿದರು "ನಾನೂ ತರುವುದು ಸೇರಿಗೆ ಒಂದು ರೂಪಾಯಿಯ ಹೊಗೆಸೊಪ್ಪನ್ನೇ ಅಶ್ವತ್ಥಪುರ ಪೇಟೆಯಲ್ಲಿ ಒಂದು ರೂಪಾಯಿಗೆ ಸೇರಿನ ತಂಬಾಕು ತರಿಸುವವರು ಉಣ್ಣಯ್ಯ ಭಟ್ಟರು ಒಬ್ಬರೇ ಅವರಿಗೂ ನನಗೂ ಎಷ್ಟೆಂದರೂ ಅಷ್ಟಕ್ಕಷ್ಟೇ ನಿಮ್ಮ ಹೊನ್ನನಿಗೂ ಭಟ್ಟರಿಗೂ ಮೊದಲಿನಿಂದಲೂ ಸ್ನೇಹ ಅದ್ದರಿಂದ

ಹೊಸಾ ತಂಬಾಕು ಬಂದೊಡನೆ ಅದರಲ್ಲಿ ಒಳ್ಳೆಯ ' ಚುಟಿ ' ಇದ್ದ ತಂಬಾಕನ್ನು ನಿನ್ನ ಹೊನ್ನು ಆರಿಸಿ ಒಯ್ದುಬಿಡುತ್ತಾನೆ "ಆ ಮೇಲೆ ಉಳಿದುದರಲ್ಲಿ ಅಲ್ಲವೋ ನಮಗೆ ಸಿಗಬೇಕು ? " ಬಳಸಿ ಬಳಸಿ ಹೇಗೂ ಮಾತಾಡಿ ತನ್ನ ಬುಡಕ್ಕೆ ಬಂದ ನೀರಿನಿಂದ ದೂರ ಸರಿಯಲು ಪ್ರಯತ್ನಿಸಿದರು ಅಣ್ಣಾಪ್ಪಯ್ಯ ಅವರು ಎಷ್ಟು ಮಾತಾಡಿದರೂ ಅವರ ಅಂತರಂಗ ಸಾವಿತ್ರಿಗೆ ಗೊತ್ತೇ ಇದೆ ಅವಳಗೇನು ಅವರ ಮಾತುಗಳು ಹೊಸದಲ್ಲ ಆದರೆ ಅಣ್ಣಾಪ್ಪಯ್ಯ ತನ್ನ ಅಣ್ಣನ ಮುಂದೆ ಯಾವಾಗಲೂ ಔದಾರ್ಯ ತೋರಿಸುತ್ತಿದ್ದರು ಹೊನ್ನಪ್ಪಯ್ಯ ತನ್ನಲ್ಲಿಗೆ ಬಂದರೆ ಹೀಗೆಲ್ಲ ಮನೆಯಲ್ಲಿ ಇದ್ದ ವಸ್ತುವನ್ನೂ ಇಲ್ಲದಂತೆ ಮಾಡುವ ಹವ್ಯಾಸಕ್ಕೆ ಹೋಗುತ್ತಿದ್ದಿಲ್ಲ.

ಎಲೆಅಡಿಕೆಯ ಸಮಾರಂಭ ಮುಗಿದೊಡನೆ ಅಣ್ಣಾಪ್ಪಯ್ಯನವರಿಗೆ ತಮ್ಮ ಅಳಿದ ಪತ್ನಿಯ ನೆನಪು ಬಂತು "ಅವಳು ಇದ್ದಿದ್ದಿರೆ .. .. ನಾನು ಇಷ್ಟೆಲ್ಲ ಕಷ್ಟಪಡಬೇಕಾಗಿರಲಿಲ್ಲ " ಎಂದು ಅವರು ಖಿನ್ನರಾಗಿ ನುಡಿದರು "ಅವಳು ಇಲ್ಲದಿದ್ದರೆ ಈಗಿನ ಇವಳು ಇದ್ದಾಳಲ್ಲ ! ಇವಳಿಂದಲೇ ಅವಳು ಬೇಗ ಹೋದಳು " ಎಂದು ಹೇಳಬೇಕೆಂದು ಸಾವಿತ್ರಿ ನಾಲ್ಕುನಾಲ್ಕು ಸಲ ಬಾಯಿ ತೆರೆದಳು ಆದರೆ ಹಾಗೆ ಹೇಳಲಿಲ್ಲ ಆ ಮಾತನ್ನು ತಾನು ಇಂಥ ಹೊತ್ತಿನಲ್ಲಿ ಹೇಳಬಾರದೆಂದು ಅವಳಿಗೂ ಗೋಚರಿಸಿತು ಬದಲು " ಈಗ ತಿಳಿಯಲಿಕ್ಕೆ ಹತ್ತಿತೋ ? ಹೆಣ್ಣು ಎಂಬುದು ಮನೆಗೆ ಕಣ್ಣು ಇದ್ದಹಾಗೆ ಎಂಬ ಮಾತು ! " ಎಂದು ಸಾವಿತ್ರಿ ಹೇಳಿದಳು. ಅಣ್ಣಾಪ್ಪಯ್ಯ, ತಮ್ಮ ಅತ್ತಿಗೆ ಆಡಿದ ಮಾತು ಅಕ್ಷರಶಃ ನಿಜವೆಂದು ಮನಸ್ಸಿನಲ್ಲೇ ತಿಳಿದುಕೊಂಡಾಯಿತು ಅವರ ಮನಸ್ಸು ಇಷ್ಟು ಹಣ್ಣಾಗಿರಬಹುದೆಂದು ಸಾವಿತ್ರಿ ಯೋಚಿಸಿರಲಿಲ್ಲ ಅವರು ಆಡಿದ ಮಾತಿನಲ್ಲಿ ದೃಢವಾಗಿ ನಂಬಿಗೆ ಇಡಬೇಕೋ ಬೇಡವೋ ಎಂಬುದನ್ನು ಅವಳಿಗೆ ನಿಶ್ಚಯಿಸಲು ಕಠಿಣವೆನಿಸಿತು ಆದರೂ ಅವರ ಧ್ವನಿಯಲ್ಲಿ ಇದ್ದ ಆರ್ತಸ್ಥಿತಿಯನ್ನು ನೆನೆದು ತನ್ನ ಮೈದುನ ಅಳಿದ ಪತ್ನಿಗಾಗಿ "ಇಷ್ಟಾದರೂ ಹೇಳಿದನಲ್ಲ " ಎಂದು ತೃಪ್ತಿಪಟ್ಟುಕೊಂಡಳು. ಅಂದು— ಏಳುವರುಷಗಳ ಹಿಂದೆ ಅಣ್ಣಾಪ್ಪಯ್ಯನವರ ಪತ್ನಿ—ಪಾರ್ವತಿಯು ಅದೆಷ್ಟು ದುಃಖದಿಂದ ಪ್ರಾಣಬಿಟ್ಟಿದ್ದಳೋ – ಅದು ಈ ಸಾವಿತ್ರಿಗಷ್ಟೆ ವಿದಿತವಾಗಿತ್ತು.

ಅಲ್ಲದೆ ಅಣ್ಣಪ್ಪಯ್ಯನವರ ಈಗಲೂ ಜೀವಿಸಿರುವ ಮನದ ರಾಣಿಯಾದ ಶಿರ್ಮೂಲೆಯ ವಿಷಯವಂತೂ ಅಂದು ಪಾರ್ವತಿಗೆ ಎಷ್ಟು ಖೇದವನ್ನುಂಟು ಮಾಡಿತ್ತೋ ಅಷ್ಟೇ ವ್ಯಥೆಯನ್ನು ಇವರೆಲ್ಲರಿಗೆ ಉಂಟು ಮಾಡಿತ್ತು ಆ ಶಿರ್ಮೂಲೆಯ ಸಲುವಾಗಿಯೇ ಪಾರ್ವತಿ ಅಷ್ಟು ಬೇಗ ಮರಣ ಹೊಂದಿದ ಳೆಂಬುದು ಸಾವಿತ್ರಿಯ ಮತ ಅದೇನೇ ಇದ್ದರೂ ಈಗಿನ ಮಟ್ಟಿಗೆ ಅಣ್ಣಪ್ಪಯ್ಯನವರಿಗೆ ಸಾಕಷ್ಟು ಜ್ಞಾನೋದಯವಾಗಿದೆ ಎನ್ನಬಹುದು ಯಾಕಂದರೆ ಪಾರ್ವತಿ ತೀರಿಕೊಂಡ ತರುವಾಯ ಅವರೇನು ಮಕ್ಕಳಿಗೆ ಕಷ್ಟಕೊಡಲಿಲ್ಲ ತಾಯಿಯಿಲ್ಲದ ಮಕ್ಕಳೆಂದು ಮಮತೆಯಿಂದ ಸಾಕುತ್ತ ಬಂದಿದ್ದರು ಆ ಒಂದು ವಿಷಯದಲ್ಲಿ ಅಣ್ಣಪ್ಪಯ್ಯ ಅವರ ಹೆಂಡತಿಯ ಆತ್ಮಕ್ಕೆ ತೃಪ್ತಿಯನ್ನೊದಗಿಸಿ ಕೊಟ್ಟರೆಂದರೆ ತಪ್ಪಾಗದು ಆಕೆ ಸಾಯುವಾಗ "ಮಕ್ಕಳನ್ನು ಬಿಟ್ಟು ಹಾಕಬೇಡಿ" ಎಂದಿಷ್ಟೇ ಹೇಳಿದ್ದಳು ಅಂತೇ ಸಾವಿತ್ರಿಗೂ ಅದೇ ಕಾಲಕ್ಕೆ "ಅಕ್ಕಾ, ನಿನ್ನ ಧೈರ್ಯದ ಮೇಲೆ ನಾನು ಪ್ರಾಣಬಿಡುತ್ತೇನೆ ನೋಡು, ನೀನೇ ಅವುಳಿಗೆ ಇನ್ನೂ ತಾಯಿ!" ಎಂದೂ ಕೇಳಿಕೊಂಡಿದ್ದಳು. ಸಾವಿತ್ರಿಯಾದರೂ ಅದೇರೀತಿ ಅವುಗಳನ್ನು ಮಮತೆಯಿಂದ ನೋಡಿಕೊಂಡು ಬಂದಿದ್ದಳು

ಹೀಗೆ, ಅವರು ಮಾತಾಡುತ್ತ ಚಾವಡಿಯಲ್ಲಿ ಕುಳಿತು, ಎಷ್ಟೋ ಹೊತ್ತು ಕಳೆದರು ಮಧ್ಯರಾತ್ರಿಯೂ ದಾಟಿತು ಅಷ್ಟರಲ್ಲಿ ಒಳಗಿನಿಂದ ಸಂಜೀವಿ ಎದ್ದು ಬಂದಳು. "ನಿಮ್ಮದು ಊಟವಾಯಿತೇ?" ಎಂದೂ ಕೇಳಿದಳು ಆಗ ಅಣ್ಣಪ್ಪಯ್ಯನವರ ಆನಂದಕ್ಕೆ ಮೇರೆಯೇ ಕಾಣದಾಯಿತು ಅವರಿಗೆ ಹೆಮ್ಮೆಯೂ ಬಂತು ಚಕ್ಕನೆ ಎದ್ದು ಆಕೆಯ ಹಣೆ ಹಿಡಿದರು. "ಜ್ವರ ಪದ್ರಾಡ್ ಹಾಕಿತು!" ಎಂದು ಒಂದೇ ಉಸಿರಿಗೆ ಹೇಳಿಯಾಯಿತು "ನೋಡು, ಸಾವಿತ್ರೀ ಹೇಗಿದೆ ಮಂತ್ರ! ನನ್ನಿ ಕಲಸಿದ ಮಂತ್ರ ಅದು! ಅವನು ಅಂಥ ವಿದ್ಯೆಯಲ್ಲಿ ಎಲ್ಲ ಹುಶಾರಿ ಆದರೆ ಏನು ಮಾಡುವುದು?" ಎನ್ನುತ್ತ ಅಳಿಯ ಊರು ಬಿಟ್ಟು ಹೋದ ನೆನಪು ಬಂದು ಮನಸ್ಸನ್ನು ನೋಯಿಸಿಕೊಂಡರು. "ಅಳಿಯಂದಿರ ವಿಷಯದಲ್ಲಿ ನಮಗೂ ನಿಮಗೂ ಒಂದೇ ಜಪ–ನಿಮ್ಮ ನನ್ನಿಯ ಪತ್ತೆಯೂ ಇಲ್ಲ, ನಮ್ಮ ಶಿವರಾಯನ ಸುದ್ದಿಯೂ ಇಲ್ಲ." ಎಂದು ಸಾವಿತ್ರಿ ಹೇಳಿದಳು ಅದಕ್ಕೆ ರಾಮದಾಸ,

" ನಮ್ಮ ಅಪ್ಪವರದ್ದೂ ನಿಮ್ಮ ದೊಡ್ಡಪ್ಪನವರದ್ದೂ ಯಾವಾಗಲೂ ವರ ಪಡೆಯುವ ವಿಷಯದಲ್ಲಿ ಒಂದೇ ಮನಸ್ಸು ಮೊದಲು ದೊಡ್ಡ ಶ್ರೀಮಂತನಿಗೆ ಕೊಡಬೇಕು–ಕೊಡಬೇಕು ಎಂದು ಕೂಡುವುದು ಆಮೇಲೆ ಸಿಕ್ಕವರ ಕುತ್ತಿಗೆಗೆ ಹೆಣ್ಣನ್ನು ಒಯ್ದು ಕಟ್ಟುವುದು ಏನೋ ಗಾದ ಹೇಳುತ್ತಾರಲ್ಲ, ಮುಂಡಾಸಿನವನು ಬರುವುದಿಲ್ಲ ಮುಟ್ಟಾಲೆಯವನಿಗೆ ಕೂಡುವುದಿಲ್ಲ ಹಾಗೆ." ಎಂದು ತಮ್ಮವರು ವರಲಾಭ ಪಡೆಯುವ ಮಾರ್ಗವನ್ನು ಸೂಚಿಸಿದ.

೨

ಕೆಲವು ವರುಷಗಳ ಹಿಂದಿನ ಸುದ್ದಿ ಇದು ಸುಮತಿಗೆ ಆಗ ಇನ್ನೂ ಮದುವೆಯಾಗಿರಲಿಲ್ಲ ಆಕೆ ಮದುವೆಯ ಪ್ರಾಯ ತುಂಬಿದವಳಾಗಿದ್ದಳು. ಅವಳ ತಂದೆ, ಹೊನ್ನಪ್ಪಯ್ಯನವರಿಗೆ ಹೋದಲ್ಲೆಲ್ಲ ಮದುವೆಗೆ ತಯಾರಾದ ತರುಣರನ್ನು ನೋಡುವ ಚಾಳಿಯೇ ಬಿದ್ದಿತ್ತು–ಆ ದಿನಗಳಲ್ಲಿ ಹೊನ್ನಪ್ಪಯ್ಯ ಎಷ್ಟೆಲ್ಲ ವರಗಳನ್ನು ನೋಡಿದ್ದರೋ ತಿಳಿಯದು ಅವರ ಮನಸ್ಸಿನಲ್ಲಿ "ಚಿಲ್ಲರೆ ಮನುಷ್ಯನಿಗೆ ಮಗಳನ್ನು ಕೊಡಬಾರದು " ಎಂದೇ ಇತ್ತು. ಊರಲ್ಲಿಯ ತಮ್ಮ ಪಂಗಡದವರ ಜಾತಕಗಳನ್ನೆಲ್ಲ ತಂದು ಕೂಡಿ ಹಾಕಿದ್ದರು ಆದರೂ ಅವುಗಳೆಲ್ಲ ಸಿರಿವಂತರ ಜಾತಕಗಳೆಂಬ ಮಬ್ಬು ಹೊನ್ನಪ್ಪಯ್ಯನವರನ್ನು ಕವಿದಿತ್ತು ಒಬ್ಬ ಜ್ಯೋತಿಷಿಯನ್ನು ಮನೆಯಲ್ಲೇ ಕೂಲಿಗೆ ಇಟ್ಟಂತೆ ಇಟ್ಟಿದ್ದರು ಅವನಿಂದ ಹಲವಾರು ಜಾತಕಗಳಿಗೆ ತನ್ನ ಮಗಳ ಜಾತಕ ಕೂಡಿ ಬರುವಂತೆ ಹೊಸಪ್ರಯೋಗವನ್ನೂ ಮಾಡಿಸಿದ್ದರು ಹೀಗೆ ಸುಮತಿಯ ಜಾತಕ ಒಂದೇ ಆಗಿರಲಿಲ್ಲ ಅದರ ಹಲವಾರು ರೂಪಾಂತರಗಳಾಗಿದ್ದವು. ಕಾಡಪತ್ರಗಳ ಮೇಲೆ ಅಂಥ ಜಾತಕಗಳು ಬರೆಯಲ್ಪಟ್ಟಿದ್ದವು ಈರೀತಿ ನಾನಾ ತರಹದ ವಿದ್ಯೆಹೂಡಿ, ಹೇಗಾದರೂ ಒಬ್ಬ ಸಿರಿವಂತ ಅಳಿಯನನ್ನು ಪಡೆಯಲು ಪ್ರಯತ್ನಿಸಿದರು. ಇದೆಲ್ಲ ಗುಪ್ತವಾಗಿಯೇ ನಡೆಯುತ್ತಿತ್ತು

ಕೊನೆಗೆ ಒಬ್ಬ ಕುಬೇರನ ವಂಶದ ವರನನ್ನು ನಿಶ್ಚಯ ಮಾಡಿದರು ಆದರೆ ಹೊನ್ನಪ್ಪಯ್ಯನವರು ಹುಡುಕಿದ ವರ ಅವರ ಮನೆಯಲ್ಲಿ ಯಾರಿಗೂ ಒಪ್ಪಿಗೆಯಾಗಲಿಲ್ಲ "ಹಣವೊಂದಿದ್ದರೆ ಸಾಕೆ? ಹುಡುಗ ಹೆಣದಂತೆ ಇದ್ದಾನೆ ಅವನನ್ನು ಇವಳ ಕೊರಳಿಗೆ ಕಟ್ಟುವುದೇ? ಈಕೆಯ ಹಣೆಯಲ್ಲಿ ಬರೆದಿದ್ದರೆ ಮುಂದೆ ಯಾಕೆ ಸಿರಿವಂತಿಕೆ ಇವಳ ಗಂಡನಿಗೆ ಬರಬಾರದು?" ಎಂದು ಸಾವಿತ್ರಿ ಹೇಳಿದಳು ಅವಳ ಮಾತು ನಿಜವೇ ಆಯಿತು ಆ ಕುಬೇರನ ವಂಶದ ಸಂಪಿಗೆಯ ನೀಲಕಂಠದಾಸರು ಒಮ್ಮೆ ಹೊತ್ತುವೇಳೆ ಇಲ್ಲದೆ ಮಧ್ಯಾಹ್ನ ಹೊತ್ತಿಗೆ ಮೂಡುಮನೆಗೆ ಬಂದರು ಅವರು ಬರುವಾಗಲೇ ಈ ಹೊನ್ನಪ್ಪಯ್ಯ ಕಣ್ಣಿಗೆ ಕನ್ನಡಕ ಹಾಕಿ, ಜೋಯಿಸ ರಾಹುಪುತ್ರನನ್ನು ಬದಿಗೆ ಕುಳ್ಳಿರಿಸಿ ಮಗಳ ಜಾತಕದ ಮುದ್ರಣ ನಡೆಸಬೇಕೇ? ಈ ರಕ್ಕಸತನಕ್ಕೆ ನೀಲಕಂಠದಾಸರು ಬಲಿಬೀಳುವವರೇ? ಅವರು ಬಂದೊಡನೆ ಎಷ್ಟುವಿವೇಕತನದಿಂದ ನಟನೆ ಮಾಡಿದರೂ ಅವರ ಬಾಯಿಯಿಂದ ಪಾರಾಗುವುದು ಕಠಿಣವಾಯಿತು ಅವರಿಗೆ ಎಷ್ಟೋ ರೀತಿಯಿಂದ ಆತಿಥ್ಯ ಮಾಡಲು ಹವಣಿಸಿದರೂ ಅವರು ಹಿಡಿದ ಹಟ ಬಿಡಲಿಲ್ಲ ಅಂದರೆ "ನಮ್ಮದೂ ನಿಮ್ಮದೂ ಬೀಗತನ ಇನ್ನೂ ಕೂಡಲಿಲ್ಲ ಹಾಗೆ ಒಮ್ಮೆಲೇ ಅಷ್ಟೆಲ್ಲ ಸತ್ಕಾರ ಪಡೆಯುವುದು ಸರಿಯಲ್ಲ" ಎನ್ನುತ್ತ ನೀಲಕಂಠದಾಸರು ಬೆಲ್ಲ ನೀರು ಮಾತ್ರ ಸ್ವೀಕರಿಸಿದರು ಅವರಲ್ಲಿ ಮಧ್ಯಾಹ್ನದ ಊಟಕ್ಕೂ ನಿಲ್ಲಲಿಲ್ಲ ಬದಲು, "ಇದೆಲ್ಲ ಏನು ನಡೆದದ್ದು?" ಎಂದು ಮೆಲ್ಲನೆ ಕಿಸೆಯೊಳಗಿನಿಂದ ಒಂದು ಜಾತಕ ತೆಗೆದು ಹೊನ್ನಪ್ಪಯ್ಯನವರ ಮುಂದೆ ಹಿಡಿದರು "ಇದು ಅಲ್ಲವೇ ನಿಮ್ಮ ಮಗಳ ಜಾತಕ?" ಎಂದು ಪ್ರಶ್ನಿಸಿದರು ಹೊನ್ನಪ್ಪಯ್ಯ ಅದನ್ನು ನೋಡಿದರು! ಅವರ ತಲೆಗೆ ಸಿಡಿಲು ಬಿದ್ದಂತಾಯಿತು ಉಪಾಯವಿಲ್ಲದೆ "ಇದನ್ನು ನಿಮಗೆ ಯಾರು ಕೊಟ್ಟರು?" ಎನ್ನಬೇಕಾಯಿತು ಅವರು.

"ನೀರಿನಲ್ಲಿ ಉಗುಳಿದರೆ ತೇಲಾಡದೆ? ನಾನು ಬಹಳ ಹೇಳುವುದಿಲ್ಲ ಸುಮ್ಮನೆ ಯಾಕೆ ನಿಷ್ಠೂರ ಮಾಡಿಕೊಳ್ಳುವುದು? ಮೇಲೆ ಉಗುಳಿದರೆ ಯಾರ ಮೋರೆಗೆ ಬೀಳುತ್ತದೆ? ನಮ್ಮ ಜಾತಿಯವರ ರಕ್ಷೆ ನಮ್ಮವರಲ್ಲೇ ಉಳಿಯಲಿ." ಎಂದು ಹೇಳಿ ನೀಲಕಂಠದಾಸರು ತಮ್ಮ ಮನೆಯ ದಾರಿ

ಹಿಡಿದರು ಹೊನ್ನಪ್ಪಯ್ಯನವರ ಮುಖ ಸುಟ್ಟ ಬದನೆಯಂತೆ ಸಣ್ಣದಾಯಿತು ಆ ತಾಡೋಲೆಯ ಪ್ರತಿಗಳನ್ನು ಬೂದಿ ಮಾಡಿದರು. ಗಂಡನ ಕುಟಿಲತನಕ್ಕೆ ಬಿದ್ದ ಪೆಟ್ಟಿಗೆ ಸಾವಿತ್ರಿಯೂ ಕೊರಗಿದಳು. ಅವಳಿಗೂ ತಿಳಿದಿತ್ತು "ಹೀಗೆ ಜಾತಕ ತಿದ್ದುವುದು ಸರಿಯಲ್ಲ" ಎಂದು ಆದರೆ ಈಗ ಅವಳು ಪತಿಗೆ, "ಹಣೆಯ ಜಾತಕ ತಿದ್ದಲಿಕ್ಕೆ ಯಾರಿಂದ ಸಾಧ್ಯ?" ಎಂದು ಹೇಳಿ ಸಮಾಧಾನ ಪಡಿಸಲು ಯತ್ನಿಸಿದಳು. ಹೊನ್ನಪ್ಪಯ್ಯನವರಿಗೆ ಆದ ಅಪಮಾನವನ್ನು ಸಹಿಸುವುದಕ್ಕೆ ಸಾಧ್ಯವಾಗಲಿಲ್ಲ "ಅದಲ್ಲ ಆ ನಮ್ಮ ವೈದಿಕ ಬರುತ್ತಾನಲ್ಲ—ಅವನ ಕಿತಾಪತಿ! ಅವನೇ 'ಜಾತಕ ತಿದ್ದಿಕೊಡುತ್ತೇನೆ' ಎನ್ನುತ್ತಿದ್ದ, ಆದರೆ ನಾನು ಅವನಿಗೆ ಕೊಡಲಿಲ್ಲ ಅದಕ್ಕಾಗಿ ಹೀಗೆ ಮಾಡಿದ ಅವನನ್ನು ಇನ್ನುಮುಂದೆ ಯಾವ ಕೆಲಸಕ್ಕೂ ಕರೆಯಬಾರದು ಅಬ್ಬ ಅವನ ಸೊಕ್ಕೇ?" ಎಂದು ತಮ್ಮ ಕುಲಪುರೋಹಿತನಿಗೆ ಬೈದೇ ಬೈದರು ಆತನೇ ಅಲ್ಲವೇ ಇಷ್ಟೆಲ್ಲ ಕಾರುಭಾರ ಮಾಡಿದ್ದು? ಮುಂದೆ ಅವನನ್ನು ಸಂದರ್ಶಿಸಿ ಕೇಳುವುದಕ್ಕೂ ಹೊನ್ನಪ್ಪಯ್ಯನವರಿಗೆ ದಾರಿ ಸಿಗಲಿಲ್ಲ. ಅದಕ್ಕಾಗಿ ಅವನನ್ನು ತಮ್ಮಲ್ಲಿಗೆ ವೈದಿಕ ಕಾರ್ಯಗಳಿಗೆ ಆಮಂತ್ರಿಸುವುದನ್ನೇ ಬಿಟ್ಟರು ಸುಮತಿಯ ಮದುವೆಯೂ ಆಗಲಿಲ್ಲ

ಆ ವರುಷ ಹೇಗೊ ದಾಟಿತು ಮುಂದೆ ಸುಮತಿಯ ಮದುವೆಯೂ ಆಯಿತು ಈ ವರುಷ ಹೊನ್ನಪ್ಪಯ್ಯ ಜಾತಕ ಹುಡುಕುವ ಸುದ್ದಿಗೇ ಹೋಗಲಿಲ್ಲ "ಅವಳ ಹಣೆಯಲ್ಲಿ ಬರೆದವನು ಬರುತ್ತಾನೆ" ಎಂದು ಕೂತಿದ್ದರು ಅವಳ ಹಣೆಯಲ್ಲಿ ಬಾಣಂಗಡಿಯ ಶಿವರಾಯನ ಹೆಸರು ಬರೆದಿರಬೇಕು ಹೇಗೂ ಅವನೊಡನೆ ಸುಮತಿಯ ಮದುವೆ ಮುಗಿಯಿತು ಮದುವೆಯ ಸಭೆಯೂ ಕಿಕ್ಕಿರಿದು ತುಂಬಿರಲಿಲ್ಲ ಇದ್ದವರಿಗೆಲ್ಲ ಆಮಂತ್ರಣ ಕೊಡುವ ಸಾಹಸಕ್ಕೆ ಹೊನ್ನಪ್ಪಯ್ಯ ಹೋಗಿರಲಿಲ್ಲ. ಯಾಕೆಂದರೆ ಅದು ಅವರ ಮನಸ್ಸಿಗೆ ತಕ್ಕಂತೆ ಆದ ಮದುವೆಯಲ್ಲ ಅವರು ಮಾಡಬೇಕೆಂದು ಹೂಡಿದ ಮದುವೆಯೂ ಅಲ್ಲ ಅದೇನೇ ಇರಲಿ, ಸುಮತಿಗೆ ಒಬ್ಬ ಗಂಡ ದೊರೆತ ಆಕೆಗೆ ಬಾಣಂಗಡಿ ಹೋದಳು ಮೂಡುಮನೆಯು ಬರಿದಾದಂತೆ ಅನಿಸಿತು ಸಾವಿತ್ರಿಗೆ. ಗಂಡನ ಮನೆಯಲ್ಲಿ ಮಗಳನ್ನು ಅತ್ತೆ ಹೇಗೆ ನಡೆಸಿಕೊಳ್ಳುತ್ತಾಳೋ ಏನೋ ಎಂಬ ಚಿಂತೆಯೂ ಸಾವಿತ್ರಿಯ ಮನದಲ್ಲಿ ಮೂಡಿತು

ಬುಡದಲ್ಲಿ ತಾಯಿಬೇರು ಕಾಣದಂತೆ ಕೊತು, ಮೇಲೆ ಬೆಳೆದಿರ ವ ಬಳ್ಳಿಯ ಹೂ ಹೇಗೆ ಇದೆಯೋ ಎಂದ ಚಿಂತಿಸುವಂತೆ ಸಾವಿತ್ರಿಯ ವಾತ್ಸಲ್ಯದ ಮಾತೃ ಹೃದಯ ಒಳಗಿಂದೊಳಗೆ ವ್ಯಥೆಪಡುತ್ತ ಇತ್ತು

ಹೊನ್ನಪ್ಪಯ್ಯ ಮಗಳ ಜಾತಕ ತಿದ್ದಿದರೇನೋ ನಿಜ ಆದರೆ ಮುಂದೆ ಬರುವ ಘಾತಕಗಳನ್ನು ತಡೆಯುವುದು ಅವರಿಂದ ಆಗಲಿಲ್ಲ ಒಟ್ಟಿನಲ್ಲಿ ಸಾವಿತ್ರಿ ಹೇಳುವಂತೆ "ಬ್ರಹ್ಮ ಹಣೆಯಮೇಲೆ ಬರೆದ ಜಾತಕವೇ ಜಾತಕ" ಎನ್ನುವಂತಾಯಿತು ಸುಮತಿಯ ಪಾಡು ಆಕೆಗಿನ್ನೂ ಮದುವೆಯಾದಾಗ ಹದಿಮೂರು ವರುಷ ಪ್ರಾಯವಿತ್ತು ಅವಳಿಗೆ ಈ ಜಾತಕಗೀತಕಗಳು ತಂದ ಘಾತಕದ ಅರಿವೇ ಇರಲಿಲ್ಲ ಮದುವೆ ಎಂದರೆ ಏನೋ ಒಂದು ಹುಡುಗಾಟ ಎಂದು ತಿಳಿದಿದ್ದಳು ಗಂಡನ ಮುಖವನ್ನು ಕೂಡಾ ಆಕೆ ನೋಡಿರಲಿಲ್ಲ ಮದುವೆಯ ಮಟಂಪದಲ್ಲಂತೂ ಸುಮತಿ ತಲೆಯೆತ್ತಿದ್ದೇ ಇಲ್ಲ ಮುಂದೆ ಮದುವೆ ಮುಗಿದು ಮಾವನ ಮನೆಗೆ ಮುಟ್ಟಿದರೂ ಅತ್ತೆಯ ಕಾಟದಿಂದ ಆಕೆ ಬಳಲಬೇಕಾಯಿತು ಗಂಡ ಚಾವಡಿಯಲ್ಲಿ ಇದ್ದರೆ ಈಕೆ ಒಳಗೆ ಅಡುಗೆಮನೆಯ ಹೊಗೆಯಲ್ಲೆ ಉಸಿರಾಡಿಸಬೇಕಿತ್ತು ಗಂಡ ಶಿವರಾಯನೂ ಒಂದು ತರಹದ ವ್ಯಕ್ತಿಯಾಗಿದ್ದ ಅವನ ತಂದೆ ಇಲ್ಲದ್ದರಿಂದ ಅವನ ತಾಯಿಯೇ ಮನೆಯ ಯಜಮಾನಿ ಆಗಿದ್ದಳು ಮಗನನ್ನು ಹಿಡಿತದಲ್ಲಿ ಇಟ್ಟ ಆಕೆಗೆ ಸೊಸೆಯನ್ನು ಸೆರೆಹಿಡಿಯುವುದು ಹೇಗೆ ತಾನೇ ಕಷ್ಟವಾದೀತು? ಸುಮತಿಗೆ ತನ್ನ ಲತ್ತೆಯ ಅತ್ತೆಯ ಪರಿಚಯ, ಮೊಟ್ಟಮೊದಲು ಅತ್ತೆಯ ಮನೆಯನ್ನು ಎಡಕಾಲು ಒಳಗೆ ಇಟ್ಟು ಪ್ರವೇಶಿಸಿದ್ದಕ್ಕೆ ಸಿಕ್ಕ ಪೆಟ್ಟಿನಿಂದಲೇ ಆಗಿತ್ತು "ನನ್ನ ಮನೆಗೆ ವಿಧಿಯು ಪ್ರವೇಶವಾಯಿತು" ಎಂದು ಅಂದೇ ಅವಳ ಅತ್ತೆ ಪ್ರಚಾರ ಪಡಿಸಿದ್ದಳು

ಹೇಗೂ ದಿನಗಳು ಕಳೆಯುತ್ತಿದ್ದವು ಶಿವರಾಯನಿಗೆ ತನ್ನ ಬಾಣಂಗಡಿ ಬೇಸರ ಹುಟ್ಟಿಸಿತು ತನ್ನಿಬ್ಬರು ಅಣ್ಣಂದಿರಂತೆ ತಾನೂ ಗಟ್ಟಿ, ಹತ್ತಬೇಕೆಂಬ ಆಸೆ ಉದಯವಾಯಿತು ಅವರಿಬ್ಬರೂ ಸಾಕಷ್ಟು ಹಣಗಳಿಸಿದ್ದರು ಅವರ ಖರ್ಚಿನಿಂದಲೇ ಇವನ ಮದುವೆಯಾಗಿತ್ತು ಒಬ್ಬನು ಪುನಾದಲ್ಲಿ ಇದ್ದನು ಮತ್ತೊಬ್ಬ ಹರಿಹರದಲ್ಲಿ ಇದ್ದ ತಾನು ಅವರ ಮನೆಗೆ ಹೋಗಬಾರದು.

ಎಂದು ಏನೇನೋ ವಿಚಾರಿಸುತ್ತ ಆತ ಊರು ಬಿಡುವ ಯೋಚನೆ ಹೂಡಿದ ಬಹಳ ದಿನಗಳನ್ನೂ ಮುಂದೆ ಅವನು ಬಾಣಂಗಡಿಯಲ್ಲಿ ಕಳೆಯಲಿಲ್ಲ ರಾತ್ರಿಯಲ್ಲಿ ಯಾರಿಗೂ ಪತ್ತೆಯಿಲ್ಲದಂತೆ ಊರು ಬಿಟ್ಟು ಮೋಟರು ಹತ್ತಿ ಬಿಟ್ಟ ಹೋಗುವಾಗ ತಾಯಿಯ ಖಜಾನೆಯ ಅರ್ಧಪಾಲನ್ನು ಹಾರಿಸಿದ್ದ ಇದು ಅವಳಿಗೆ ಬಹಳ ದಿನಗಳ ಪರ್ಯಂತ ತಿಳಿಯಲಿಲ್ಲ ಯಾಕಂದರೆ, ಅವಳು ದಿನದಿನವೂ ಹಣ ಲೆಕ್ಕಮಾಡುತ್ತಿರಲಿಲ್ಲ ಹಾಗೆ ಗುಣಿಸುವುದೂ ಸಾಧ್ಯವಿರಲಿಲ್ಲ ಚಾವಡಿಯ ಮೂಲೆಯಲ್ಲಿ ಹೊಂಡ ತೋಡಿ, ಒಂದು ಹಣ ತುಂಬಿದ ಗಡಿಗೆ ಹುಗಿಸಿಟ್ಟಿದ್ದಳು. ಅದರಲ್ಲಿ ಐನೂರು ರೂಪಾಯಿಗಳಿಗೆ ಕಡಿಮೆ ಹಣ ಇದ್ದಿಲ್ಲ ಇದು ಶಿವರಾಯನಿಗೆ ಗೊತ್ತಿತ್ತು ಅದನ್ನು ಅವನು ಉಪಯೋಗಿಸಿದ ಎಲ್ಲ ರೂಪಾಯಿಗಳನ್ನು ಒಯ್ದಿರಲಿಲ್ಲ ಕೇವಲ ನೂರು ರೂಪಾಯಿಗಳನ್ನು ಒಂದು ಚೀಲದಲ್ಲಿ ಹಾಕಿ ಒಯ್ದಿದ್ದ ಐನೂರುರೂಪಾಯಿಗಳನ್ನು ಹೊರುವುದು ನೋಟುಗಳನ್ನು ಹೊತ್ತಹಾಗೆ ಸುಲಭದ ಕೆಲಸವಾಗಿರಲಿಲ್ಲ ಕಾರಣ ತನ್ನ ಪಾಲಿಗೆ ಸಿಗುವಷ್ಟೋ ಅಥವಾ ತನ್ನಿಂದ ಒಯ್ಯಲಿಕ್ಕೆ ಸಾಧ್ಯವಾದಷ್ಟೋ ಹಣವನ್ನು ಆತ ಕೊಂಡುಹೋದ

ಮಗ ಓಡಿ ಹೋಗಿದ್ದರೂ ತನ್ನ ಖಜಾನೆ ಓಡಿ ಹೋಗಿರಲಿಕ್ಕಿಲ್ಲ ಎಂಬ ಭಾವನೆಯಿಂದ ಸುಮತಿಯ ಅತ್ತೆ ನಿಶ್ಚಿಂತೆಯಿಂದ ಇದ್ದಳು ಈಕೆಗೆ ಬಾಣಂಗಡಿಯಲ್ಲಿ, ಅಷ್ಟೇನು ದೊಡ್ಡದಲ್ಲದಿದ್ದರೂ ಅವಳ ಚಿಕ್ಕ ಸಂಸಾರಕ್ಕೆ ಸಾಕಾಗುವಷ್ಟು ಆಸ್ತಿ ಇತ್ತು ಅದರಿಂದ ಅವಳ ಮತ್ತು ಶಿವರಾಯನ ಜೀವನ ಸಾಗುತ್ತಿತ್ತು ಉಳಿದ ಇಬ್ಬರು ಮಕ್ಕಳು ಗಟ್ಟಿ ಹತ್ತಿ ಸಾಕಷ್ಟು ದುಡ್ಡು ಮಾಡಿದ್ದರಷ್ಟೆ ಅವರಿಂದ ತಿಂಗಳಿಗೆ ಹತ್ತೋ ಹದಿನೈದೋ ರೂಪಾಯಿಗಳು ಬರುತ್ತಿದ್ದವು ಅವುಗಳಲ್ಲಿ ನಾಲ್ಕೈದು ರೂಪಾಯಿಗಳನ್ನು ಮೂರ್ನಾಡಿನ ತನ್ನ ಮಗಳಿಗೆ ರವಾನಿಸುತ್ತಿದ್ದಳು ಉಳಿದ ರೂಪಾಯಿಗಳನ್ನು ಶೇಖರಿಸಿ ಇಟ್ಟು, ನಾಲ್ಕಾರು ತಿಂಗಳಿಗೊಮ್ಮೆ ಚಾವಡಿಯ ನೆಲವನ್ನು ಅಗೆದು, ಅಲ್ಲಿರುವ ಹಂಡೆಯಲ್ಲಿ ತುಂಬಿಸಿ ಭದ್ರವಾಗಿ ಇಡುತ್ತಿದ್ದಳು ಮಗ ಎಲ್ಲಿಯಾದರೂ ಒಂದೆರಡು ರೂಪಾಯಿ ಬಿಟ್ಟು ನಾಲ್ಕಾರಾಣೆ ಕೇಳಿದರೂ ಗಂಟು ಬಿಚ್ಚುವವಳಲ್ಲ ಆದರೆ ಶಿವರಾಯನಿಗೆ ತನ್ನ ತಾಯಿ ಮೂರ್ನಾಡಿನಲ್ಲಿರುವ ಮಗಳಿಗೆ ಸಲ್ಲಿಸುವ ಕಾಣಿಕೆಯ ವಿಷಯ ಗೊತ್ತಿರಲಿಲ್ಲ ಎಂದಲ್ಲ. ಅದಕ್ಕಾಗಿ ಅವ

ನಿಗೆ ಹೊಟ್ಟೆಯಲ್ಲಿ ಅಸಮಾಧಾನವೂ ಹುಟ್ಟುತ್ತಿತ್ತು ಆದ್ದರಿಂದ ಅವನಿಗೆ ಬುದ್ಧಿ ಕಲಿಸಬೇಕೆಂದು ಯೋಚನೆ ಹೂಡಿದ ಅದರಂತೆ ಮಾಡಿಯೂ ಬಿಟ್ಟ.

ಶಿವರಾಯ ಊರು ಬಿಟ್ಟು ಒಂದು ತಿಂಗಳು ದಾಟಿತು ಆದರೂ ಚಾವಡಿಯಲ್ಲಿ ಹೂತಿಟ್ಟ ಧನ ಸಾಗಿಸಿದ್ದಾನೆಂಬುದು ಅವಳಿಗೆ ತಿಳಿಯಲಿಲ್ಲ ಮಗನಿಗೆ ಖರ್ಚಿಗೆ ಹಣ ಯಾರು ಕೊಟ್ಟರೆಂಬುದೂ ತಿಳಿಯಲಿಲ್ಲ ಅವಳಿಗೆ ಆದರೆ ಆತ ಗಟ್ಟ ಹತ್ತಿದ ಎಂಬುದು ಖಾತ್ರಿಯಾಯಿತು ಆ ಸುದ್ದಿ ಅವನು ಮನೆಬಿಟ್ಟು ಎಂಟೇ ದಿನಗಳಲ್ಲಿ ಗೊತ್ತಾಗಿತ್ತು ಎಲ್ಲಾದರೂ ಒಳಗಿನ ದೇವರ ಡಬ್ಬಿಯ ಹಣ ಹೊತ್ತಿದ್ದಾನೋ ಎಂಬುದನ್ನೂ ಖಚಿತ ಮಾಡಿದಳು ಆಕೆ ದೇವರ ಡಬ್ಬಿಗೆ ಅವನು ಮುಟ್ಟಿರಲಿಲ್ಲ ಅಂತೇ ಒಳಗೆ ಇರುವ ತನ್ನ ಟ್ರಂಕಿನ ಬೀಗ ಗೀಗ ಕೊಡೆಕಡ್ಡಿಯಿಂದ ಹಾರಿಸಿ ಹಣ ಒಯ್ದಿರುವನೋ ಎಂದೂ ನೋಡಿದಳು ಆಕೆ ಇಟ್ಟಷ್ಟೇ ಹಣ ಟ್ರಂಕಿನಲ್ಲಿ ಇತ್ತು ಆದರೆ ಚಾವಡಿಯ ಮೂಲೆಯಲ್ಲಿ ನೆಲದ ಬುಡದಲ್ಲಿ ಹೂತಿಟ್ಟ ಹಣವನ್ನು ಪರೀಕ್ಷಿಸಲು ಆಕೆ ಮನಸ್ಸು ಮಾಡಲಿಲ್ಲ ಅದನ್ನು ಆತನಿಂದ ತೆಗೆಯಲಿಕ್ಕೂ ಸಾಧ್ಯವಿಲ್ಲ ವೆಂಬುದು ಅವಳಿಗೆ ಖಂಡಿತವಾಗಿತ್ತು ಚಾವಡಿಯ ಮೂಲೆಯನ್ನು ಅಗೆದ ಕುರುಹುಗಳಾವುವೂ ಕಾಣುತ್ತಿರಲಿಲ್ಲ. ಅಲ್ಲದೆ ರಾತ್ರಿಯಲ್ಲಿ ಆ ಮೂಲೆ ಯಲ್ಲಿ ಅವಳು ಹಾಸಿಗೆ ಹಾಸಿ ನಿದ್ರಿಸುತ್ತಿದ್ದಳು ಹಗಲಲ್ಲಿ ಅವಳ ಹಾಸಿಗೆ ಆ ಮೂಲೆಯನ್ನು ಕಾಯುತ್ತಿತ್ತು ಎಂದಮೇಲೆ ಶಿವರಾಯ ಅಲ್ಲಿರುವ ಹಣಕ್ಕೆ ಮುಟ್ಟಿರಲಿಕ್ಕಿಲ್ಲವೆಂದೇ ನಿರ್ಧರಿಸಿದಳು ಹೊರತು ಚಾವಡಿಯ ಹೊರಗೆ ಬಂದು, ಮನೆಯ ಹಿಂದುಕಡೆಯಲ್ಲಿ--ಚಾವಡಿಯ ಮೂಲೆಯ ಬುಡಕ್ಕೆ ತೋಡಿದ ಬಾವಿಯನ್ನು ನೋಡುವ ಪ್ರಸಂಗ ಅವಳಿಗೆ ಬೀಳಲಿಲ್ಲ ಅಲ್ಲದೆ ಮನೆಯ ಹಿಂದೆ ಹಾಗೆ ಯಾವಾಗಲೂ ಹೋಗಲಿಕ್ಕೆ ಸಾಧ್ಯವಿರಲಿಲ್ಲ ಯಾಕೆಂದರೆ ಅಲ್ಲಿಯ ದಾರಿ ಇಕ್ಕಟ್ಟಾಗಿತ್ತು ಮತ್ತು ಅಲ್ಲಿಂದ ಹೋಗುಬರುವ ದಾರಿಯೂ ಇರಲಿಲ್ಲ ಅದೂ ಅಲ್ಲದೆ ಹಿಂದೆ ಎತ್ತರವಾದ ಗುಡ್ಡದ ಬದಿಯೂ ಒಂದು ಗೋಡೆಯಂತೆ ಇವರ ಮನೆಯ ಗೋಡೆಗೆ ಮುಖಮಾಡಿ ನಿಂತಿತ್ತು

" ಮನೆಯಲ್ಲಿ ಹೇಳದೆ ಶಿವರಾಯ ಊರು ಬಿಟ್ಟಿದ್ದಾನೆ " ಎಂಬ ಸುದ್ದಿ ಯನ್ನು ಮೂಡುಮನೆಗೆ ಅವಳು ತಿಳಿಸಲಿಲ್ಲ ಆದರೆ ಅವರಿಗೆ ಈ ವಿಷಯ

ಕೆಲವೇ ದಿನಗಳಲ್ಲಿ ಗೊತ್ತಾದೊಡನೆ ಮಗಳನ್ನು ಇನ್ನು ಅತ್ತೆಯ ಮನೆಯಲ್ಲಿ ಬಿಡುವುದು ಸರಿಯಲ್ಲವೆಂದು ಬಗೆದು, ಸಾವಿತ್ರಿ ಸುಮತಿಯನ್ನು ಕರೆದು ತರಲು ಹೋದಳು ಅತ್ತೆ ಕಳುಹಿಸಲಿಲ್ಲ "ಮನೆಯಲ್ಲಿ ನಾನೊಬ್ಬಳೇ ಹೀಗೆ ಭೂತದ ಹಾಗೆ ಕೂಡಲಿ? ಮಗನೂ ಓಡಿ ಹೋದ" ಎಂದಳು ಆಕೆ. "ಕೆಲ ದಿನಗಳ ಮಟ್ಟಿಗಾದರೂ ಕಳುಹಿಸಿರಿ" ಎಂದರೂ "ಸಾಧ್ಯವಿಲ್ಲ" ಎಂದೇ ಉತ್ತರಿಸಿದಳು "ಬೇಕಾದರೆ ಮಳೆಗಾಲದ ಬೇಸಾಯ ಮುಗಿದ ಮೇಲೆ, ಮಾರ್ನಾಡು ಮಹಾದೇವ ಮತ್ತು ನಮ್ಮ ಸುಬ್ಬಿ ಬರುತ್ತಾರೆ–ಆಗ ಇವಳು ಹೋಗಲಿ" ಎಂದು ಆಕೆ ಹೇಳಿದಳು. "ಎಷ್ಟೆಂಪರೂ ಕೊಟ್ಟ ಹೆಣ್ಣು ಕುಲದ ಹೊರಗೆ" ಎಂದು ಸಾವಿತ್ರಿ ಹೇಳಬೇಕಾಯಿತು "ಮಗಳ ಶೋಭನಪ್ರಸ್ತ ಮಾಡದ್ದೇ ನಮ್ಮ ದೊಡ್ಡ ತಪ್ಪು ಪ್ರಸ್ತ ಮಾಡಲಿಲ್ಲ ಎಂಬ ಸಿಟ್ಟನಿಂದ ಊರು ಬಿಟ್ಟನೋ ತಿಳಿಯದು" ಎಂದು ಸಾವಿತ್ರಿ ಹೇಳಿದಳು. ಅದಕ್ಕೆ ಅವಳು "ಶೋಭನದ ದಿನವನ್ನೂ ಗೊತ್ತು ಮಾಡಿದ್ದೆ, ಭಟ್ಟರಿಗೂ ಹೇಳಿದ್ದೆ—ಅವನು ಇರುತ್ತಿದ್ದರೆ ಇವತ್ತೇ ಶೋಭನ ಆಗುತ್ತಿತ್ತು" ಎಂದು ಉತ್ತರಿಸಿದಳು ಸರಿ, ಮುಂದ ಬಹಳ ಮಾತು ಆ ಬಗ್ಗೆ ಮುಂದುವರಿಸದೆ ಸಾವಿತ್ರಿ ತನ್ನ ಮನೆಯ ದಾರಿ ತುಳಿಯಬೇಕಾಯಿತು "ಮಗಳು ತಮ್ಮಲ್ಲೇ ಉಳಿಯಬೇಕಾಯಿತು" ಎಂಬ ನಿರ್ಧಾರಕ್ಕೂ ಆಕೆ ಬಂದಳು ಅತ್ತೆಯ ಕಾರುಭಾರದಲ್ಲಿ ಸುಮತಿಯು ಉಳಿಯುವುದೂ ಕಷ್ಟವಾಗಿತ್ತು. ಗಂಡನಿಗೆ ಬೇಡವಾದ ಮೇಲೆ ಗುಂಡುಕಲ್ಲಿಗೂ ಬೇಡವಾದಂತೆ ಕೆಲವು ದಿನಗಳು ಹೇಗೂ ಕಳೆದವು ಮುಂದೆ "ಗಂಡನನ್ನು ಓಡಿಸಿದವಳು ನೀನೇ" ಎಂದು ಅತ್ತೆ ಶಪಿಸಲಿಕ್ಕೂ ಪ್ರಾರಂಭಿಸಿದಳು

ದಿನಗಳು ಕಳೆದಂತೆ ಮಳೆಗಾಲವೂ ಸಮೀಪಿಸಿತು ಶಿವರಾಯ ಊರು ಬಿಟ್ಟು ಎರಡು ತಿಂಗಳು ಪೂರ್ಣ ಆಗಿರಲಿಲ್ಲ ಮಳೆಗಾಲ ಹಿಡಿದೇ ಬಿಟ್ಟಿತು. ಭೂಮಿಯೆಲ್ಲ ತೊಯ್ದು ಹೋಯಿತು. ಹಸಿ ಮಣ್ಣು ಕುಸಿದು ಬೀಳುತ್ತಿತ್ತು ಹಲವಾರು ಕಡೆಗಳಲ್ಲಿ ಬಾಣಂಗಡಿಯ ಸುಮತಿಯ ಮನೆಯು ಮೊದಲೇ ಜವುಳು ಪ್ರದೇಶದಲ್ಲಿ ಇದೆಯಷ್ಟೆ ಮಳೆಗಾಲದಲ್ಲಿ ಆ ಮನೆಗೂ ಹೊರಗಿನ ಗದ್ದೆಗೂ ಹೆಚ್ಚಿನ ವ್ಯತ್ಯಾಸಗಳು ಕಂಡುಬಾರವು ಅದರಲ್ಲೂ ಚಾವಡಿಯಂತೂ ಒದ್ದೆ ಮುದ್ದೆಯಾಗಿರುತ್ತದೆ. ಆ ಒದ್ದೆ ನೆಲದ ಮೇಲೆ ಸುಮತಿಯ ಅತ್ತೆ

ಎಂಥ ಕೊರೆ ಚಳಿಗೂ ಮಲಗುವವಳು. ಅವಳ ಹಾಸಿಗೆಯೂ ಅಲ್ಲಿಯೇ ಇರುತ್ತದೆ

ಹೀಗೆ ನೆಲವೆಲ್ಲ ತೊಯ್ದು ಹಸಿಯಾದ ಒಂದು ದಿನ ಬೆಳಗಾಗುವ ಹೊತ್ತು ಹೊರಗೆ ಚೆನ್ನಾಗಿ ಮಳೆ ಬೀಳುತ್ತಿತ್ತು ಸುಮತಿಯ ಅತ್ತೆ ಲಗುಬಗೆಯಿಂದ ಹಾಸಿಗೆ ಬಿಟ್ಟು ಎದ್ದಳು ಸೊಸೆ ಇನ್ನೂ ಎದ್ದಿರಲಿಲ್ಲ ಆಕೆ ಒಳಗೆ ಮಲಗಿದ್ದಳು "ಅಬ್ಬ ಇವಳಿಗೆ ಕಲಿನಿಷ್ಟೆ ಹಿಡಿದದ್ದೇ" ಎಂದು ಶಪಿಸುತ್ತ ಅತ್ತೆ ಎದ್ದು ಹಾಸಿಗೆ ಮಡಚತೊಡಗಿದಳು ಹಾಸಿಗೆ ಸುರುಳಿಯನ್ನು ಸರಿಸಿ ಚಾವಡಿಯ ಮೂಲೆಗೆ ಕಳುಹಿಸುವಾಗ ಒಮ್ಮೆಲೆ ಆ ಮೂಲೆ ಕುಸಿದು ಕೆಳಗೆ ಇಳಿಯಿತು, ಇವಳೂ ಅದರಲ್ಲಿ ಬೀಳವುದರಲ್ಲಿ ಇದ್ದಳು! ಆದರೆ ಫಕ್ಕನೆ ಇತ್ತ ಸರಿದಳು "ಅಯ್ಯೋ ಗೋಡೆ ಬಿತ್ತು" ಎಂದು ಬೊಬ್ಬಿಟ್ಟಳು ಗೋಡೆ ಬಿದ್ದಿರಲಿಲ್ಲ ಇವಳ ಹಾಸಿಗೆ ಮಾತ್ರ ಹೊಂಡದಲ್ಲಿ ಇಳಿದಿತ್ತು ಅತ್ತೆಯ ಬೊಬ್ಬೆಗೆ ಸೊಸೆ ಎದ್ದು ಹೊರಗೆ ಬಂದಳು ಇದ್ದಕ್ಕಿದ್ದ ಹಾಗೇ ಚಾವಡಿಯ ಮೂಲೆಯು ಕುಸಿದು ಕೆಳಗೆ ಹೋದುದರಿಂದ ಹೊರಗಿನಿಂದ ಬೆಳಕೂ ಕಾಣತೊಡಗಿತ್ತು ಅತ್ತೆಗೆ ಆ ವಿಸ್ಮಯದ ಅರ್ಥ ತಿಳಿಯಲಿಲ್ಲ "ಪುಣ್ಯಕ್ಕೆ ನೀವು ಮಲಗಿದಾಗ ಮೂಲೆ ಜರಿಯಲಿಲ್ಲ!" ಎಂದು ಸೊಸೆ ಅತ್ತೆ ಪಾರಾದದ್ದಕ್ಕೆ ಹಿಗ್ಗಿದಳು "ನಾನು ಅದರಲ್ಲಿ ಬಿದ್ದಿದ್ದರೆ ನಿನಗೆ ಸಂತೋಷವಾಗುತ್ತಿತ್ತು" ಎನ್ನುತ್ತ ಹೊಂಡದಲ್ಲಿ ಬಿದ್ದ ಹಾಸಿಗೆಯನ್ನು ಮೇಲೆ ಎಳೆಯಲು ತವಕಿಸಿದಳು ಅವಳಿಂದ ಅದನ್ನು ಮೇಲೆ ಹಾಕಲು ಸಾಧ್ಯವಾಗಲಿಲ್ಲ ಕೊನೆಗೆ ಸೊಸೆಯೂ ಸಹಾಯಕ್ಕೆ ಬಂದಳು ಅವರಿಬ್ಬರೂ ಕೂಡಿ ಹಾಸಿಗೆ ಮೇಲೆ ಎಳೆದು ಹಾಕಿದರು ಮಳೆಯ ನೀರನ್ನು ಕುಡಿದು ಅದು ಅಷ್ಟು ಭಾರವಾಗಿತ್ತು ಸೊಸೆ ಆ ಹೊಂಡವನ್ನು ಇಣಿಕಿ ನೋಡಿದಳು ಮಡಿಕೆಯ ಚೂರುಗಳು ಕಂಡವು ಹತ್ತಾರು ರೂಪಾಯಿಗಳು ಚದರಿ ಬಿದ್ದವು "ಓ! ಇದು ಕೊಪ್ಪರಿಗೆ" ಎನ್ನುತ್ತ ಕುಣಿದಾಡುವುದೊಂದೇ ಉಳಿದಿತ್ತು ಸುಮತಿ ಆದರೆ ಅತ್ತೆ ಸಪ್ಪಗಾಗಿ ಕೊಪ್ಪರಿಗೆಯ ಹಣವನ್ನು ಮಣ್ಣಿನಿಂದ ಹೆಕ್ಕತೊಡಗಿದಳು ಹಾಗೆ ಬಗ್ಗಿ ರೂಪಾಯಿ ಹುಡುಕುವಾಗ ಗೋಡೆಯ ಒಂದು ಹೆಂಟೆ ಅವಳ ತಲೆಗೆ ಬೀಳಲು ಪ್ರಯತ್ನಿಸಿತು ಆ ಗೋಡೆ ಬೀಳುತ್ತದೆಂದು ಆಕೆಗ ಖಾತ್ರಿಯಾಯಿತು ಮುಂದೆ ಜಾಗ್ರತೆಯಿಂದ ರೂಪಾಯಿ

ಗಳನ್ನು ಸಂಗ್ರಹಿಸಿದಳು ಹೊರಗೆ ಹೋಗಿ ನೋಡಿದಾಗ " ಹೋ ! ಕಳ್ಳ ಕದೀಮ ಇಲ್ಲಿಂದ ಸುರಂಗ ಹೊಡೆದು ಹಣ ಹೊತ್ತಿದ್ದಾನೆ " ಎಂಬ ಮಾತು ಗಳು ಅತ್ತೆಯ ಬಾಯಿಯಿಂದ ಬಂದವು " ಹಾಳಾಗಿ ಹೋಗಲಿ ಅವನು " ಎಂದು ಶಾಪವನ್ನೂ ಮಗನಿಗೆ ಕೊಟ್ಟಳು ಅಂದು ಊಟವನ್ನೂ ಆಕೆ ಮಾಡಲಿಲ್ಲ ಸುಮಾರು ಇನ್ನೂರು ರೂಪಾಯಿಗಳನ್ನು ಮಣ್ಣಿನಿಂದ ಹೆಕ್ಕಿ ಕೊಂಡು ಒಯ್ದು ಒಂದು ಗಡಿಗೆಯಲ್ಲಿ ಹಾಕಿ ತೊಳೆದಳು ಅವುಗಳನ್ನು ಗಂಟು ಕಟ್ಟಿಯೂ ಆಯಿತು ಮಗನ ಮೇಲೆ ಕ್ರೋಧ ಉಕ್ಕಿ ಉಕ್ಕಿ ಮುಖ ಕಂಪಾಯಿತು ಸಂಜೆಯ ಹೊತ್ತಿನಲ್ಲಿ ಸೊಸೆಯನ್ನು ಕರೆದಳು

" ಸುಮ್ಮೀ " ಎಂದು ಸ್ವಲ್ಪ ಬಿರುಸಾಗಿ ಸ್ವರ ಎಳೆದಳು

" ಓ " ಎನ್ನುತ್ತ ಸುಮತಿ ಬಂದಳು

" ನಿನ್ನ ಚಿನ್ನ ಒಡವೆಗಳನ್ನೆಲ್ಲ ತಾ ಇಲ್ಲಿ "

" ನೀವೇ ತೆಗೆದುಕೊಳ್ಳ ಬಹುದು "

" ತರುತ್ತೀಯೋ ಅಥವಾ ಪೊರಕೆಯ ಪೂಜೆ ಮಾಡಲೇ ? " ಅತ್ತೆಯ ಈ ಬೆದರಿಕೆಗೆ ತನ್ನ ತವರು ಮನೆಯವರು ಮಾಡಿಸಿ ಹಾಕಿದ್ದ ಚಿನ್ನಾಭರಣ ಗಳನ್ನು ತಂದು ಅವಳ ಮುಂದೆ ಇಟ್ಟಳು ಸುಮತಿ

" ಇನ್ನು ನಿನ್ನ ತವರು ನಿನಗೆ " ಎಂದು ಹೇಳಿ ಆ ಆಭರಣಗಳನ್ನು ತನ್ನ ವಶಪಡಿಸಿಕೊಂಡಳು ಅತ್ತೆ ಆ ಮೇಲೆ ಅವುಗಳನ್ನು ಗಂಟು ಕಟ್ಟಿ ಇಟ್ಟಳು ಸುಮತಿಗೆ ಇದೆಲ್ಲ ಕಂಡು ಹೆದರಿಕೆ ಆಯಿತು. ದುಃಖವೂ ಬಂದಿತು ಅಳುತ್ತ ಒಳಗೆ ಹೋಗಿ ಕುಳಿತಳು. ಹೊತ್ತು ಸಾಗುತ್ತಲೇ ಇತ್ತು ರಾತ್ರಿಯಾಯಿತು ಅಂದಿನ ಇಡೀ ದಿವಸ ಅತ್ತೆ ಅನ್ನ ಬಾಯಿಗೆ ಒಯ್ದಿರಲಿಲ್ಲ. ಸುಮತಿಯೂ ಉಂಡಿರಲಿಲ್ಲ ಮರಿ ಕಳೆದ ಫಣಿಯಂತೆ ಇದ್ದಳು ಅತ್ತೆ. ರಾತ್ರಿಯಲ್ಲಿ ತನ್ನ ಒಕ್ಕಲುಗಳನ್ನು ಕರೆದು ಹೇಳಿದಳು. ಅದೆಲ್ಲ ಸುಮತಿಗೆ ತಿಳಿಯಲಿಲ್ಲ ಅವರು ಹೋದ ಮೇಲೆ ಪುನಃ ಸೊಸೆ ಯನ್ನು ಕರೆದಳು.

" ಎಲ್ಲಿ ಹೋದಿ ? "

" ಯಾಕೆ ? " ಎಂದು ಅಳುತ್ತ ಸುಮತಿ ಅತ್ತೆಯ ಮುಂದೆ ನಿಂತಳು

" ಈ ಅಳುವ ಬಯಲಾಟ ಬೇಡ   ನಾಳೆ ನೀನು ತವರಿಗೆ ಹೋಗು ನಾನು ನನ್ನದಾರಿ ಹಿಡಿಯುತ್ತೇನೆ   ನಿನಗೆ ಹೇಗಾದರೂ ಮನೆತನದ ಆಸೆ ಇಲ್ಲ   ನನಗಾದರೂ ಅದು ಯಾಕೆ ಬೇಕು? " ಎಂದಳು ಅತ್ತೆ

" ನನ್ನ ಚಿನ್ನ ? "

" ನಾಚಿಗೆಗೇಡು ! ನಿನಗೆ ಚಿನ್ನವೋ ಬೆನ್ನಿಗೆ ಏಟೋ ? ಹೋಗು ನಿನ್ನ ಗಂಡನ ಹಿಂದೆ ! ಇಲ್ಲದಿದ್ದರೆ   ಬೇಕಾದಲ್ಲಿ ಹೋಗು   ಈ ಚಿನ್ನ ನಿನಗೆ ಸಿಗದು   ಗಂಡನಿಗೆ ಹೇಳಿ ರೂಪಾಯಿ ಕಳವು ಮಾಡಿಸಿ ಊರು ಬಿಟ್ಟು ಕಳುಹಿಸಿದಿಯಲ್ಲ ! ನೀನೂ ಹೋಗು ನಾನು ನಿಲ್ಲುವುದಿಲ್ಲ " ಎಂದು ಉರಿಯುತ್ತ ಹೇಳಿ ಅತ್ತೆ ಸುಮ್ಮನೆ ಮಲಗಿದಳು

ಬೆಳಗಾಯಿತು   ಅತ್ತೆ ಗಂಟು ಹೊತ್ತುಕೊಂಡು ಹೊರಟಳು ಎಲ್ಲಿಗೆ ಎಂದು ತಿಳಿಯಲಿಲ್ಲ   ಸುಮತಿ ಬೆಳಗ್ಗೆ ಎದ್ದು ನೋಡುವಾಗ ಮನೆಯಿಂದ ದೃಷ್ಟಿದಿಗಂತದಲ್ಲಿ ಅತ್ತೆಯ ಸೀರೆಯ ಕೆಂಪು ಕಾಣಿಸುತ್ತಿತ್ತು ಅಳುತ್ತ ಆಕೆಯ ದೇಹ ಮಾಯವಾಗುವ ತನಕ ನೋಡಿದಳು—ಸುಮತಿ ಆಸುಪಾಸಿನ ಒಕ್ಕಲುಗಳನ್ನು ಕೇಳಿದಳು   ಅದಕ್ಕೆ ಸಾಬಿ ಎನ್ನುವ ಒಕ್ಕಲು ಹೇಳಿದ " ಅವರು ಮಗಳ ಮನೆಗೆ ಹೋಗುತ್ತೇನೆಂದು ನಿನ್ನೆ ನನಗೆ ಹೇಳಿದರು. ಗೇಣಿ ಅಕ್ಕಿಯ ರೂಪಾಯಿಗಳನ್ನು ಗಟ್ಟಕ್ಕೆ ಮನಿಯಾರ್ಡರ್ ಮಾಡಿಸು ಅಂದಿದ್ದಾರೆ "

" ನಾನು ಏನು ಮಾಡಬೇಕಂತೆ ? "

" ಅದೆಲ್ಲ ಏನು ಹೇಳಲಿ ತಾಯೀ ? " ಎಂದು ಸಾಬಿ ಮುಖಸಣ್ಣಮ ಮಾಡಿದ   ಅವನಿಗೂ ಸುಮತಿಗೆ ಸಿಗುತ್ತಿರುವ ಕಷ್ಟಗಳು ಗೊತ್ತಿದ್ದವು

" ಹಾಗಾದರೆ ನನಗಾಗಿ ಒಂದು ಕೆಲಸ ಮಾಡುತ್ತೀಯಾ ? "

" ಅವರು ಹೋಗುವಾಗ ' ಇನ್ನು ಮನೆಯತ್ತ ಕಾಲೇ ಹಾಕಬೇಡ ಅವಳು ಏನು ಹೇಳಿದರೂ ಕೇಳಬೇಡ ' ಎಂದು ಹೇಳಿಹೋಗಿದ್ದಾರ ಆದರೆ ನಾನು ಅವರು ಹೇಳಿದಂತೆ ಕೇಳಲು ಸಿದ್ಧನಿಲ್ಲ ನೀವು ಏನು ಹೇಳು ತ್ತೀರಿ, ಅದನ್ನು ಮಾಡುತ್ತೇನೆ "

" ನಮ್ಮ ಮನೆ ಗೊತ್ತಿದೆಯಲ್ಲ ನಿನಗೆ ? "

" ಮೂಡುಮನೆ ನನಗೆ ಹೊಸತೇ ? ಹೊನ್ನಪ್ಪಯ್ಯ ಮತ್ತು ನಾನು ಕೂಡಿ ಸಾಲೆ ಕಲಿತಿದ್ದೇವೆ "

" ನಮ್ಮ ತಾಯಿಯನ್ನು ಕರೆದುಕೊಂಡು ಬಾ ಗಾಬರಿ ಮಾಡಿ ಹೇಳ ಬೇಡ—ಇಲ್ಲಿಯ ಸಂಗತಿಯನ್ನೆಲ್ಲ "

" ಆದೀತು ತಾಯೀ " ಎಂದು ಸಾಬಿ ಮೂಡುಮನೆಗೆ ಹೋಗಲು ಅಣಿಯಾದ

ಆತ ಮಧ್ಯಾಹ್ನ ಹೊತ್ತಿಗೆ ಮೂಡುಮನೆಗೆ ಮುಟ್ಟಿದ ಸಾವಿತ್ರಿಗೆ ನಡೆದ ಸಂಗತಿಯನ್ನೆಲ್ಲ ತಿಳಿಸಿದ ಆಕಗೆ ಮಧ್ಯಾಹ್ನದ ಊಟ ಸೇರಲಿಲ್ಲ. ಶಾಸ್ತ್ರಕ್ಕಷ್ಟೆ ಊಟಮಾಡಿ ಸಾಬಿಯೊಡನೆ ಬಾಣಂಗಡಿಗೆ ಹೊರಟಳು. ಹೊನ್ನ ಪ್ಪಯ್ಯ ಮಡದಿಗೆ ಹೇಳಿದರು " ಅವಳನ್ನು ಕರೆದುಕೊಂಡೇ ಬಾ " ಎಂದು ಸೂರ್ಯ ಪಶ್ಚಿಮ ದಿಸೆಗೆ ಬಿದ್ದಾಗ ಸಾವಿತ್ರಿ ಬಾಣಂಗಡಿಗೆ ತಲುಪಿದಳು. ಮಗಳು ಅಳುತ್ತ ತಾಯಿಯನ್ನು ಸ್ವಾಗತಿಸಿದಳು " ನನಗೆ ಗೊತ್ತೇ ಇತ್ತು, ಹೀಗೆ ಆಗುತ್ತದೆ ಎಂದು ಏನು ಮಾಡುವುದು ? ಆದದ್ದು ಆಗಿಹೋ ಯಿತು. ಇನ್ನು ಇಲ್ಲಿ ಇದ್ದು ಏನೂ ಪ್ರಯೋಜನವಿಲ್ಲ " ಎಂದು ಮಗಳಿಗೆ ಸಮಾಧಾನ ಹೇಳಿದಳು " ಒಬ್ಬವರೇ ಹೇಗೆ ಇಷ್ಟು ದೊಡ್ಡ ಮನೆಯಲ್ಲಿ ವಾಸಿಸುವುದು ? ನೀವು ಅಕ್ಕಲಾಗಿ ಹೋಗಿ ನಾಲ್ಕುದಿನ ಹಾಯಾಗಿ ಇದ್ದು ಬಿಡಿ " ಎಂದು ಸಾಬಿಯೂ ಸುಮತಿಗೆ ಹೇಳಿದ

" ಇದು ಎಷ್ಟೆಂದರೂ ಗಂಡನ ಮನೆ—ಸಾಬೀ. ನಾನು ಹುಟ್ಟಿದ್ದು ಇಲ್ಲಿ ಅಲ್ಲವಾದರೂ ಕೊರಗಿ ಸಾಯಬೇಕು ಇಲ್ಲಿ ಅಲ್ಲವೇ ? ಹೆಣ್ಣು ಜನ್ಮ

ತಾಳಿದಮೇಲೆ, ಕೊರಳಿಗೆ ತಾಲಿಮಣಿ ಕಟ್ಟಿಕೊಂಡ ಮೇಲೆ ಕಷ್ಟಬಂದರೆ ಹೆದರಿ ಕೂಡಲಿಕ್ಕೆ ಸಾಧ್ಯವಿದೆಯೆ ? " ಎನ್ನುತ್ತ ಸುಮತಿ ಧೈರ್ಯ ತಂದು ಕೊಂಡಳು ಆಗ ಸುಮತಿಯ ಕೊರಳಿನತ್ತ ಸಾವಿತ್ರಿಯ ಕಣ್ಣು ಹೋಯಿತು ಮಗಳ ಕೊರಳೊಳಗಿನ ಎರಡು ತೊಲೆಯ ಬಂಗಾರದ ಸರ ಕಾಣಲಿಲ್ಲ ಅದನ್ನು ಆಕೆ ನಿತ್ಯವೂ ತೊಟ್ಟುಕೊಳ್ಳಬೇಕೆಂದು ಸಾವಿತ್ರಿ ಕೊಟ್ಟಿದ್ದಳು ಸುಮತಿ ಅದನ್ನು ಪ್ರತಿದಿನವೂ ಕೊರಳಲ್ಲಿ ಅಲಂಕರಿಸುತ್ತಿದ್ದಳು ಸಾವಿತ್ರಿಗೆ ಮಗಳ ಬರಿದಾದ ಕೊರಳನ್ನು ಕಂಡು ಸಂಶಯ ಬಂತು ಅದಕ್ಕಾಗಿ ಕೇಳಿಯೇ ಬಿಟ್ಟಳು, " ಕುತ್ತಿಗೆಯ ಸರ ಎಲ್ಲಿ ? " ಎಂದು

" ಕುತ್ತಿಗೆಯದ್ದು ಒಂದೇ ಅಲ್ಲ ಎಲ್ಲ ಚಿನ್ನವನ್ನೂ ಗಂಟುಕಟ್ಟಿ ಒಯ್ದಿದ್ದಾರೆ " ಎಂದು ಸುಮತಿ ಹೇಳಿದಳು

" ನಿನ್ನ ಕೊರಳು ಹಿಚುಕಿ ಹೋಗಲಿಲ್ಲ, ಅದೇ ದೊಡ್ಡ ಪುಣ್ಯ " ಎಂದು ಸಾವಿತ್ರಿ ಹೇಳಿದಳೇ ಹೊರತು ಚಿನ್ನ ಹೋದದ್ದಕ್ಕೆ ಚಿಂತಿಸಲಿಲ್ಲ

"ಕೊರಳನ್ನೂ ಹಿಚುಕಲಿಕ್ಕೆ ಹಿಂದೆ ಮುಂದೆ ನೋಡುವ ಅತ್ತೆ ಅವಳಲ್ಲ" ಎಂದು ಸಾಬಿಯೂ ಹೇಳಿದ ಕೊನೆಗೆ ಮುಂದೇನು ಮಾಡಬೇಕೆಂಬುದನ್ನು ನಿಶ್ಚಯಿಸಲು ಅವರಲ್ಲಿ ಮಾತುಕತೆ ನಡೆದವು ಸುಮತಿ, ತಾನು ಗಂಡನ ಮನೆಯಲ್ಲಿ ಇರುತ್ತೇನೆಂದು ಮೊದಮೊದಲು ಹೇಳಿದಳು ಆದರೆ ಸಾಬಿಯ ಮತ್ತು ಸಾವಿತ್ರಿಯ ಆಗ್ರಹಕ್ಕೆ ಆಕೆ ಮೂಡುಮನೆಗೆ ಹೋಗಲೇಬೇಕಾಯಿತು

ಮೂಡುಮನೆಗೆ ಹೋದೊಡನೆ ಹೊನ್ನಪ್ಪಯ್ಯನವರೂ ಮಗಳಿಗೆ ಸಾಕಷ್ಟು ಬುದ್ಧಿವಾದ ಹೇಳಿದರು. "ನನ್ನದೇ ಕೆಡ್ಡಾಯಿತು ಇಲ್ಲದಿದ್ದರೆ ಹೀಗಾಗುತ್ತಿರಲಿಲ್ಲ " ಎಂದು ಮಗಳಿಗೆ ತನ್ನ ತಪ್ಪನ್ನು ತಿಳಿಸಿದರು. " ಏನೇ ಆಗಲಿ, ಶಿವರಾಯನನ್ನು ಹೇಗಾದರೂ ಮಾಡಿ ಹುಡುಕಿ ತಂದು ಸುಖವಾಗಿ ಸಂಸಾರ ನಡೆಸುವ ಹಾಗೆ ಮಾಡುತ್ತೇನೆ ಮೈಲಿಗೆ ಮಾಡಿಕೊಂಡದ್ದಕ್ಕೆ ಮಡಿ ಮಾಡದೆ ಉಪಾಯವಿಲ್ಲ " ಎಂದೂ ಹೊನ್ನಪ್ಪಯ್ಯ ಹೇಳಿದರು. " ನಾನಿರುವ ತನಕ ನಿನಗೆ ಏನೂ ಕಡಿಮೆ ಆಗಲಿಕ್ಕೆ ಬಿಡುವುದಿಲ್ಲ " ಎಂದು ಸಾವಿತ್ರಿಯೂ ಅಭಯವಚನವಿತ್ತಳು

ಇವರೆಲ್ಲರಗಿಂತ ಸುಮತಿಯ ಅಣ್ಣ ರಾಘವೇಂದ್ರನು ತಂಗಿಯನ್ನು ಹಲವಾರು ರೀತಿಯಿಂದ ಸಮಾಧಾನ ಪಡಿಸಿದ್ದ "ಬೊಂಬಾಯಿ, ಪೂನಾ ಬಿಟ್ಟು ಪರದೇಶದಲ್ಲಿ ಇದ್ದರೂ ಶಿವರಾಯನನ್ನು ಕರೆದು ತರುವುದು ನನ್ನ ಕೆಲಸ" ಎನ್ನುತ್ತ ಆತ ಶಿವರಾಯನನ್ನು ಹುಡುಕಿ ತರುತ್ತೇನೆಂಬ ಭರವಸೆ ಕೊಟ್ಟ. ಇವರೆಲ್ಲರ ಮಾತುಗಳಿಂದ ಸುಮತಿ ಸುಮ್ಮನಾದಳು. ಆದರ ಅವಳ ಮನಸ್ಸು ಸುಮ್ಮನಾಗಲಿಲ್ಲ. ರಾಘವೇಂದ್ರನೂ ಶಿವರಾಯನ ಸಲು ವಾಗಿ ಬಹಳ ಊರುಗಳಲ್ಲಿ ಶೋಧ ನಡೆಸದಿರಲಿಲ್ಲ. ಒಂದೆರಡು ಕಡೆ ಹೋಗಿ, ಅಲ್ಲಿರುವ ಶಿವರಾಯ ರನ್ನು ನೋಡಿ "ಈ ಶಿವರಾಯರಿಗೂ ನನಗೆ ಬೇಕಾದ ಶಿವರಾಯರಿಗೂ ಭೂಮಿ ಆಕಾಶಗಳಷ್ಟು ಅಂತರ" ಎಂದು ಬಂದಿದ್ದ ಒಟ್ಟಿನಲ್ಲಿ ಶಿವರಾಯನನ್ನು ಪತ್ತೆ ಹಚ್ಚುವುದು ಸಾಮಾನ್ಯದ ಕೆಲಸವಾಗಿ ಪರಿ ಣಮಿಸಲಿಲ್ಲ. ದಿನಗಳು, ತಿಂಗಳುಗಳು ಹಾಗೂ ವರುಷಗಳೂ ಒಂದರ ಮೇಲೊಂದರಂತೆ ಉರುಳಿ ಓಡುತ್ತಲೇ ಇದ್ದವು. ಶಿವರಾಯನ ಪತ್ತೆ ಅವ ರಿಗೆ ಸಿಗಲೇ ಇಲ್ಲ.

ಅಂದು ಮನೆ ಬರಿದುಮಾಡಿಕೊಂಡು ಹೋದ ಸುಮತಿಯ ಅತ್ತೆ ಪುನಃ ಬಾಣಂಗಡಿಗೆ ಬರಲಿಲ್ಲ. ಅವಳು ಮಾರ್ನಾಡು ಬಿಟ್ಟು ಮಕ್ಕಳು ಇರುವ ಗಟ್ಟಕ್ಕೆ ಹತ್ತಿದಳು. ತನ್ನಲ್ಲಿರುವ ಹಣವನ್ನು ಮಗಳಿಗೂ ಅಳಿಯನಿಗೂ ಕೊಟ್ಟು ಮಾರ್ನಾಡು ಬಿಟ್ಟಳಂತೆ. ಅವಳು ಹುಟ್ಟುವಾಗಲೇ ಸೊಸೆಯಂದಿರ ವಿರುದ್ಧ ಯುದ್ಧ ಹೂಡುವ ಸ್ವಭಾವವನ್ನು ಪಡೆದು ತಂದಿದ್ದಳೆಂದು ಹೇಳ ಬೇಕು. ಯಾಕಂದರೆ ಹರಿಹರದಲ್ಲಿರುವ ಮಗನ ಹೆಂಡತಿಯೊಡನೆಯೂ ಅವಳಿಗೆ ಕೂಡಿಬರಲಿಲ್ಲ. ಆದರೆ ಆ ಸೊಸೆ ಸುಮತಿಯಂತೆ ಸಾಧು ಸ್ವಭಾವ ದವಳಲ್ಲ. ಆಕೆ ಗಂಡನನ್ನು ಮುಷ್ಟಿಯಲ್ಲಿ ಹಿಡಿದು ಆಳುವಳು. ಎಂದ ಮೇಲೆ ಅತ್ತೆಗೆ ಲೆಕ್ಕಿಸುವವಳೇ? "ಇದು ಬಾಣಂಗಡಿಯಲ್ಲ. ನಾನು ಸುಮತಿಯಲ್ಲ! ನೀವು ಎಷ್ಟೆಂದರೂ ಮುದುಕರಾಗುತ್ತೀರಿ. ಹೆಚ್ಚಿನ ಕಾರ ಭಾರ ಮಾಡಲು ಬರಬೇಡಿ. ಸುಮ್ಮನೆ ಹಾಕಿದಷ್ಟನ್ನು ತಿಂದು ಮೂಲೆ ಯಲ್ಲಿ ಜಪ ಮಾಡುತ್ತಲೋ, ಮಕ್ಕಳನ್ನು ಆಡಿಸುತ್ತಲೋ ಕೂತುಕೊಳ್ಳಿ." ಎಂದು ಅತ್ತೆಗೆ ಕಟ್ಟಪ್ಪಣೆ ವಿಧಿಸಿದಳು. ಆದ್ದರಿಂದ "ಇವಳ ಕೈಯಲ್ಲಿ ನನಗೆ

ಪೂರೈಸುವುದಿಲ್ಲಪ್ಪಾ ದೇವರೇ ! ಸುಮ್ಮನೆ ಸೊಸೆಯ ಕೈಯಿಂದ ಬಡಿಸಿ ಕೊಂಡು ಈ ಊರು ಬಿಡುವುದಕ್ಕಿಂತ ಮೊದಲೇ ಬಿಡುವುದು ಲೇಸು" ಎಂದು ಬಗೆದಳು ಅತ್ತೆ ಕಾರಣ, ಹರಿಹರದಿಂದ ಪೂನಾಕ್ಕೆ ಹೋಗುವ ರೈಲು ಹತ್ತಿ ಬಿಟ್ಟಳು ಒಂದು ದಿನ ಅಲ್ಲಿಯಾದರೂ ಅತ್ತೆಯ ಪಾಡು ಹರಿಹರದಂತೇ ಆಯಿತು ಆ ಪೂನಾದ ಸೊಸೆ ಮರಾಠಿಯಲ್ಲಿ ಬೈದು. ಬೈದು ಅತ್ತೆಗೆ ಬುದ್ಧಿ ಕಲಿಸತೊಡಗಿದಳಂತೆ ಒಮ್ಮೆ ಒಂದು ಏಟನ್ನೂ ಬಿಗಿದಳು ಅಂದೇ ಪುನಃ ಅತ್ತೆ ಹರಿಹರಕ್ಕೆ ಹೊರಟಳು ಹಾಗೆ ಹರಿಹರದಲ್ಲಿ ಕೆಲವುದಿನ, ಪುನೆಯಲ್ಲಿ ಕೆಲವು ದಿನಗಳನ್ನು ಕಳೆಯುತ್ತ ಕಾಲ ಸಾಗಿಸತೊಡಗಿದಳು—ಅತ್ತೆ ಊರಿನಲ್ಲಿರುವ ಹೊಲನೆಲಗಳ ಉಸ್ತುವಾರಿಯನ್ನು ಸಾಬಿಗೆ ಬಿಟ್ಟುಕೊಟ್ಟಳು ಅತಿ ವಿಶ್ವಾಸದ ಮನುಷ್ಯ ವರುಷ ವರುಷವೂ ಸಲ್ಲತಕ್ಕ ಗೇಣಿಯನ್ನು ಮನಿಯಾರ್ಡರ ಮೂಲಕ ಗಟ್ಟದಲ್ಲಿರುವ ಧನಿಗಳಿಗೆ ರವಾನಿಸುತ್ತಿದ್ದ ಸುಮತಿಯ ಗಂಡನ ಸುದ್ದಿ ಯಾರಿಗೂ ಸಿಗಲಿಲ್ಲ ಶಿವರಾಯನನ್ನು ಹುಡುಕಾಡಿ ಕಷ್ಟಪಡುವ ಮಹಾಕಾರ್ಯಕ್ಕೆ ಅವನ ಅಣ್ಣಂದಿರು ಹೋಗಲಿಲ್ಲ "ಅವನ ಬುದ್ಧಿ ನಮಗೆ ಗೊತ್ತಿಲ್ಲದ್ದೋ ?" ಎಂದು ಅವರು ತಮ್ಮಷ್ಟಕ್ಕೆ ಉಳಿದರು.

*

ಇಷ್ಟೆಲ್ಲ ಸುಮತಿಯು ತವರಿಗೆ ಅಂಟಿಕೊಂಡು ಕೊಡಲು ಒದಗಿದ ಕಥೆಯಾಯಿತು ಇನ್ನು ಸುಮತಿಯಂತೆ ಸಂಜೀವಿಯೂ ತಂದೆಯ ಮನೆಯಲ್ಲಿ ನೆಲೆಸಲು ಹಲವಾರು ಕಾರಣಗಳಿವೆ ಸುಮತಿಗೆ ಅತ್ತೆಯ ಆಳಿಕೆಯಿಂದ ಗಂಡನ ಮನೆ ಬಿಡಬೇಕಾಯಿತು ಆದರೆ ಸಂಜೀವಿಗೆ ಅಂತಹ ಅತ್ತೆ ಸಿಕ್ಕಿರಲಿಲ್ಲ ಸಂಜೀವಿಗೆ ಅತ್ತೆಯೊಬ್ಬಳು ಇದ್ದಳು ಅವಳು ಹೆಸರಿಗಷ್ಟೆ ಅತ್ತೆ ಅವಳು ಬಾಳಿನ ಮೇರೆಯಲ್ಲಿ ನಿಂತ ಮುದುಕಿ ಅವಳಿಗೂ ವೈಧವ್ಯ ಪ್ರಾಪ್ತಿಯಾಗಿತ್ತು ಕೆಲಸ ಮಾಡಲು ಅಶಕ್ತಳಾಗಿದ್ದಳು ಚೆನ್ನಾಗಿ ಕಣ್ಣು ಕಾಣುತ್ತಿರಲಿಲ್ಲ ಅವಳಿಗೆ. "ನಿನಗೆ ದೃಷ್ಟಿ ಹೇಗಿದೆ ಅಜ್ಜೀ ?" ಎಂದು ಯಾರಾದರೂ ಕೇಳಿದರೆ, "ನನಗೆ ದೃಷ್ಟಿ ಏನು ಮಾಡಲಿಕ್ಕೆ ಮಗೂ ? ನೀವೇ ನನ್ನ ಕಣ್ಣುಗಳು ಕಾಣುತ್ತದೆ, ಮಸಕು ಮಸಕಾಗಿ. ಬಟ್ಟೆಯನ್ನು ಕಣ್ಣೆದುರು ಬಿಟ್ಟರೆ ಹೇಗೆ ನಿಮಗೆಲ್ಲ ಕಾಣುತ್ತದೋ ಹಾಗೆ ನನಗೆ ಏನೂ ಅಡ್ಡ ಇಲ್ಲದಿದ್ದರೂ ಕಾಣುತ್ತದೆ" ಎಂದು ಸಾವಕಾಶವಾಗಿ ಉತ್ತರಿಸುತ್ತಿದ್ದಳು ಒಟ್ಟಿ

ನಲ್ಲಿ ಅವಳ ಕೆಲಸ ಕೇವಲ ಆ ಮನೆಯ ಮೂಲೆ ಕಾಯುವುದು ಮಾತ್ರವಾಗಿತ್ತು

ಆ ಮುದುಕಿಗೆ ಸಂಜೀವಿಯೆಂದರೆ ತುಂಬ ಪ್ರೀತಿ ದಿನಕ್ಕೊಮ್ಮೆಯಾದರೂ ಅವಳೊಡನೆ ಮಾತಾಡಿ, ಅವಳ ಮೈ ತೀಡದಿದ್ದರೆ ಆಕೆಗೆ ನಿದ್ರೆ ಬೀಳುತ್ತಿದಿಲ್ಲ ಸಂಜೀವಿಗಾದರೂ ಅವಳ ಮೇಲೆ ಪ್ರೇಮವಿತ್ತು ತನ್ನ ದಿನದ ಕೆಲಸಗಳೆಲ್ಲ ಮುಗಿಮೊಡನೆ ಅಜ್ಜಿಯ ಹತ್ತಿರ ಹೋಗಿ ಕೂತು ಮಾತಾಡುವುದು ಸಂಜೀವಿಯ ಪ್ರತಿನಿತ್ಯದ ಕಾರ್ಯಕ್ರಮ ಹೀಗೆ ಯಾವಾಗಲೂ ಅತ್ತೆ ಸೊಸೆಯರ ಮಾತುಕತೆ ನಡೆಯುತ್ತಿತ್ತು ಆದರೆ ಅವರಿಬ್ಬರ ಮಾತುಗಳು ಕೊನೆಗಾಣುವ ರೀತಿಯೊಂದು ಸಂತೋಷದಾಯಕವಾಗಿರಲಿಲ್ಲ ಒಂದೇ ಸಂಜೀವಿಯಾದರೂ ಸುಮ್ಮನೆ ಕೂತು ದಿನದ ಪಲ್ಲವಿಯನ್ನು ಮೌನದಿಂದ ಹಾಡಿ ಅತ್ತೆಗೂ ಅದನ್ನು ಹಿಂಬಾಲಿಸುವಂತೆ ಮಾಡುತ್ತಿದ್ದಳು. ಇಲ್ಲವಾದರೆ ಅಜ್ಜಿಯೇ " ಏನು ಮಾಡುವುದು ಸಂಜೀವೀ ನಮ್ಮ ' ನನ್ನ ' ( ಸಂಜಿವೀಯ ಗಂಡ ) ಯಾವ ಊರಲ್ಲಿ ಇದ್ದಾನೆಂದು ಗೊತ್ತಿಲ್ಲ ! ಅವನು ಇದ್ದಿದ್ದರೆ ನಿನ್ನನ್ನು ಅವಳು ಇಷ್ಟೆಲ್ಲ ದುಡಿಸುವುದು ನೋಡುತ್ತಿದ್ದೆ ! ಅವಳೇ ಕಾರಣ, ಅವನು ಮನೆಬಿಟ್ಟು ಹೋಗಲಿಕ್ಕೆ ಅವನಿಗೆ ರಾಯಚೂರಲ್ಲಿ ಏನಿದೆಯೋ ಏನೋ ! ಅದು ಮೊದಲೇ ತುರುಕರ ಊರಂತೆ ಅಲ್ಲಿ ಎಲ್ಲರೂ ಗಡ್ಡ ಬೆಳೆಸುತ್ತಾರಂತೆ ನೋಡೋಣ ದೇವರು ಕಣ್ಣು ತೆರೆದರೆ ಬಂದಾನು " ಎಂದು ಮೆಲ್ಲನೆ ಸಂಜೀವಿಗೆ ಹೇಳುತ್ತಿದ್ದಳು ಈ ಅತ್ತೆ ಸೊಸೆಯರು ಮಾತಾಡುವುದನ್ನು ನೋಡಿದರೆ ರಂಗಿಗೆ ಹೊಟ್ಟೆಯಲ್ಲಿ ಕಿಚ್ಚು ಬಿದ್ದಂತಾಗುತ್ತದೆ ಆಕೆ ಅವರನ್ನು ನೋಡಿದರೂ ನೋಡದಂತೆ ಮಾಡಿ ಹೋಗುತ್ತಾಳೆ. ರಂಗಿ, ಸಂಜೀವಿಯನ್ನು ತನ್ನ ಕೈಕೆಳಗಿನ ಆಳಿನಂತೆ ಕಾಡಿಸುತ್ತಿದ್ದಳು. ಆದರೆ ರಂಗಿಗೂ ಸಂಜೀವಿಗೂ ಆ ಮನೆಯಲ್ಲಿ ಸಮನಾದ ಹಕ್ಕು ಇತ್ತು. ರಂಗಿಯು ವೆಂಕಣ್ಣಯ್ಯನವರ ಹೆಂಡತಿ. ಅಂತೇ ಸಂಜೀವಿಯಾದರೂ ವೆಂಕಣ್ಣಯ್ಯನವರ ತಮ್ಮ ನಾರಾಯಣಯ್ಯನ ಮಡದಿ. ಎಂದಮೇಲೆ ಸಂಜೀವಿಗೂ ಆ ಆಸ್ತಿಯ ಪಾಲಿದೆ ಎಂದಾಯಿತು ಆದರೆ ವಸ್ತುಸ್ಥಿತಿ ಹಾಗಿರಲಿಲ್ಲ ರಂಗಿಯೇ ಆ ಮನೆಗೆ ಸರ್ವಾಧಿಕಾರಿಯಾಗಿದ್ದಳು.

ಸಂಜೀವಿ ಗಂಡನ ಮನೆಯಲ್ಲಿ ಹೊರೆಯಾಗಲು ಕಾರಣವೆಂದರೆ ಆಕೆಯ ಗಂಡ ಊರಲ್ಲಿ ಇಲ್ಲದ್ದೇ ನಾರಾಯಣಯ್ಯ ಮದುವೆಯಾಗುವ ತನಕ ಇತರ ಮಾನವ ಜೀವಿಗಳಂತ ಇದ್ದ ಆದರೆ ಅವನಲ್ಲಿ ಏನೋ ಒಂದು ಶಕ್ತಿ ಅಡಗಿತ್ತು ಅವನ ತಾಯಿ ಈಗಲೂ ಹೇಳುತ್ತಾಳೆ " ನನ್ನನ ಜಾತಕ ದಲ್ಲೇ ಹಾಗೆ ಬರೆದಿದೆ " ಎಂದು ' ಹಾಗೆ ' ಅಂದರೆ ಅವನು ' ಸನ್ಯಾಸಿ ' ಆಗುತ್ತಾನೆ ಎಂಬ ಭವಿಷ್ಯ ಎಂದು ನನ್ನನ ಮನೆಯವರಿಗೆ ಇದೆಲ್ಲ ಅವನ ಚಿಕ್ಕಂದಿನಲ್ಲೇ ಗೊತ್ತಾಗಿತ್ತು ಆದರೂ ಅವನಿಗ ಮದುವೆಯಾಯಿತು ಆಗ ಅವನ ಪ್ರಾಯವಾದರೂ ಇಪ್ಪತ್ತೈದಕ್ಕೆ ಮಿಕ್ಕಿ ಇರಲಿಲ್ಲ ಅವನು ಆಜಾನುಬಾಹು, ದೀರ್ಘದೇಹಿ, ವಿಶಾಲವಾದ ಹಣೆಯುಳ್ಳವ, ಅಷ್ಟೇನು ಬಿಳಿಯ ವರ್ಣದವನೆಯುವನಲ್ಲ ಅವನ ನಿಲುವಿನಲ್ಲೇ ಮಹಾಪುರುಷನ ಸತ್ ಲಕ್ಷಣಗಳು ಎದ್ದು ಕಾಣುತ್ತಿದ್ದವು ಹಳ್ಳಿಯ ಶಾಲೆಯಲ್ಲಿ ಕಲಿತಿದ್ದರೂ ಪ್ರಯತ್ನಪಟ್ಟು ಬೇರೆ ವಿದ್ಯಾಭ್ಯಾಸವನ್ನು ಮಾಡಿದ್ದ ಅವನು ಸಾಧಿಸಿದ ವ್ಯಾಸಂಗಗಳಲ್ಲಿ ವೈದ್ಯಕೀಯವು ಅವನ ಬೆನ್ನು ಬಿಡಲಿಲ್ಲ ಅವನು ಕೊಟ್ಟ ಔಷಧಗಳು ಬಾಣದಂತೆ ಕಾಯಿಲೆಗೆ ನೆಟ್ಟು ರೋಗಿ ಗುಣಹೊಂದುತ್ತಿದ್ದ ಈ ವಿದ್ಯೆ ಅವನಿಗೆ ಕೇವಲ ಇಪ್ಪತ್ತೇ ವರುಷ ವಯಸ್ಸಿನಲ್ಲಿ ಸಾಧಿಸಿತ್ತು ಆಗ ಅವನ ನೀಳ ಕಾಯವನ್ನು ಕಂಡರೆ ಎಂಥವರೂ ಬೆರಗುಪಡುವಂತಿತ್ತು ಆದರೆ ಆತ ಯಾರಿಂದಲೂ ಒಂದು ಪೈ ಕೂಡಾ ಔಷಧಕೊಟ್ಟ ಬಾಬ್ತು ಪಡಕೊಳ್ಳು ತ್ತಿರಲಿಲ್ಲ ಆ ಒಂದು ವಿಚಿತ್ರ ಗುಣ ಅವನಲ್ಲಿ ಇತ್ತು ಆ ಕಾರಣದಿಂದಲೇ ಅವನ ಔಷಧ ಅಷ್ಟು ಪರಿಣಾಮಕಾರಿಯಾಗಿದೆ ಎಂದು ಜನ ನಂಬುತ್ತಿದ್ದರು ಅವನಿಗೆ ಹಲವಾರು ಮಂತ್ರಗಳೂ ಬರುತ್ತಿದ್ದವಂತೆ

ಹೀಗೆ ಆ ಊರಲ್ಲೆಲ್ಲ ಫಲಮಾರು ನನ್ನಿಭಟ್ಟರೆಂದರೆ ಸುಪ್ರಸಿದ್ಧ ವೈದ್ಯ ರಾಗಿದ್ದರು ನಾರಾಯಣಯ್ಯ ಎಂದು ಜನ ಅವನನ್ನು ಕರೆಯುತ್ತಿದ್ದಿಲ್ಲ ಫಲಮಾರು ನನ್ನಿಭಟ್ಟರೆಂದು ಗೌರವದಿಂದಲೇ ಸಂಬೋಧಿಸುತ್ತಿದ್ದರು

ಇಂಥ ಅಳಿಯನನ್ನು ಯಾರು ತಾನೇ ಬಯಸಲಿಕ್ಕಿಲ್ಲ? ಅದರಲ್ಲಿ ಬೇರೆ ಸ್ವತಃ ವೆಂಕಣ್ಣಯ್ಯನವರೇ ಎಡಹಿತ್ತಲು ಅಣ್ಣಪ್ಪಯ್ಯನವರಲ್ಲಿಗೆ ಬಂದು "ಜಾತ ಕದ ಸಾಲಾವಳಿಯೆಲ್ಲ ಒಳ್ಳೆಯದಾಗಿದೆ ಎಂದು ಹೇಳಿ ಹೋಗಿದ್ದರು ಆಚೆ

ವರುಷ ತನ್ನ ಅಣ್ಣನ ಮನೆಯಲ್ಲಿ ಆದ ಸುಮತಿಯ ಮದುವೆಯ ಗೊಂದಲದ ವಿಷಯವೆಲ್ಲ ಇವರಿಗೂ ನೆನಪಿತ್ತು ಆದ್ದರಿಂದ ಹೇಗೂ ಆಗಲಿ, ಗಾಳಿ ಬೀಸಿದಾಗ ತೂರಿಕೊಳ್ಳುವುದೇ ಲೇಸು ಎಂದು ಬಗೆದು ಅಣ್ಣಾಪ್ಪಯ್ಯ ಲಗ್ನ ನಿಶ್ಚಯಿಸಿಯೇ ಬಿಟ್ಟರು ಮದುವೆಯೂ ಮುಗಿಯಿತು ಮುಂದೆ ಆಗತಕ್ಕ ಎಲ್ಲ ಕಾರ್ಯಕ್ರಮಗಳೂ ಮುಗಿದುಬಿಟ್ಟವು

ಅಳಿಯನನ್ನು ತಿಂಗಳಿಗೆ ಒಮ್ಮೆಯಾದರೂ ಮನೆಗೆ ಕರೆಯಿಸಟಿದ್ದರೆ ಅಣ್ಣಾಪ್ಪಯ್ಯನವರಿಗೆ ಸಮಾಧಾನವಿರಲಿಲ್ಲ ಆಗಾಗ ಹಾಗ ಅವನನ್ನು ಬರ ಮಾಡಿಕೊಳ್ಳುವ ಕಾರಣ ಬೇರೆಯೂ ಒಂದು ಇತ್ತು ಅದೆಂದರೆ ಅವನಿಂದ ಗುಪ್ತವಿದ್ಯೆಗಳನ್ನು ಕಲಿತುಕೊಳ್ಳುವುದು ಮುಖ್ಯ. ಹತ್ತಾರು ಮಂತ್ರಗಳನ್ನೂ ಕಲಿತುಕೊಂಡರು—ಅಣ್ಣಾಪ್ಪಯ್ಯ "ಇಂಥ ಅಳಿಯ ಸಿಕ್ಕಿದ್ದು ದೇವರ ಪುಣ್ಯ" ಎಂದೇ ಅವರು ಹಿಗ್ಗಿದರು

ರಂಗಿಯೂ ಯೌವನದಿಂದ ತುಂಬಿದವಳು ಅವಳ ರೂಪು ರಮ್ಯ ವಾಗಿತ್ತು ಆದರೂ ಆಕೆಗೆ ತನಗಿಂತ ರೂಪವತಿಯನ್ನು ಅಥವಾ ರೂಪ ವಂತರನ್ನು ಕಂಡರೆ ಮನಸ್ಸಿನಲ್ಲಿ ತರತರಹದ ಭಾವನೆಗಳು ಹುಟ್ಟುತ್ತಿದ್ದವು. ಆಗ ಆಕೆಗಿನ್ನೂ ಮಕ್ಕಳಾಗಿರಲಿಲ್ಲ ಮದುವೆಯಾಗಿ ನಾಲ್ಕೋ, ಆರೋ ವರುಷಗಳು ಆಗಿದ್ದವು ಮತ್ತು ವೆಂಕಣ್ಣಯ್ಯನವರಿಗೂ ನಾರಾಯಣಯ್ಯ ನಿಗೂ ಕೇವಲ ಮೂರೇ ವರುಷಗಳ ಅಂತರವಿತ್ತು. ಆದರೆ ವೆಂಕಣ್ಣಯ್ಯ ನವರಿಗೆ ಇವನಷ್ಟು ಗಾಂಭೀರ್ಯದ ವ್ಯಕ್ತಿತ್ವವಿರಲಿಲ್ಲ ಅವರಾದರೂ ದೀರ್ಘಕಾಯರೇ ಅವರ ಸ್ವಭಾವದಲ್ಲೂ ಅಂಥ ಕ್ರೌರ್ಯವಿರಲಿಲ್ಲ. ಪ್ರಾಮಾ ಣಿಕತನ ಅವರ ಉಸಿರು. ಮನೆಗೆಲಸಗಳಲ್ಲಿ ಅವರು ಸದಾ ನಿರತರು ಸಂಜೆಯವರೆಗೆ ಹೊಲಗಳಲ್ಲೋ ತೋಟಗಳಲ್ಲೋ ಆಳುಗಳೊಡನೆ ದುಡಿಮೆ, ಬೇಸರ ತೀರಿಸಲು ಹತ್ತಿರದ ಪೇಟೆಗೆ ಹೋಗುತ್ತಿದ್ದರು ಅವರು ಪೇಟೆಗೆ ಹೋಗುವಾಗಲೇ ಕತ್ತಲಾಗುತ್ತಿತ್ತು. ಮನೆಗೆ ಬರುವದಂತೂ, ಅಮವಾಸ್ಯೆ ಯಾಗಲೀ ಹುಣ್ಣಿಮೆಯಾಗಲೀ, ರಾತ್ರಿ ಹನ್ನೆರಡು ಗಂಟೆಯ ಹೊತ್ತಿಗೆ

ನಾರಾಯಣಯ್ಯನೂ ಬೇಸಾಯದ ಕೆಲಸಗಳನ್ನು ಮಾಡುತ್ತಿದ್ದ. ಆದರೆ ಆತನಿಗೆ ಯಾವಾಗಲೂ ಇವರಂತೆ ಅದಕ್ಕೇ ಅಂಟಿಕೊಂಡು ಕೂಡು

ವುದು ಸರಿಹೋರದು ಆತ ಎಂಥವೋ ಹಳೆಯ ತಾಡಪತ್ರದ ಗ್ರಂಥಗಳನ್ನು ಓದುವುದರಲ್ಲಿಯೂ ದಿನದ ಸ್ವಲ್ಪ ಭಾಗ ಕಳೆಯುತ್ತಿದ್ದ ಆ ತಾಡಪತ್ರದ ಗ್ರಂಥಗಳು ಅವನ ಅಜ್ಜನ ಕಾಲದಿಂದ ಬಂದವುಗಳು ಅವುಗಳ ಉಪಯೋಗ ವನ್ನು ಪಡೆದು ನಾರಾಯಣಯ್ಯ ಹಲವಾರು ಪ್ರಯೋಗಗಳನ್ನು ಮಾಡುತ್ತಿದ್ದ ಒಟ್ಟಿನಲ್ಲಿ ಅವನೊಬ್ಬ ಅಭ್ಯಾಸಿ ಅವನ ತಾಯಿ ಮಾತ್ರ ಮಗನ ಆ ಓದನ್ನು ನೋಡಿ, " ನೀನು ಓದಿ ಓದಿ ತಲೆ ಕುಂಬು ಮಾಡಿಕೊಳ್ಳುತ್ತಿ" ಎಂದು ಎಚ್ಚರಿ ಸುತ್ತಲೇ ಇದ್ದಳು ಆ ಮುದುಕಿಯತ್ತ ನಾರಾಯಣಯ್ಯ ಲಕ್ಷ್ಯಕೊಡು ತ್ತಿರಲಿಲ್ಲ

ಫಲಮಾರು ವೈಕುಂಠ ಶಾಸ್ತ್ರಿಗಳ ಮನೆಯೆಂದರೆ ಭಾರೀ ದೊಡ್ಡಮನೆ ಮಾಳಿಗೆಯ ಮೇಲೆ ಮಾಳಿಗೆ ಏರಿಸಿ, ಮಂಗಳೂರು ಹಂಚು ಹೊದಿಸಿ ಕಟ್ಟಿ ಸಿದ ಮನೆಯದು ಅದೇ ಮನೆಯಲ್ಲಿ ಅವರ ಪೀಳಿಗೆಯಾದ ಈ ವೆಂಕ ಣ್ಣಯ್ಯ ಮತ್ತು ನಾರಾಯಣಯ್ಯ ಇದ್ದಾರೆ ಆ ಮನೆಯ ಮಾಳಿಗೆಯೇ ನಾರಾಣಯ್ಯನ ಪಾಠಶಾಲೆ ಅಲ್ಲಿಯೇ ಅವನು ತನ್ನ ಓದನ್ನು ನಡೆಸು ತ್ತಿದ್ದ ಅವನಿಗೆ ರಾತ್ರಿಯಲ್ಲಿ ಬೆಳಕಿಗೆ ಹೊನ್ನೆಯ ಎಣ್ಣೆಯ ದೀಪವೇ ಹೊರತು, ಚಿಮಣಿ ಎಣ್ಣೆಯ ಲಾಟಾನು ಅಲ್ಲ ಆತ ಮಾಳಿಗೆಯ ಮೇಲೆ ರಾತ್ರಿ ಎಷ್ಟೋ ಹೊತ್ತಿನ ವರೆಗೆ ಅಭ್ಯಾಸ ಮಾಡುತ್ತ ಕೂಡುತ್ತಿದ್ದನಷ್ಟೆ ಅವನ ಆ ಓದನ್ನು ಕೊನೆಗೊಳಿಸಲು ವೆಂಕಣ್ಣಯ್ಯ ಹತ್ತಿರದ ಪೇಟೆಯಿಂದ ರಾತ್ರಿಯ ಹನ್ನೆರಡು ಗಂಟೆ ದಾಟಿದ ಮೇಲೆ ಬರಬೇಕು ಅವರೇ ಅವನಿಗೆ ಬುದ್ಧಿ ಹೇಳಿ, ಒಮ್ಮೊಮ್ಮೆ ಸಿಟ್ಟಿಗೆದ್ದು ದೀಪವನ್ನೂ ಆರಿಸಿ — ' ಮಲಗು ' ಎಂದು ಹೇಳಬೇಕಾಗಿತ್ತು

ರಂಗಿಯೂ ಮದುವೆಯಾದ ಮೊದಲಲ್ಲಿ ಅವನೊಡನೆ ಮಾತಾಡಲಿಕ್ಕೂ ಹೆದರುತ್ತಿದ್ದಳು ಯಾಕೆಂದರೆ ನಾರಾಯಣಯ್ಯ ' ಸನ್ಯಾಸಿ ' ಎಂದು ಮುಂತಾದ ವದಂತಿ ಅವಳ ಊರಿಗೂ ಹೋಗಿ ಅವಳ ಕಿವಿಗೆ ಬಿದ್ದಿತ್ತು ಆದರೆ ಮೊದಲ ಬಾರಿ ಅವನನ್ನು ಕಂಡೊಡನೆ ಅವಳು ಅವನ ಮೋಹನ ದೇಹ ನೋಡಿ ಮೋಹಿಸಿಯೇ ಹೋಗಿದ್ದಳು " ಅವರೆಷ್ಟು ಚೆಂದ ! " ಎಂದು ನಾರಾಯಣಯ್ಯನ ರೂಪವನ್ನು ಜನರೊಡನೆ ಆಡಿ ತೋರಿಸಿದ್ದಳು.

ಅದಕ್ಕೆ ಕೆಲವರು "ಅವರು ಸನ್ಯಾಸಿ! ಸನ್ಯಾಸಿಗಳು ಇರುವುದೇ ಹಾಗೆ! ಅವರಿಗೆ ಮದುವೆ ಯಾಗುವುದಿಲ್ಲವಂತೆ ಅವರ ಜಾತಕದಲ್ಲೇ ಹಾಗೆ ಬರೆದಿದೆಯಂತೆ" ಎಂದೂ ರಂಗಿಗೆ ಉತ್ತರಿಸಿದ್ದರು ಅಂತೇ ರಂಗಿಯು ಹಲವಾರು ಸಲ ಸೂಕ್ಷ್ಮವಾಗಿ ಪರೀಕ್ಷಿಸಿದ್ದಳು—ನಾರಾಣಯ್ಯ ಹೆಂಗಸರತ್ತ ದೃಷ್ಟಿ ಚೆಲ್ಲುತ್ತಾನೋ ಇಲ್ಲವೋ ಎಂದು ಅವಳಿಗೆ ಅವನು ಹಾಗ ವರ್ತಿಸಿದ್ದು ಒಮ್ಮೆಯೂ ಕಂಡು ಬಂದಿರಲಿಲ್ಲ ಅವಳಾದರೂ ಅವನಿರುವ ಅಟ್ಟಕ್ಕೆ ಏರುವ ಸಾಹಸಕ್ಕೆ ಹೋಗುತ್ತಿರಲಿಲ್ಲ

ಒಂದೇ ಮನೆಯಲ್ಲಿ ಇದ್ದಮೇಲೆ ಒಬ್ಬರಿಗೊಬ್ಬರು ಮಾತಾಡದೆ ಕೂಡಲಿಕ್ಕೆ ಸಾಧ್ಯವಿದೆಯೇ? ಹಲವಾರು ಸಲ ರಂಗಿಗೆ ನಾರಾಯಣಯ್ಯನೊಡನೆ ಮಾತಾಡುವ ಪ್ರಸಂಗಗಳು ಬರುತ್ತಿದ್ದವು ಮುಂದೆ ದಿನಗಳು ದಾಟಿದಂತೆ, ಮನೆಯ ಅಡಿಗೆ ಮಾಡುವ ಕೆಲಸವನ್ನು ಆಕೆ ವಹಿಸಿಕೊಂಡಳು ಮುದಿ ಅತ್ತೆ ಮೂಲೆ ಹಿಡಿದಳು ಮನೆಯ ರಾಣಿಯ ಪಟ್ಟ ರಂಗಿಗೆ ಕಟ್ಟಿದಂತಾಯಿತು ಆಕೆಯೇ ಊಟಕ್ಕೆ ಬಡಿಸುವವಳಾದಳು. ಮಧ್ಯಾಹ್ನದ ಊಟಕ್ಕೆ ಮನೆಯವರೆಲ್ಲ ಒಮ್ಮೆಲೇ ಕೂಡುತ್ತಿದ್ದರು ಆದರೆ ರಾತ್ರಿಯ ಊಟವು ನಾಲ್ಕೈದು ಪಂಕ್ತಿಯಾಗಿ ನಾಲ್ಕೈದು ಸಲ ಮುಗಿಯುತ್ತಿತ್ತು ಅವರೆಲ್ಲ ಉಂಡರೂ "ನಾನು ಇನ್ನುಸ್ವಲ್ಪ ತಡೆದು ಬರುತ್ತೇನೆ" ಎಂದು ನಾರಾಣಯ್ಯ ಊಟಕ್ಕೆ ಕರೆಯಲು ಹೋದವರಿಗೆ ಅಟ್ಟದ ಮೇಲೆ ಓದುವಲ್ಲಿಂದಲೇ ಹೇಳಿ ಕಳುಹಿಸುತ್ತಿದ್ದ ಸರಿ, ಅವರೆಲ್ಲ ಇವನಿಗೆ ಹೆಚ್ಚಿನ ಪೂಜೆ ಮಾಡಿ ಆಗ್ರಹ ಪಡಿಸುತ್ತಿರಲಿಲ್ಲ ಉಂಡವರೇ ಹಾಸಿಗೆ ಹಾಸಿ ಮಲಗಿ ಬಿಡುತ್ತಿದ್ದರು ರಂಗಿಯು ಗಂಡ ಬರುವ ತನಕ ಎಚ್ಚರಿಕೆ ಕೂಡುತ್ತಿದ್ದಳು

ಈ ರೀತಿಯಲ್ಲಿ ದಿನಗಳು ಕಳೆದಂತೆ ರಂಗಿಯು ಆ ಮನೆಯ ರಾಣಿಯಾಗಿ ಅವಳ ಪಟ್ಟವು ಸ್ಥಿರವಾಯಿತು. ಎಲ್ಲರೊಡನೆಯೂ ಸಲುಗೆಯಿಂದ ಮಾತಾಡ ತೊಡಗಿದಳು ಆಕೆ ಗಂಡನ ಮನೆಸೇರಿ ಎರಡು ವರುಷ ದಾಟಿದ್ದವು ಮೂರನೆಯ ವರುಷವೂ ಮುಗಿಯಲು ಬಂದಿತ್ತು

ಅಂದು ವೆಂಕಣ್ಣಯ್ಯ ಎಂದಿನಂತೆ ಸಂಜೆಯ ಹೊತ್ತಿನಲ್ಲಿ ಮನೆ ಬಿಟ್ಟಿದ್ದರು ಅಂತೇ ಆವರು ಮನೆಗೆ ಮರಳುವುದು ಯಥಾಪ್ರಕಾರ ಹನ್ನೆರಡು

ಗಂಟೆ ದಾಟಿದೆ ಮೇಲೆಯಲ್ಲವೇ ? ಮನೆಯಲ್ಲಿ ಎಲ್ಲರ ಊಟವೂ ಆಯಿತು ನಿದ್ರೆಯು ಎಲ್ಲರನ್ನೂ ಆವರಿಸಿತು ದಿನದಂತೆ ರಂಗಿಯು ಮನೆಯೊಳಗಿನ ಅಡುಗೆ ಮಾಡಿದ ಪಾತ್ರೆಗಳನ್ನು ಬಗಿಗಿಟ್ಟಳು ತನಗೆ, ತನ್ನ ಪತಿಗೆ ಮತ್ತು ನಾರಾಯಣಯ್ಯನ ಪಾಲಿನ ಊಟವನ್ನು ಅಲ್ಲಿಯೇ ಇಟ್ಟಿದ್ದಳು ಮಾಳಿಗೆಯ ಮೇಲೆ ನಾರಾಯಣಯ್ಯ ಓದುತ್ತ ದೀಪ ಉರಿಸುತ್ತ ಕುಳಿತ್ತಿದ್ದ ಅಲ್ಲಿಗೆ ಹೋದಳು ರಂಗಿ ಅವಳು ಹತ್ತಿರ ಹೋಗುವ ವರೆಗೂ ನಾರಾಯಣಯ್ಯನಿಗೆ ಮೈಯಲ್ಲಿ ಎಚ್ಚರವಿರಲಿಲ್ಲ ಆತ ಓದಿನಲ್ಲಿ ತಲ್ಲೀನನಾಗಿದ್ದ ಹೀಗೆ ರಂಗಿಯು ಅವನಿರುವ ಅಟ್ಟವನ್ನು ಹತ್ತಿ, ಅವನಿಗೆ "ಊಟಕ್ಕೆ ಬರುವುದಿಲ್ಲವೇ ?" ಎಂದು ಪ್ರಶ್ನಿಸುವ ವಾಡಿಕೆ ನಡೆಯುತ್ತ ಬಂದು ಇಂದಿಗೆ ಬಹಳವಾದರೆ ಒಂದೆರಡು ತಿಂಗಳಾಗಿರಬಹುದು ಅತ್ತಿಗೆ ಊಟಕ್ಕೆ ಕರೆಯಲು ಬಂದೊಡನೆ ನಾರಾಯಣಯ್ಯ ಎದ್ದು ಅವಳಿಗಿಂತ ಮುಂದೆ ನಡೆದು ಅಡುಗೆ ಮನೆಗೆ ತಲಪುತ್ತಿದ್ದ ಆಕೆ ಬಡಿಸುತ್ತಿದ್ದಳು ಈತ ಉಣ್ಣುತ್ತಿದ್ದ ಆದರೆ ಇಂದು ರಂಗಿಯ ಮನಸ್ಸಿನಲ್ಲಿ ಏನಿತ್ತೋ ತಿಳಿಯದು ಅವಳು ಯಾವ ನಿರ್ಧಾರ ಮಾಡಿಕೊಂಡು ಬಂದಿದ್ದಳೋ ಅವಳಿಗೇ ಗೊತ್ತು ನಾರಾಯಣಯ್ಯ ಇರುವ ಉಪ್ಪರಿಗೆಗೆ ಮೆಲ್ಲನೆ ಹತ್ತಿದಳು ಅವನಿದ್ದಲ್ಲಿಗೆ ಸಪ್ಪಳಾಗದಂತೆ ನಡೆದಳು ಅವನ ಮುಂದೆ ಹೋಗಿ ಕುಳಿತೇ ಬಿಟ್ಟಳು ದೀಪದ ಕಾಂತಿಗೆ ಅವನ ಮೈಯ ಕಾಂತಿ ಕೋರೈಸುತ್ತಿತು ಅವನ ವಿಶಾಲವಾದ ಹಣೆ ನೀಲವಾಗಿ ಕಂಗೊಳಿಸುತ್ತಿತ್ತು ಅವನ ಧೃಢಕಾಯವು ಮೂರ್ತಿಯಂತೆ ಕೂತಿತ್ತು ಒಟ್ಟಿನಲ್ಲಿ ಅವನ ದೇಹ ನಿರ್ಮಲವಾಗಿತ್ತು ಇಂಥವನನ್ನು ನೋಡುತ್ತ ಸ್ವಲ್ಪ ಹೊತ್ತು ರಂಗಿ ಮೌನವಾಗಿ ಕುಳಿತಳು ಅವಳ ಕಣ್ಣುಗಳು ಅವನ ವಿಶಾಲ ಲಲಾಟದ ಕಾಂತಿಯನ್ನು ಕಂಡು ಅತ್ತಿತ್ತ ಚಲಿಸದೆ ಅದನ್ನೇ ದಿಟ್ಟಿಸಿ ನೋಡುತ್ತಿದ್ದವು ಕೊನೆಗೆ ಅವಳ ಬಾಯಿ "ನಾನು !" ಎಂದು ಹೇಳಿತು ನಾರಾಯಣಯ್ಯ ಸಟ್ಟನೆ ತಲೆ ಮೇಲೆ ಮಾಡಿ ನೋಡಿದ

"ಹೋ ! ನೀವೇ, ಎಷ್ಟು ಹೊತ್ತಾಯಿತು ನೀವು ಹೀಗೆ ಕೂತು ?" ಎಂದು ತಾಡಪತ್ರದ ಹೊತ್ತಿಗೆಯನ್ನು ಮುಚ್ಚಿ ಬದಿಗೆ ಸರಿಸಿದ ಎದ್ದು ಹೋಗಲು ಅನುವಾದ "ಅಷ್ಟೇನು ಅವಸರ ?" ಎನ್ನುತ್ತ ರಂಗಿ ಕೈ

ಮುಂದೆ ಮಾಡಲು ಹವಣಿಸಿದಳು ಅವಳ ಕೈಗಳು ಮುಂದೆ ಚಾಚ ದಾದವು

" ಅಣ್ಣ ಬಂದರೇ ? "

" ಅವರು ಬರಲಿಕ್ಕೆ ಇನ್ನೂ ಬಹಳ ಹೊತ್ತು " ಎಂದು ಆಕೆ ಇವನತ್ತ ನೋಡುತ್ತಿದ್ದಳು ಇವನು ದೃಷ್ಟಿ ಅವಳತ್ತ ಒಂದು ಕ್ಷಣವೂ ಚೆಲ್ಲಿರಲಿಲ್ಲ

" ನಿಮ್ಮ ಔಷಧದಿಂದ ರುಕ್ಕಯ್ಯನಿಗೆ ಗುಣವಾಯಿತಂತೆ ಅವನ ತಾಯಿ ಹೇಳಿದಳು ನಿನ್ನೆ "

" ನನ್ನ ಔಷಧವಲ್ಲ ನಮ್ಮ ಪೂರ್ವಜರ ಕೃಪೆಯದು ನನ್ನಿಂದ ಏನು ಸಾಧ್ಯ ? "

" ಛೀ ನೀವು ಹಾಗೆ ಮಾತಾಡುವುದೇ ? " ಎಂದು ಆಕೆ ಹೇಳುವಷ್ಟ ರೊಳಗೆ ಆತ ಎದ್ದು ಬಿಟ್ಟ " ಹಸಿವಾಯಿತೇ ? ಇನ್ನೂ ಸ್ವಲ್ಪ ಹೊತ್ತು ಕೂತು " ಎನ್ನುವಾಗ ಅವಳ ಮುಖ ಹೇಗೋ ಆಯಿತು ಅಷ್ಟರಲ್ಲಿ ನಾರಾಯಣಯ್ಯ ಕೆಳಗೆ ಇಳಿಯಲು ಮೆಟ್ಟಲಿನ ಹತ್ತಿರ ತಲಪಿದ್ದ ಆಕೆಯೂ ಎಂದಿನಂತೆ ಅವನನ್ನು ಹಿಂಬಾಲಿಸಿದಳು ಯಥಾಪ್ರಕಾರ ಅವನ ಊಟವಾ ಯಿತು ಅವಳೂ ಉಂಡಳು ಆಗ ವೆಂಕಣ್ಣಯ್ಯನವರೂ ಬಂದರು. ಅವರೂ ಊಟ ಮುಗಿಸಿದರು.

ಮೇಲಿನ ಘಟನೆಯ ತರುವಾಯ ರಂಗಿಯ ಮನಸ್ಸು ಹೇಗೋ ಆಯಿತು ಕಾದ ಕಾವಲಿಯು ಬೇಗನೆ ಆರುವದಿಲ್ಲ ಅದರಲ್ಲಿ ಬೇರೆ ಬೆಂಕಿಯ ಹತ್ತಿರವೇ ಅಂಥ ಕಾದ ಕಾವಲಿಯನ್ನು ಇಟ್ಟರೆ ಹೇಗೆ? ಅದರ ಕಾವು ಅದರಿಂದ ಏರಿತೇ ವಿನಾ ಇಳಿಯದು ಹಾಗಾಯಿತು ರಾಗದಿಂದ ಕಾದ ರಂಗಿಯ ಮನ ದಿನವಿಡಿಯೂ ಅವನ ಹಾವಭಾವಗಳನ್ನೇ ಆಕೆ ನಿರೀಕ್ಷಿಸುತ್ತಿದ್ದಳು ಹೀಗೆ ಒಂದು ವಾರ ಕಳೆಯಿತು ರಂಗಿಯು ಅಂದು ದೃಢವಾಗಿ ನಿರ್ಧರಿಸಿದ್ದಳು—ತನ್ನ ಮನದ ಬಯಕೆ ಕೈಗೂಡುವಂತೆ ಮಾಡುವ ಹಂಚಿಕೆಯನ್ನು

ವೆಂಕಣ್ಣಯ್ಯ ರಾತ್ರಿ ಮನೆಗೆ ಬಂದೊಡನೆ, ಸೀದಾ ಅಟ್ಟಕ್ಕೆ ಏರಿ ತಮ್ಮ ನನ್ನು ನೋಡಿ ಬರುವ ವಾಡಿಕೆಯವರು ಇಂದೂ ಹಾಗೆ ಅಟ್ಟ ಏರಿದರು ತನ್ನ ಮಡದಿ ಆಡಿದ "ನಾನು" ಎಂಬ ಒಂದೇ ಶಬ್ದ ಅವರ ಕಿವಿಗೆ ಮಹಡಿಯ ಮೆಟ್ಟಲುಗಳನ್ನು ಏರುವಾಗ ಬಿತ್ತು ಮನಸ್ಸಿಗೆ ಏನೋ ಸಂಶಯ ಬಂದು, ಸಾವಕಾಶವಾಗಿ ಅಟ್ಟ ಏರಿದರು ಅವರು ಮೇಲೆ ನೋಡುವಾಗ ರಂಗಿಯ ಕೈಯೊಂದು ನಾರಾಯಣಯ್ಯನ ಹಣೆಯನ್ನು ಮೆಲ್ಲನೆ ಬಾಚುತ್ತಿತ್ತು! ನಾರಾಯಣಯ್ಯನ ಮುಂದೆಯೇ ಆಕೆ ಕೂತಿದ್ದಳು ಆದರೆ ನಾರಾಯಣಯ್ಯನಿಗೆ ಅವಳು ಕೈ ತೀಡುತ್ತಿದ್ದುದ್ದು ಗೊತ್ತಿತ್ತೋ ಇಲ್ಲವೋ ಎಂದು ಹೇಳುವುದು ಕಷ್ಟ ರಂಗಿ ಅದೇ ಆಗ ಬಂದು, ಒಮ್ಮೆಲೇ ಹಾಗೆ ಅವನ ಹಣೆಯ ಮೇಲೆ ಕೈ ಇಟ್ಟಿದ್ದಳು "ನಾನು " ಎಂದು ಒಂದೇ ಶಬ್ದ ಹೇಳಿದ್ದಳು ಆ ಶಬ್ದವೇ ವೆಂಕಣ್ಣಯ್ಯನವರ ಕಿವಿಗೆ ಬಿದ್ದಿತ್ತು! ಆದರೆ ಆ ಮಾತು ನಾರಾಯಣಯ್ಯನ ಚಿತ್ತಕ್ಕೆ ಕೇಳಿಸಲಿಲ್ಲ—ಖಂಡಿತವಾಗಿಯೂ

ಈ ಸನ್ನಿವೇಶವು ವೆಂಕಣ್ಣಯ್ಯನವರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯಿತು ಅವರು ಅಟ್ಟದಲ್ಲಿ ಕಂಡೊಡನೆ "ನಾರಾಯಣಾ, ನಾನಾ," ಎಂದು ರಂಗಿ ಅವನನ್ನು ಕರೆದರೂ ಇವರು ನೋಡಿದ ದೃಶ್ಯವನ್ನು ಮರೆಯಲು ಶಕ್ತರಲ್ಲ

ಮೇಲಿನ ಸನ್ನಿವೇಶದ ಪರಿಣಾಮವು ಮರುವರುಷ ನಾರಾಯಣಯ್ಯನ ಮದುವೆಯಾದುದರಿಂದಲೇ ಕೊನೆಗೊಂಡಿತು ವೆಂಕಣ್ಣಯ್ಯ ತಮ್ಮನನ್ನು "ಮದುವೆ ಮಾಡಿಕೋ" ಎಂದು ಕೇಳಕೊಂಡರು "ಹೆಂಡತಿಯನ್ನು ಸಾಕಲು ನೀವು ಗಟ್ಟಿ ಇರುವಿರಿ—ಎಂದಮೇಲೆ ನಾನು ಮದುವೆ ಮಾಡಿಕೊಳ್ಳುತ್ತೇನೆ" ಎಂದು ನಾರಾಯಣಯ್ಯ ಉತ್ತರಿಸಿದ ತಮ್ಮನ ಹುಚ್ಚು ಉತ್ತರಕ್ಕೆ ಮರುಳಾಗದೆ ವೆಂಕಣ್ಣಯ್ಯ ಅವನಿಗ ಮದುವೆ ಮಾಡಿದರು ಆದರೆ ಜ್ಯೋತಿಷಿ ಒಬ್ಬರು ಮಾತ್ರ "ಇವನಿಗೆ ಮದುವೆ ಮಾಡುವುದು ಯೋಗ್ಯವಲ್ಲ ಇಷ್ಟು ಹೇಳುತ್ತೇನೆ ಯಾಕಂದರೆ ನೀವು ಮದುವೆ ಮಾಡಿಸಿದರೂ ಅವನು ಮನಸ್ಸಿನ ಮದುವೆಯಾಗುವುದಿಲ್ಲ ಇವನು ಪೂರ್ಣ ಸನ್ಯಾಸಿ ಅನ್ನುವುದರಲ್ಲಿ ಎಳ್ಳಿನ ಏಳನೇ ಒಂದಂಶದಷ್ಟಾದರೂ ಸಂಶಯವಿಲ್ಲ" ಎಂದು ವೆಂಕಣ್ಣಯ್ಯನವರಿಗೂ ಎಡಹಿತ್ತಲು ಅಣ್ಣಪ್ಪಯ್ಯನವರಿಗೂ ಎಚ್ಚರಿಕೆ ಕೊಟ್ಟಿದ್ದರು ಈ ಮಾತನ್ನು

ಇಬ್ಬರೂ ನಂಬಲಿಲ್ಲ "ಮದುವೆಯಾದ ಮೇಲೆ ಎಲ್ಲಾದರು ಸನ್ಯಾಸಿ ಆಗುವುದುಂಟೇ ?" ಎಂದು ಅಣ್ಣಪ್ಪಯ್ಯ ಮದುವೆಗೆ ದಿನ ಇಟ್ಟೇ ಬಿಟ್ಟರು

ಸಂಜೀವಿ ಗಂಡನ ಮನೆ ಸೇರಿದಳು, ಆದರೆ ತಿಂಗಳ ಮುಕ್ಕಾಲು ಪಾಲು ದಿನಗಳನ್ನು ಆಕೆ ಎಡಹಿತ್ತಲಲ್ಲೇ ಕಳೆಯಬೇಕಾಯಿತು ಅದೆಲ್ಲ ರಂಗಿಯ ಮೇಲಧಿಕಾರದಿಂದಲೇ ಹಾಗಾಗುತ್ತಿತ್ತು "ತವರಿನಲ್ಲಿ ತಂದೆಯೊಬ್ಬರೇ ಇದ್ದಾರೆ ಅವರಿಗೂ ಪತ್ನಿಯನ್ನು ಕಳೆದುಕೊಂಡ ದುಃಖವಿದೆ ಇದ್ದ ಮಗಳೊಬ್ಬಳನ್ನು ನಾವು ಯಾವಾಗಲೂ ಇಲ್ಲಿಯೇ ಕುಳ್ಳಿರಿಸುವುದು ಯೋಗ್ಯವಲ್ಲ" ಎಂದು ಅಪಾರವಾದ ಪ್ರೀತಿಯನ್ನು ತೋರಿಸುವವಳಂತೆ ಸಂಜೀವಿಯ ಬಗ್ಗೆ ಆಸ್ಥೆ ವಹಿಸಿ ನುಡಿಯುತ್ತಿದ್ದಳು ರಂಗಿ ಅವಳ ಮಾತುಗಳಂತೆ ನಾರಾಯಣಯ್ಯ ನಡೆಯಬೇಕಿತ್ತು ಆತನಾದರೂ ತನ್ನ ಕಾರಭಾರ ನಡೆಸಲು ಹವಣಿಸುವವನಲ್ಲ ಹಿಂದೆ ಎಂದೂ ಹಾಗೆ ಆಸೆ ಪಟ್ಟವನಲ್ಲ ಕೇವಲ ತನ್ನ ಓದಿನಲ್ಲೇ ದಿನ ಕಳೆಯುತ್ತಿದ್ದ ಆದರೆ ರಂಗಿಯ ಮನಸ್ಸು ಇನ್ನೂ ಶಾಂತವಾಗಿರಲಿಲ್ಲ ವೆಂಕಣ್ಣಯ್ಯ ತಮ್ಮನ ಮದುವೆ ಮುಗಿಸಿದ ಮೇಲೆ, ಆತಯ ಬಗ್ಗೆ ಯಾವ ಸಂಶಯವನ್ನು ಪಡೆಯಲಿಲ್ಲ ರಂಗಿ ಮಾತ್ರ ಯಾವಾಗಲೂ ಏನನ್ನೋ ಬಯಸುತ್ತ ಇದ್ದಳು ನಾರಾಯಣಯ್ಯ ಓದಿನಲ್ಲೇ ತಲ್ಲೀನನಾಗಿ, ಹೊರಗಿನ ಯಾವ ವಿಷಯಗಳಲ್ಲಿಯೂ ಆಸಕ್ತನಾಗಿರದೆ ಇರುವುದನ್ನು ನೋಡಿ ಆಕೆಗೆ ಸಂಶಯವೂ ಒಂದಿತ್ತು ಮದುವೆಯಾದ ಮರು ವರ್ಷಕ್ಕೇ ಸಂಜೀವಿ ಗರ್ಭಿಣಿಯಾದದ್ದು ಕಂಡು, ರಂಗಿಯ ಸುಪ್ತ ಚಿತ್ತ ಪುನಃ ಉದ್ರೇಕವಾಯಿತು ಹಿಂದಿನ ರೂಢಿಗಳನ್ನು ಮತ್ತೊಮ್ಮೆ ಕಾರ್ಯರಂಗಕ್ಕೆ ತರತೊಡಗಿದಳು ಮೊದಲಿನಂತೆ ನಾರಾಯಣಯ್ಯನಿರುವ ಮಾಳಿಗೆಗೆ ಹತ್ತಿ, ಅವನೊಡನೆ ಸಂಭಾಷಣೆಗೂ ಪ್ರಾರಂಭಿಸಿದಳು

ಅಂಥ ಸನ್ನಿವೇಶಗಳನ್ನು ನಾರಾಯಣಯ್ಯ ತುಚ್ಛೀರಿಸುತ್ತಿದ್ದ ಎಷ್ಟೋ ದಿನಗಳ ಪರ್ಯಂತ ಅತ್ತಿಗೆಗೆ ಯಾವ ಮಾತನ್ನೂ ಆತ ಹೇಳಲಿಲ್ಲ ಆದರೆ ಆತ ಒಂದುದಿನ "ಅತ್ತಿಗೆ, . ... . " ಎಂದು ಏನನ್ನೋ ಹೇಳಲು ಹೋಗಿ ಕಂಠ ಬಿಗಿದವನಾಗಿ ಸುಮ್ಮನೆ ಕೂತನು. ಅವನು ಆಡಿದ ಮಾತನ್ನು ಕೇಳಿ ಮತ್ತ ಅವನ ಮುಖದ ವರ್ಣವನ್ನೂ ನೋಡಿ ರಂಗಿ ಅವ

ನನ್ನು ಹೇಗೋ ನೋಡುತ್ತ ಅವನ ಸಾನಿಧ್ಯಕ್ಕೆ ತಲಪಿದಳು ನಾರಾಯಣಯ್ಯ "ಆಯ್ಯೋ! ಪಾಪ! ಪಾಪಿ" ಎಂದು ತನ್ನ ಹೊತ್ತಿಗೆಗಳನ್ನು ಅಲ್ಲಿಯೇ ಒಗೆದು, ಧರಧರನೆ ಇಳಿದು ರಾತ್ರಿಯಲ್ಲೆ ಎಲ್ಲಿಗೋ ಹೋದ ಮುಂದೆ ನಾಲ್ಕಾರು ದಿನಗಳ ವರೆಗೆ ಮನೆಯತ್ತ ಕಾಲಿಡಲಿಲ್ಲ ಈ ಘಟನೆ ಅವರಿಬ್ಬರಲ್ಲೇ ಉಳಿಯಿತು ಬೇರಾರಿಗೂ ಅದರ ವಾಸನೆಯೂ ಸಿಗಲಿಲ್ಲ ಆ ಹೊತ್ತಿನಲ್ಲಿ ಸಂಜೀವಿ ನಾಲ್ಕು ತಿಂಗಳ ಗರ್ಭಿಣಿಯಾಗಿದ್ದಳು ಅಂದಿನ ದಿನ ಆಕೆಯೂ ಎಡಹಿತ್ತಲಲ್ಲಿ ಇದ್ದಳು

ರಾತ್ರಿ ವೆಂಕಣ್ಣಯ್ಯ ಬಂದು ಅಟ್ಟದಲ್ಲಿ ತಮ್ಮನನ್ನು ಕಾಣದೆ, "ರಂಗೀ" ಎಂದರು ರಂಗಿಯು ಕ್ರೋಧಾಂಧಳಾಗಿ ಬಂದು ನಿಂತಳು ಗಂಡನ ಎದುರು "ನಾರಾಯಣ ಇಲ್ಲವೇ ?" ಎಂದು ಕೇಳಿದರು

"ನನಗೇನು ಗೊತ್ತಿಲ್ಲ"

"ಪುಸ್ತಕಗಳನ್ನೆಲ್ಲ ಹಾಗೇ ಒಗೆದು ಹೋಗಿದ್ದಾನಲ್ಲ! ಎಲ್ಲಿಗೆ ಹೋಗಿದ್ದಾನೆ?"

"ಹೋದರೆ ಎಡಹಿತ್ತಲಿಗೆ, ಮತ್ತೆಲ್ಲಿಗೆ ?"

"ಹೇಳಿ ಹೋಗಲಿಲ್ಲವೋ ?"

"ಇಲ್ಲ"

"ಈ ರಾತ್ರಿಯಲ್ಲಿ ಅಲ್ಲಿಗೆ ಹೋಗುವ ಕಾರಣವೇನಿತ್ತೋ !"

"ಯಾರಿಗೆ ಗೊತ್ತು !" ಎಂದು ಹೇಳಿ ರಂಗಿ ಒಳಗೆ ಹೋದಳು ಆ ರಾತ್ರಿ ಹೇಗೂ ಕಳೆಯಿತು ಮರುದಿನ ಬೆಳಗಾಗುವುದರೊಳಗೆ ಒಬ್ಬ ಆಳನ್ನು ಎಡಹಿತ್ತಲಿಗೆ ಕಳುಹಿಸಿದರು ವೆಂಕಣ್ಣಯ್ಯ "ಅಲ್ಲಿ ನಾರಾಯಣಯ್ಯ ಇದ್ದಾನೋ ಇಲ್ಲವೋ ನೋಡಿ ಬಾ" ಎಂದು ಅವನಿಗೆ ಹೇಳಿ ಕಳುಹಿಸಿದ್ದರು ಆಳು ಅಲ್ಲಿಗೆ ಹೋಗಿ ಒಳ್ಳೆಯ ಸುದ್ದಿಯನ್ನೇ ತಂದ ನಾರಾಯಣಯ್ಯ ಎಡಹಿತ್ತಲಲ್ಲಿ ಇದ್ದಾನೆಂಬುದನ್ನು ತಿಳಿದು ವೆಂಕಣ್ಣಯ್ಯನವರಿಗೆ ಧೈರ್ಯ ಬಂತು

ನಾರಾಯಣಯ್ಯ ಬಹಳ ದಿನ ಮಾವನ ಮನೆಯಲ್ಲಿ ಕಳೆಯಲಿಲ್ಲ ಎಂಟೇ ದಿನಗಳಲ್ಲಿ ಹೆಂಡತಿಯನ್ನು ಕರೆದುಕೊಂಡೇ ಘಲವಾರಿಗೆ ಬಂದ ಆತ ಬಂದವನು ಅತ್ತಿಗೆಯ ಕೆಂಡದಂಥ ಕಣ್ಣುಗಳಿಗೆ ಮೊದಲು ಬಿದ್ದ "ಹೆಂಡತಿಯ ನೆನಪು ರಾತ್ರಿಯಲ್ಲೇ ಆಯಿತೋ!" ಎಂದು ಆಕೆ ಸಂಕೋಚ ಪಡದೆ ನುಡಿದಳು ಆ ಮಾತು ನಾರಾಯಣಯ್ಯನಿಗೆ ಶಲ್ಯದಂತೆ ನಟ್ಟಿತು. ಅದರ ಗಾಯ ಆತ ಸಾಯುವವರೆಗೂ ವಾಸಿಯಾಗಲಿಲ್ಲ ಎನ್ನಿ ರಂಗಿ ಆ ಒಂದು ಮಾತಿನಿಂದ ತೃಪ್ತಳಾಗಲಿಲ್ಲ ಮುಂದೆ ಅವಳು ನಾನಾರೀತಿಯಿಂದ ಸಂಜೀವಿಯನ್ನು ಪೀಡಿಸಲು ತೊಡಗಿದಳು "ನಿನ್ನ ಗಂಡನಿಗೆ ನೀನೇ ಬಡಿಸು" ಎಂದು ಮುಂತಾಗಿ ಮಾತಿನ ಮೊಳೆಗಳನ್ನು ಸಂಜೀವಿಗೆ ಚುಚ್ಚು ವುದನ್ನು ನಡೆಸಿದಳು "ದಿನಗಳು ಕಠಿಣವಾಗುತ್ತ ಬರತೊಡಗಿವೆ" ಎಂದು ಒಮ್ಮೆ ಸಂಜೀವಿ ತನ್ನ ಪತಿಗೆ ತಿಳಿಸಬೇಕಾಯಿತು "ನೀನೇ ಆದಷ್ಟು ಸಮಾಧಾನದಿಂದ ಇರು" ಎಂದು ನಾರಾಯಣಯ್ಯ ಹೆಂಡತಿಗೆ ಬುದ್ಧಿ ಹೇಳಿದ ಮುಂದೆ ಯಾವ ಕಷ್ಟ ಬಂದರೂ ಸಂಜೀವಿ ತನ್ನ ಪತಿಗೆ ತಿಳಿಸುವುದನ್ನೇ ಬಿಟ್ಟಳು

ಅಂದಿನಿಂದ ರಂಗಿಯು ನಾರಾಯಣಯ್ಯನೊಡನೆ ವಿಶೇಷವಾಗಿ ಮಾತಾ ಡುವ ಗೋಜಿಗೆ ಹೋಗಲಿಲ್ಲ ಆದರೆ ನಾರಾಯಣಯ್ಯನ ದೇಹ ದಿನದಿಂದ ದಿನಕ್ಕೆ ಸೊರಗುತ್ತ ಬರತೊಡಗಿತು ಒಂದೇ ತಿಂಗಳಲ್ಲಿ ಅವನ ಕೈಕಾಲುಗಳು ಕಡ್ಡಿಯಂತಾದವು ಹೊಟ್ಟೆಯ ಹಸಿವು ಮಾಯವಾಯಿತು 'ಹಸಿವು' ಎಂಬ ಪದದ ಅರ್ಥವೇ ಅವನಿಗೆ ತಿಳಿಯದಂತೆ ಆಯಿತು ವೆಂಕಣ್ಣಯ್ಯ ತಮ್ಮನ ಆರೈಕೆ ನೋಡಿಕೊಳ್ಳಲು ಒಂದು ಆಳನ್ನೇ ನಿಯಮಿಸಲು ಹಂಬಲಿಸಿದರು. "ಇವನಿಗೆಲ್ಲಿ ಕ್ಷಯ ಹಿಡಿಯಿತೋ!" ಎಂದು ಅವರಿಗೆ ಸಂಶಯ ಬಂತು. ಗಂಡನ ರೋಗಗ್ರಸ್ಥ ಸ್ಥಿತಿಯನ್ನು ನೋಡಿ ಗರ್ಭಿಣಿ ಸಂಜೀವಿಯೂ ಕರಗುತ್ತ ಬಂದಳು. ಆದರೆ ನಾರಾಯಣಯ್ಯ ಯಾರ ಔಷಧವನ್ನೂ ಕುಡಿಯಲಿಲ್ಲ ವೆಂಕಣ್ಣಯ್ಯ "ಮಂಗಳೂರು 'ಸರ್ಜನ್' ಡಾಕ್ಟರರನ್ನು ಕರೆಸಬೇಕೆಂದು ಮಾಡಿದ್ದೇನೆ ಹೇಗೆ ನಾನಾ?" ಎಂದು ಕೇಳಿದರು

"ನನ್ನ ಕಾಯಿಲೆ ಏನೆಂದು ನನಗೆ ಗೊತ್ತಿಲ್ಲವೇ? ನನಗೆ ಯಾವ ಔಷಧವೂ ಬೇಡ ನನಗೆ ಔಷಧ ನಾನೇ ಕೊಡುತ್ತೇನೆ"

" ಪಂಡಿತರ ಔಷಧ ಪಂಡಿತರ ದೇಹಕ್ಕೆ ನಾಟುವುದಿಲ್ಲಂತೆ "

" ಆದರೆ ನನಗೆ ನನ್ನ ಮದ್ದೇ ಸಾಕು "

" ಏನೋ ಅಪ್ಪಾ, ನಿನ್ನ ದೇಹ ನೋಡಬೇಕಾದರೆ ನನಗೆ ಯಾಕೋ ಸಂಶಯ ಬರುತ್ತದೆ "

" ನೀವೇನು ಹೆದರಬೇಡಿ " ಎಂದು ವೆಂಕಣ್ಣಯ್ಯನವರಿಗೆ ಧೈರ್ಯ ಹೇಳಿಯೇ ಬಿಟ್ಟ—ನಾರಾಯಣಯ್ಯ

ಮೂಲೆಯಲ್ಲಿ ರಾಮನಾಮ ಜಪಿಸುತ್ತ ಕೂಡುವ ಮುದುಕಿಗೂ ಮಗನ ಚಿಂತೆ ಹತ್ತಿತು ಆಕೆ ಮಗನನ್ನು ಬದಿಯಲ್ಲಿ ಕುಳ್ಳಿರಿಸಿ, " ಮಗೂ, ನೀನು ಹಟ ಹಿಡಿಯಬೇಡ ಒಳ್ಳೆಯ ಇಂಗ್ಲೀಷ ಔಷಧ ಕುಡಿ ನಿನ್ನ ಔಷಧ ನಿನಗೇ ನಾಟುವುದಿಲ್ಲ " ಎಂದು ಹೇಳುತ್ತ ಕಣ್ಣೀರು ಕರೆದಳು ನಾರಾಯಣಯ್ಯ ತಾಯಿಗೂ ಅಣ್ಣನಿಗೆ ಉತ್ತರಿಸಿದಂತೆ ಉತ್ತರ ಕೊಟ್ಟ ಆದರೆ ಅವನು ರಂಗಿಗೆ ಹೇಳಿದ ಮಾತು ವಿಚಾರ ಮಾಡತಕ್ಕ ಸೊಲ್ಲೆನ್ನಬಹುದು ಆಕೆ ಬೇಕೆಂದೇ ಕೇಳಿದಳು " ಇದೇನು ನಿಮ್ಮ ದೇಹ ಬಡಕಟ್ಟು ಆಯಿತು! ನೀವು ಪಂಡಿತರು, ಬ್ರಹ್ಮಚಾರಿಗಳು—ಸನ್ಯಾಸಿಗಳು—ಹೀಗೇಕ ಆಯಿತು? ಮತ್ತೆಲ್ಲಿಯಾದರೂ " ಎಂದು ಕೊನೆಯ ಮಾತನ್ನು ನಾರಾಯಣಯ್ಯನಿಗೇ ಅರ್ಥಮಾಡಿಕೊಳ್ಳಲು ಬಿಟ್ಟಳು ಅದಕ್ಕೆ ಅವನು " ಅಂಗೈ ನೋಡಲಿಕ್ಕೆ ಕನ್ನಡಿ ಬೇಕೆ? ನಾನೇನು ಕುರುಡನೆಂದು ಭಾವಿಸಿದಿರೇ?" ಎಂದು ಒಂದು ವಿಧವಾಗಿಯೇ ಉತ್ತರಿಸಿದ ತನ್ನ ಕೆಲಸ ಕೈಗೂಡಲಿಲ್ಲ ವೆಂಬುದು ರಂಗಿಗ ಖಂಡಿತವಾಯಿತು—ಅವನ ಆ ಮಾತುಗಳಿಂದ

ನಾರಾಯಣಯ್ಯ ತನ್ನ ಕಾಯಿಲೆಯನ್ನು ಎಂಟೇ ದಿನಗಳಲ್ಲಿ ಗುಣ ಮಾಡಿಕೊಂಡ ಆ ಮೇಲೆ ಅವನ ಹೆಂಡತಿಗೂ ಒಂದು ಎಂಥದೋ ಬೇರನ್ನು ಕೊಟ್ಟು, " ಇದನ್ನು ನೀನು ದಿವಸಾಗಲೂ ರಾತ್ರಿ ಮಲಗುವಾಗ ಒಮ್ಮೆ ನಾಲಿಗೆಯಿಂದ ನೆಕ್ಕಿ, ಪುನಃ ನೀರಿನಿಂದ ತೊಳೆದು ಇಟ್ಟುಕೋ ಈ ಮನೆಯಲ್ಲಿ ಎಷ್ಟು ದಿನ ಇರುತ್ತೀಯೋ ಅಷ್ಟು ದಿನ ಹಾಗೇ ಮಾಡಲು ಮರೆಯಬೇಡ " ಎಂದಿಷ್ಟೇ ಹೇಳಿದ ಹೆಂಡತಿಯು " ಮುಂದಿನ ಗತಿಯೇನು? ನನಗೆ ಈ ಮನೆ ಬಿಟ್ಟು ಬೇರಾವುದಿದೆ?" ಎಂದು ಕೇಳಿದಳು ಅಂದೇ

ರಾತ್ರಿ ಹಿಂದೆ ಆದ ತನ್ನ ಮತ್ತು ರಂಗಿಯ ಮನಸ್ತಾಪವನ್ನು ಸ್ವಲ್ಪದರಲ್ಲೇ ಹೇಳಿದ ಆಮೇಲೆ ತನಗೆ ಆದ ಕಾಯಿಲೆಯ ಕಾರಣವನ್ನೂ ತಿಳಿಯಪಡಿಸಿದ ತನಗೆ ರಂಗಿ ಹೊಟ್ಟೆಗೆ ' ಕೈಮಾಂಸ ' (ಮೋಹಿಸುವ ಮದ್ದು) ಹಾಕಿದಳು ಆದರಿಂದ ತನಗೆ ಹೀಗೆ ಒಮ್ಮೆಲೇ ಕಾಯಿಲೆ ಬಂತೆಂದು ಸಾವಕಾಶವಾಗಿ ಹೇಳಿದ ಅದೇ ಅವನು ಆಕೆಗೆ ಹೇಳಿದ ಕೂನೆಯ ಮಾತಾಯಿತು. ಅಂದಿನ ರಾತ್ರಿ ಬೆಳಗಾಗುವುದರೊಳಗೆ ನಾರಾಯಣಯ್ಯ ಹೆಂಡತಿಯನ್ನು ಬಿಟ್ಟು ಹೋದ ತಾಯಿಯ ಕಾಲಿಗೆ ಆಕೆ ನಿದ್ದೆ ಹೋಗಿರುವಾಗಲೇ ನಮಸ್ಕರಿಸಿ, " ಋಣವಿದ್ದರೆ ನೀನು ನನ್ನನ್ನು ಸಾಯುವುದರೊಳಗೆ ನೋಡುವಿ " ಎಂದು ಮನಸ್ಸಿನಲ್ಲೇ ಪ್ರಾರ್ಥಿಸಿಕೊಂಡ ಹಿಂದು ಮುಂದಿನ ಎಣಿಕೆ ಇಲ್ಲದೆ ತನ್ನೂರು ಬಿಟ್ಟು ಹೋದನು

ಈ ಪರಿಯಲ್ಲಿ ಗಂಡನು ದೇಶಭ್ರಷ್ಟನಾದಾನೆಂದು ಸಂಜೀವಿ ಎಣಿಸಿರಲಿಲ್ಲ ಅವಳಿಗೆ ಚಿಂತೆಯೇ ಹತ್ತಿತು ಗಂಡನಿರುವಾಗಲೇ ರಂಗಿಯ ಶಿಕ್ಷೆ ತಡೆಯುವುದು ಇವಳಿಂದ ಆಗುತ್ತಿರಲಿಲ್ಲ ಗಂಡ ಊರು ಬಿಟ್ಟಮೇಲೆ ಅಲ್ಲಿ ದಿನಕಳೆಯುವುದೂ ಕಠಿಣವಾಯಿತು ಊಟತಿಂಡಿಗಳ ಮೇಲಿನ ರುಚಿಯೇ ಹೋಯಿತು

ಮಗಳ ಈ ತರದ ಹೀನ ಸ್ಥಿತಿಯನ್ನು ನೋಡಿ, ಕೇಳಿ ಅಣ್ಣಾಪಯ್ಯನವರಿಗೆ ಹುಚ್ಚೇ ಹಿಡಿದಂತಾಯಿತು ಅಳಿದ ಪತ್ನಿಯನ್ನ ಪುನಃ ಪುನಃ ನೆನೆದು " ಅವಳು ಇದ್ದಿದ್ದರೆ . . ನನ್ನ ಮಗಳು ಹಾಗೆ ಅಲ್ಲಿ ಇರಬೇಕಾಗಿರಲಿಲ್ಲ " ಎಂದು ಜೀವದೊಳಗೇ ಕೊರಗಿಕೊಂಡರು ಅಳಿಯ ಊರುಬಿಟ್ಟ ಸುದ್ದಿ ಕೇಳಿದೊಡನೆ, ಫಲನೂರಿಗೆ ಹೋದರು. "ಸಂಜೀವಿಯನ್ನು ಕಳುಹಿಸುತ್ತೀರೋ?" ಎಂದು ರಂಗಿಗೆ ಕೇಳಿದರು

" ಗಂಡ ಬಿಟ್ಟು ಓಡಿಹೋದರೆ ನಾವೇನು ಅವಳಿಗೆ ಗುಂಡು ಹಾಕುವುದಿಲ್ಲ " ಎಂದು ಧೈರ್ಯದಿಂದ ಹೇಳಿದಳು ರಂಗಿ

" ನಿಮ್ಮಲ್ಲಿಗೆ ಕರೆದುಕೊಂಡು ಹೋಗಿ ನೀವು ಏನು ಮಾಡುತ್ತೀರಿ ? ನಿಮ್ಮಿಂದ ಬಾಣಂತನ ಮಾಡಿಸಲಿಕ್ಕೆ ಸಾಧ್ಯವಿದೆಯೇ ? ಅವಳಿಗೀಗ ಎಂಟರಲ್ಲಿ ಬಿತ್ತು ನಿಮ್ಮ ಮನೆಯಲ್ಲಿ ಹಿರಿಯ ಹೆಣ್ಣು ಎಂಬುದು ಇಲ್ಲ " ಎಂದು ರಂಗಿ

ಹೇಳಿದಾಗ ಅವಳ ಕೊನೆಯ ಮಾತು ಅಣ್ಣಾಪ್ಪಯ್ಯನವರ ಕಿವಿಯೊಳಗೆ ಕಾದ ಸೀಸ ಸುರುವಿದ ಹಾಗೆ ನೋವನ್ನುಂಟು ಮಾಡಿತು ಕ್ಷಣ ಹೊತ್ತು ಅವರ ಬಾಯಿಯಿಂದ ಸೊಲ್ಲೇ ಹೊರಡಲಿಲ್ಲ

" ಅಲ್ಲ, ಮತ್ತೆ ಚೊಚ್ಚಲು ಬಸಿರು, ನಾವೇ ಬಾಣಂತನ ಮಾಡಿಸ ಬೇಕು ಇನ್ನೂ ಅವಳಿಗೆ ಏನೇನು ತಿನ್ನಬೇಕೆಂದು ಆಸೆ ಇದೆಯೋ ಗೊತ್ತಿಲ್ಲ " ಎಂದು ಪೂರ್ಣ ಬಾಯಿ ಮುಚ್ಚುವುದರೊಳಗೆ ಅಣ್ಣಾಪ್ಪಯ್ಯನವ ರಿಗೆ ರಂಗಿ ಹೀಗೆಂದಳು " ಅವಳಿಗೆ ಇಲ್ಲಿ ತಿನ್ನಲಿಕ್ಕೆ ಏನೂ ಸಿಗುವುದಿಲ್ಲ ನಮಗೆ ಅವಳು ಎರಡು ಜೀವದವಳೆಂದು ಗೊತ್ತೇ ಇಲ್ಲ ಇಲ್ಲಿಯವರೆಗೆ ನೀವೇ ಅವಳನ್ನು ಸಾಕಿದಿರಿ "

" ಹಾಗೆಲ್ಲ ಅರ್ಥವಿಲ್ಲದ ಮಾತು ಆಡ ಬಾರದು ರಂಗೂ ನೀನು ಇನ್ನೂ ಸಣ್ಣವಳು, ನಿನಗೆ ಏನೂ ತಿಳುವಳಿಕ ಇಲ್ಲ " ಎಂದು ಸಮಾಧಾನ ದಿಂದ ಹೇಳಿದರು ಅಣ್ಣಾಪ್ಪಯ್ಯ

" ಅದೇನೇ ಇರಲಿ, ನಾವು ಸಂಜೀವಿಯನ್ನು ಕಳುಹಿಸುವುದಿಲ್ಲ ನಮಗೂ ನಾಚಿಗೆ ಮಾನ ಮರ್ಯಾದೆ ಇದೆ ಇವತ್ತು ನಿಮ್ಮಲ್ಲಿಗೆ ಕಳುಹಿ ಹಿಸಿದರೆ ನಾಳೆ ಲೋಕ ಏನು ಹೇಳಬಹುದು ಗೊತ್ತೇ ? " ಎಂದು ಆಕೆ ಹೇಳಿದೊಡನೆ ಅಣ್ಣಾಪ್ಪಯ್ಯ ಅವರ ಮನೆಯನ್ನು ಇಳಿದು ಬಂದೇ ಬಿಟ್ಟರು.

ಎಷ್ಟೆಂದರೂ ಅಣ್ಣಾಪ್ಪಯ್ಯನವರದ್ದು ತಂದೆಯ ಕರುಳು ಅದು ತಾಯಿಯ ಕರುಳೂ ಅಹುದು ತಾಯಿಯಿಲ್ಲದ—ಮಕ್ಕಳಿಗೆ ಅವರೇ ತಂದೆ, ಅವರೇ ತಾಯಿ ಎಂದಮೇಲೆ ಅವರ ಮನಸ್ಸು ಹೇಗೆ ಕೇಳೀತು ? ಬಸಿರಿ ಯಾದ ಮಗಳ ಬಯಕೆಗಳು ಏನೇನಿರಬಹುದೆಂದು ತಾವೇ ಊಹಿಸಿದರು ಆದರೆ ಅವಳು ಬಯಸುವ ತಿಂಡಿತಿನಿಸುಗಳನ್ನು ಮಾಡಿ ಒಯ್ದು ಆ ಮನೆ ಯಲ್ಲಿ ಕೊಡುವುದು ಅಸಾಧ್ಯ ಆ ಮನೆಯ ಮೆಟ್ಟಲು ಇನ್ನು ಮುಂದೆ ಹತ್ತಬಾರದೆಂದೇ ಅಣ್ಣಾಪ್ಪಯ್ಯ ನಿರ್ಧರಿಸಿದ್ದರು ಅದಕ್ಕಾಗಿ, ನಾಲ್ಕಾರು ದಿನಗಳಿಗೊಮ್ಮೆ ಹೊಸ ಹೊಸ ತಿನಿಸುಗಳನ್ನು ಮಾಡಿಸುತ್ತಿದ್ದರು—ಮೂಡು ಮನೆಯಿಂದ ಸಾವಿತ್ರಿಯನ್ನು ಕರೆಯಿಸಿ ಆ ಮೇಲೆ ತನ್ನ ಮಗಳಿಗೆ ಎಷ್ಟು ಬೇಕೋ ಅಷ್ಟನ್ನು ಪಂಜೆಯಲ್ಲಿ ಕಟ್ಟಿಕೊಂಡು ಬೆಳಿಗ್ಗೆ ಸೂರ್ಯ ಮೂಡಿ

ಒಂದು ಮೂರು ಬಂದೊಡನೆ ಮನೆಬಿಟ್ಟು ನಡೆಯುತ್ತಿದ್ದರು ಆ ಹೊತ್ತಿಗೆ ಸಂಜೀವಿಯು ಫಲವಾರಿನ ಹತ್ತಿರದ ಕಾಗೆಗುಡ್ಡೆಯ ಮೇಲೆ ಸೊಪ್ಪು ತೆಗೆಯುತ್ತ ಇರುತ್ತಿದ್ದಳು ಅಲ್ಲಿಗೆ ಹೋಗಿ, "ಬೇಗ ಬಾ ಇಲ್ಲಿ" ಎಂದು ಪ್ರೀತಿಯಿಂದ ಕರೆಯುತ್ತಿದ್ದರು "ನೀನು ಯಾಕ ಇಷ್ಟು ಕಷ್ಟ ಪಟ್ಟುಕೊಳ್ಳುತ್ತಿ ?" ಎಂದು ಮಗಳು ಹೇಳುತ್ತಿದ್ದಳು, ತಂದೆ ತನ್ನ ಪಂಜೆಯನ್ನು ಬಿಚ್ಚಿ ಅದರೊಳಗಿನ ಕಡಬನ್ನೋ, ಕಜ್ಜಾಯವನ್ನೊ ಕೊಡುವಾಗ ಅದರಲ್ಲೇ ಸ್ವಲ್ಪವನ್ನು ಒಯ್ದು ಮನೆಯ ಮೂಲೆಯಲ್ಲಿ ತನ್ನಂತೇ ಅನಾಥಳಾಗಿ ಬಿದ್ದಿರುವ ಅತ್ತೆಗೆ ಕೊಡುತ್ತಿದ್ದಳು—ಸಂಜೀವಿ ತಂದೆಯು ತನ್ನ ಮೇಲೆ ಇಟ್ಟ ವಾತ್ಸಲ್ಯದ ಋಣವನ್ನು ಹೇಗೆ ತೀರಿಸಬೇಕೆಂದೂ ಸಂಜೀವಿ ಆಗಾಗ ಚಿಂತಿಸುತ್ತಿದ್ದಳು

ಸಂಜೀವಿಯ ಪಾಲಿನ ವಿಧಿಯು ಕ್ರೂರವಾಗಿತ್ತೆಂದೇ ಹೇಳಬೇಕು ಅವಳು ಪೂರ್ಣ ಹೊಟ್ಟೆಗೆ ಒಂಬತ್ತು ತಿಂಗಳು ತುಂಬದೆ ಬಾಣಂತಿಯಾದಳು ಮಗುವೂ ಬಹಳ ದಿನ ಉಳಿಯಲಿಲ್ಲ, ಉಳಿಯುವಂತೂ ಇರಲಿಲ್ಲ ರಂಗಿಯು ಆರೈಕೆ ಎಂದಮೇಲೆ ಕೇಳಬೇಕೆ? ಮಗು ಹೋದದ್ದು ಹೋಯಿತು ಅದರ ಹಿಂದೇ ಸಂಜೀವಿಯೂ ಪಯಣ ಬೆಳೆಸುವ ಸ್ಥಿತಿಗೆ ಬಂದು ನಿಂತಳು ಮೈಯೆಲ್ಲ ನೀರು ಬಂದು ಬಾತಿತು! "ಇನ್ನು ಮಗಳನ್ನು ಅಲ್ಲಿ ಸಾಯಲಿಕ್ಕೆ ಬಿಡುವುದು ಸರಿಯೇ ?" ಎಂದು ಅಣ್ಣಪ್ಪಯ್ಯ ಹೋಗಿ, ನಾಲ್ಕು ಜನ ಆಳುಗಳ ಸಹಾಯದಿಂದ—ಸಂಜೀವಿಯನ್ನು ಕಂಬಳಿಯಲ್ಲಿ ಹಾಕಿಕೊಂಡು ಹೊತ್ತು ತಂದರು ಮುಂದೆ ನಾಲ್ಕೈದು ತಿಂಗಳು ರಾತ್ರೆ ಹಗಲು ನಿದ್ದೆಗೆಟ್ಟು ಮಗಳ ಜೀವ ಉಳಿಸಿದರು

೩

ಸುಮತಿಯ ಕಣ್ಣಿಗೆ ಯಾರೋ ದೂರದಿಂದ ನಡೆದು ಬರುವುದು ಕಂಡಿತು ಆ ವ್ಯಕ್ತಿ ಯಾರೆಂಬುದು ಗೊತ್ತಿಲ್ಲದಿದ್ದರೂ ಸುಮತಿಗೆ ಅವನನ್ನು ಮತ್ತೂ ಮತ್ತೂ ನೋಡಬೇಕೆಂದೆನಿಸಿತು. ಆತನಾದರೂ ಮೂಡುಮನೆಯತ್ತ ಬರುತ್ತಿದ್ದ ಅವನು ತೊಟ್ಟುಕೊಂಡ ಅರಿವೆಗಳೇ ಅವನು ಗಟ್ಟದ ಮೇಲಿನಿಂದ ಅದೇ ಬರುವನೆಂಬುದನ್ನು ಹೇಳುತ್ತಿದ್ದವು ಅವನ ನಡಿಗೆಯೂ ಹೊಸ ಮಾದರಿಯದಾಗಿತ್ತು ಅವನ ವಯಸ್ಸು ಬಹಳವಾದರೆ ಇಪ್ಪತ್ತೈದು ವರ್ಷ ವಯಸ್ಸಿಗೂ ತಕ್ಕಂತೆ ಬೆಳವಣಿಗೆ ಅವನದು ತಲೆಗೂದಲನ್ನು ಓರಣವಾಗಿ ಬಾಚಿದ್ದರೂ ಅವುಗಳ ಮೇಲೆ ಮಾರ್ಗದ ಧೂಳು ಬಂದು ಕೂತು ಕೆಂಪಾಗಿ ಶೋಭಿಸುತ್ತಿತ್ತು ಒಟ್ಟಿನಲ್ಲಿ ಅವನೊಬ್ಬ ಸುಂದರ ವ್ಯಕ್ತಿ ಅವನು ಆ ಹಳ್ಳಿಗೆ ಹೊಸಬನೂ ಅಹುದು ಅವನು ತಮ್ಮ ಮನೆಯತ್ತ ಬರುವುದನ್ನು ನೋಡಿ, ಸುಮತಿ 'ಅವನಾರು?' ಎಂಬ ದನ್ನು ಸ್ವಲ್ಪ ಹೊತ್ತು ಯೋಚಿಸುತ್ತ ನಿಂತಳು ಚಾವಡಿಯಲ್ಲಿ ನಿಂತು ಅವನನ್ನೇ ದಿಟ್ಟಿಸಿ ನೋಡತೊಡಗಿದಳು "ಅವರೇ ನನ್ನಪತಿಯಾಗಿದ್ದರೆ! " ಎಂದೂ ಅವಳ ಹೃದಯ ಆಶಿಸಿತು ಆ ಮನುಷ್ಯ ಗಟ್ಟದಿಂದ ಬಂದವನು ಎಂಬುದಕ್ಕೆ ಅವನು ಬಂದ ಹೊತ್ತೇ ಸಾಕ್ಷಿಯಾಗಿತ್ತು ಆತ ಮೂಡುಮನೆಯ ಮುಂದಿನ ಗದ್ದೆಯಲ್ಲಿ ಇರುವಾಗ ಸುಮತಿಗೆ ಅವನು ಖಂಡಿತಕ್ಕೂ ತನ್ನ ಗಂಡನೆಂದು ಹೇಳಿಕೊಳ್ಳುವ ಧೈರ್ಯ ಬಂತು ಅತ್ತಿತ್ತ ಸರಿಯಲಿಕ್ಕೂ ಅವಳಿಗೆ ಕಣ್ಣು ಕಾಣದಾದವು "ಎಂಥ ಹೊತ್ತಿನಲ್ಲಿ ಬಂದರು! ಮನೆಯಲ್ಲಿ ಯಾರೂ ಇಲ್ಲವಲ್ಲ! ನಾನೇ ಹೋಗಿ ಹೇಗೆ ಸತ್ಕರಿಸಲಿ! ಯಾರನ್ನಾದರೂ ಕರೆಯೋಣವೆಂದರೂ ಸಾಧ್ಯವಿಲ್ಲ ಛೇ, ನಾನೇ ಅವರನ್ನು ಕಾಣಬೇಕೆ? ಅಮ್ಮ ಕೂಡಾ ಉಂಡವಳೇ ಎಡ ಹಿತ್ತಲಿಗೆ ಹೋಗಬೇಕೇ!" ಎಂದು ಅಸಮಾಧಾನ ಪಡುತ್ತ ಅತ್ತ ಇತ್ತ ನಡೆದಳು ಕೊನೆಗೆ ದೃಢವಾದ ಮನಸ್ಸು ಮಾಡಿ, ಒಳಗೆ ಹೋಗಿಯೇ ಬಿಟ್ಟಳು ಒಳಗಿನಿಂದ ಒಂದು ತಂಬಿಗೆ ನೀರು ತೆಗದುಕೊಂಡು ಬಂದೂ ಆಯಿತು

ಚಾವಡಿಯ ಬಾಗಿಲದ ಹತ್ತಿರ ನೀರನ್ನು ತಂಬಿಗೆಯಲ್ಲಿ ಹಿಡಿದುಕೊಂಡು ತಲೆಯನ್ನು ಬಾಗಿಸಿ, ಅವರು ಬಂದೊಡನೆ—ಅವರ ಕಾಲಿಗೆ ನೀರು ಹಾಕಿ ನಮಸ್ಕಾರ ಮಾಡಬೇಕೆಂದು ಯೋಚಿಸಿ, ನಿಂತಿದ್ದಳು ಅವಳ ಹೃದಯದ ಮಿಡಿತ ನೂರ್ಮಡಿಯಾಗಿತ್ತು ಕೈಕಾಲುಗಳೆಲ್ಲ ಬಲಹೀನವಾಗಿದ್ದವು ಅವಳ ಕಣ್ಣುಗಳೂ ನೀರನ್ನು ತುಂಬಿಕೊಂಡೇ ಇದ್ದವು

ಇಂದು ಅವಳಿಗೆ ತನ್ನ ಪತಿಯ ಮೇಲೆ ಅಪಾರವಾದ ಆದರ ಹುಟ್ಟಿತು ಏನೇ ಆಗಲಿ, ತನ್ನನ್ನು ಬಿಟ್ಟು ಹೋಗಿದ್ದರೂ ಬಂದರಲ್ಲ ಕರುಣೆ ಎಂಬುದು ಅವರಿಗೂ ಉಂಟು ಎಷ್ಟೆಂದರೂ ಅವರ ಹೃದಯವೂ ಮಾನವ ಹೃದಯ ತನ್ನ ಪತಿಯನ್ನು ಹೇಗಾದರೂ ಕಂಡೆನಲ್ಲ ನನ್ನ ಪುಷ್ಪ ನನಗೆ ದೊರಕಿಸಿ ಕೊಟ್ಟೆಯಲ್ಲ—ಎಂದು ದೇವರನ್ನೂ ಸ್ಮರಿದಸಿಳು

ಸುಮತಿ ಹಾಗೇ ನಿಂತಿದ್ದಳು ಆದರೆ ಅಲ್ಲಿಗೆ ಯಾರೂ ಬರಲಿಲ್ಲ. ತಂಬಿಗೆಯನ್ನು ಎತ್ತಿಕೊಂಡು ಹಿಡಿದ ಅವಳ ಕೈಗೆ ಆಯಾಸವನ್ನು ತಡೆಯುವು ದಕ್ಕಾಗಲಿಲ್ಲ ಅವಳ ಹೃದಯ ಪುನಃ ಶಾಂತವಾಯಿತು “ಅವನು ನನ್ನ ಪತಿ ಹೌದೋ ಅಲ್ಲವೋ !” ಎಂದು ಸಂಶಯವೂ ಅವಳ ಮನಸ್ಸನ್ನು ಆವ ರಿಸಿತು “ಒಂದು ವೇಳೆ ಅವನೇ ನನ್ನ ಪತಿಯಾಗಿದ್ದರೆ ನಾನು ಅವನನು ಹೇಗೆ ಗುರಿತಿಸಲಿ ?” ಎನ್ನುವ ಉಭಯಸಂಕಟವೂ ಅವಳಿಗೆ ಹುಟ್ಟಿತು ತಂದೆತಾಯಿಗಳಿದ್ದರೆ ಅವನು ತನ್ನ ಪತಿಯೋ—ಎಂಬುದನ್ನು ಅರಿಯುತ್ತಿದ್ದರು ತನಗೆ ಅವನ ಮುಖದ ಪರಿಚಯವಿಲ್ಲ ಅವನ ಕಾಲುಗಳನ್ನು ಬಿಟ್ಟು ಬೇರೆ ಯಾವ ಅವಯವಗಳ ಗುರುತೂ ತನಗಿಲ್ಲ ಅವನ ಬಲಕಾಲಿಗೆ ಆರು ಬೆರಳು ಇದ್ದರೆ ಅವನೇ ತನ್ನ ಪತಿಯೆಂದು ಅವಳ ಹೃದಯಕ್ಕೆ ಮತ್ತೊಮ್ಮೆ ಜೀವ ಬಂದಿತು ಅವನ ಬಲಕಾಲಿಗೆ ಆರು ಬೆರಳು ಇವೆಯೆಂಬುದನ್ನು ಕೂಡಾ ಆಕೆ ಮದುವೆಯ ಮಂಟಪದಲ್ಲೇ ನೋಡಿದ್ದು ಅತ್ತೆಯ ಕಾಟದಿಂದ ಅವ ಳಿಗೆ ಗಂಡನ ಮುಖ ಬಿಟ್ಟು, ನೆರಳನ್ನೂ ನೋಡುವ ಯೋಗ ಬಂದಿರಲಿಲ್ಲ ಹೇಗಾದರೂ ಸದ್ಯದ ಮಟ್ಟಿಗೆ ಸುಮತಿ ತನ್ನ ಪತಿಯ ಗುರುತು ಹಿಡಿಯಲು ಶಕ್ತಳಾದಳು ಅಷ್ಟರಲ್ಲೇ ಆ ವ್ಯಕ್ತಿ ಅವರ ಅಂಗಳಕ್ಕೆ ತಲುಪಿದ ಅವನ ಕಾಲುಗಳ ಸಪ್ಪಳವೂ ಸುಮತಿಯ ಕಿವಿಗೆ ಕೇಳಿಸಿತು ಆದರೆ ಅವನು ತನ್ನ ಒಡೆಯ ಅಹುದೋ ಅಲ್ಲವೋ ಎಂಬ ಸಂಶಯ ಹಾಗೇ ಉಳಿಯಿತು

ಅವನು ಅಂಗಳದಲ್ಲಿದ್ದರೂ ಇವಳ ಮುಖವನ್ನು ಚೆನ್ನಾಗಿ ನೋಡಿದ ಇವಳು ಆತನ ಕಾಲುಗಳನ್ನೇ ದಿಟ್ಟಿಸಿ ನೋಡುತ್ತಿದ್ದಳು ಆಕೆಯ ಕೈಯೊಳಗಿನ ತಂಬಿಗೆ ಅಲ್ಲಿಯೇ ನೆಲದಮೇಲೆ ಕೂತಿತು ಕಣ್ಣುಗಳೆರಡೂ ನೀರು ತುಂಬಿಕೊಂಡವು ತಂಬಿಗೆಯಲ್ಲಿದ್ದ ನೀರನ್ನು ಆ ಮನುಷ್ಯ ಎತ್ತಿಕೊಂಡು ಹೊರಗೆ ಒಯ್ದನು ಸುಮತಿಯ ಎದೆಯು ಉರಿಯತೊಡಗಿತು ಕಣ್ಣುಗಳಿಗೆ ಕಣ್ಣೀರನ್ನು ಹೇಗೆ ಹೊರ ಚೆಲ್ಲಬೇಕೆಂಬುದು ತಿಳಿಯದಾಯಿತು ಆದರೂ ಬಂದ ದುಃಖವನ್ನು ನುಂಗಿಕೊಂಡಳು ಒಳಗೆ ಹೋಗಿ 'ನಾನು ಅದೃಷ್ಟ ಹೀನಳು' ಎಂದು ಅತ್ತಳು ಆಕೆ ಹಾಗೆ ಒಳಗೆ ಅಳುತ್ತ ಕುಳಿತರೆ ಹೊರಗೆ ಬಂದ ಅತಿಥಿಗೆ ಸತ್ಕಾರಗಳನ್ನು ಮಾಡುವುದು ಯಾರು? ಕಾರಣ ಸುಮತಿ ಬೆಲ್ಲ ನೀರು ಹಿಡಿದುಕೊಂಡು ಹೊರಗೆ ಬಂದಳು ಒಂದು ಹುಲ್ಲಿನ ಚಾಪೆಯನ್ನು ಬಿಡಿಸಿದಳು ಅದರ ಮೇಲೆ ಆ ತರುಣ ಕುಳಿತುಕೊಂಡ ಆಕೆ ಕೊಟ್ಟ ಬೆಲ್ಲವನ್ನು ತಿಂದು ನೀರನ್ನೂ ಕುಡಿದ ಸುಮತಿಯೂ ಅಲ್ಲೇ ನಿಂತಿದ್ದಳು ಅವನ ಪರಿಚಯ ಅವಳಿಗೆ ಆಯಿತು ಇವಳ ಪರಿಚಯ ಅವನಿಗಿತ್ತು ಅವನ ಕಣ್ಣುಗಳು ಕ್ಷಣದಲ್ಲೇ ಅವಳ ಕುತ್ತಿಗೆಯತ್ತ ಹೋದವು ಅವಳ ಕೊರಳ ಮಂಗಳಸೂತ್ರ ನೋಡಿ, "ಇವಳ ಮದುವೆಯೂ ಆಯಿತೇ?" ಎಂದು ಮನಸ್ಸಿನಲ್ಲೇ ಅಂದುಕೊಂಡ

"ನಮ್ಮ ಅಮ್ಮ ಎಲ್ಲಿ ಹೋಗಿದ್ದಾಳೆ ಸುಮತೀ? ಮನೆಗೆ ಬೀಗಹಾಕಿಯೇ ಹೋಗಿದ್ದಾಳಲ್ಲ" ಎಂದು ಅವನು ಸುಮತಿಗೆ ಕೇಳಿದ

"ಅವರು ಕೊಲ್ಲೂರಿಗೆ ಹೋಗಿ ನಾಲ್ಕು ದಿನಗಳಾದವು ನಾಳೆ ಬರುತ್ತೇನೆಂದು ಹೇಳಿ ಹೋದವರು ಇನ್ನೂ ಬರಲಿಲ್ಲ ನೀನು ಬರುತ್ತೀಯೆಂಬುದು ಅವರಿಗೆ ಗೊತ್ತಿತ್ತೋ ಇಲ್ಲವೋ"

"ಇಲ್ಲಿ ಯಾರೂ ಕಾಣಿಸುವುದಿಲ್ಲ!"

"ಅಪ್ಪನವರು ನಿನ್ನೆ ಮಂಗಳೂರಿಗೆ ಹೋದವರು ಇವತ್ತು ಸಂಜೆ ಬರಬಹುದು ಅಮ್ಮ ಊಟಮಾಡಿದವಳೇ ಎಡಹಿತ್ತಲಿಗೆ ಹೋಗಿದ್ದಾಳೆ." ಎಂದು ಹೇಳಿ ದೂರದಿಂದ ಬಂದ ಅವನಿಗೆ ಸ್ನಾನ ಮಾಡಲು ಕೇಳಿಕೊಂಡಳು ಆತ ಸ್ನಾನ ಮಾಡಿದ ಮೇಲೆ ಊಟವನ್ನೂ ಮುಗಿಸಿದ ಸುಮತಿಯೇ ಬಡಿಸಿ

ದಳು ಪುನಃ ಹೊರಗೆ ಬಂದು ಚಾಪೆಯ ಮೇಲೆ ಕೂತು ವಿಶ್ರಾಂತಿ ತೆಗೆದು ಕೊಳ್ಳುತ್ತಿದ್ದ. ಸುಮತಿ ಸ್ವಲ್ಪ ಹೊತ್ತು ಒಳಗಿನ ಕೆಲಸಗಳನ್ನು ಮಾಡಿ ಹೊರಗೆ ಬಂದಳು ಆಗ ಅವನು ಬೇಕೆಂದೇ ಕೇಳಿದ "ಏನು ಸುಮತೀ ನಿನ್ನ ಮದುವೆಗೆ ನನ್ನನ್ನು ಹೇಳಲೇ ಇಲ್ಲವಲ್ಲ!"

ಸುಮತಿಯ ಮುಖ ಸಪ್ಪಗಾಯಿತು ಆ ಮಾತುಗಳಿಗೆಹೇಗೆ ಉತ್ತರ ಕೊಡಬೇಕೆಂದೂ ಅವಳಿಗೆ ತಿಳಿಯಲಿಲ್ಲ ಹೃದಯದಲ್ಲಿ ಒಮ್ಮೆ ದುಃಖವೂ ಬಂತು ಅದನ್ನೆಲ್ಲ ತಡೆದುಕೊಂಡಳು ಮುಖವನ್ನು ಕೆಳಗೆ ಹಾಕಿದಳು ಆಗ ಅವಳನ್ನೇ ನೋಡುತ್ತ ಅವನು, "ಮದುವೆಗೆ ಹೇಳಲಿಲ್ಲ ನಿಜ, ಆದರೆ ಯಾವ ಅತ್ತೆಯ ಮನೆ ಸೇರಿದಿ ಎಂಬುದನ್ನಾದರೂ ಹೇಳಬಹುದಲ್ಲ" ಎಂದು ಮುಗುಳು ನಗೆ ನಗುತ್ತ ಹೇಳಿದ

"ಅದನ್ನೆಲ್ಲ ಏನು ಹೇಳುವುದು ಶಂಕರಾ, ಎಲ್ಲ ಹಣೆಯಲ್ಲಿ ಬರೆಯ ಬೇಕಲ್ಲ. . . . . ನನಗೆ ಅತ್ತೆಯ ಮನೆಯೂ ಇದೇ ಅಪ್ಪನ ಮನೆಯೂ ಇದೇ ಆಗಿದೆ" ಎಂದು ಮುಖ ಸಣ್ಣದು ಮಾಡಿ ಹೇಳಿದಳು ಈ ಮಾತು ಗಳನ್ನು ಕೇಳಿ ಶಂಕರನಿಗೆ ಆಶ್ಚರ್ಯವಾಯಿತು ಆತ ಒಮ್ಮೆಲೇ ಎದ್ದು ಕೂತು "ಹಾಗೆಂದರೆ!" ಎಂದು ದಿಗಿಲುಗೊಂಡು ಪ್ರಶ್ನಿಸಿದ "ನನ್ನ ಕೊರಳಿಗೆ ತಾಳಿ ಕಟ್ಟುವಾಗಲೇ ನನ್ನ ಬಾಳಿಗೂ ಕೊಡಲಿ ಏಟು ಇಟ್ಟು ಓಡಿಹೋದರು ನಾನಿದ್ದೇನೆ ಇಲ್ಲಿ, ಅತ್ತ ಸಾಯದಂತೆ ಇತ್ತ ಬದುಕದಂತೆ. ಮದುವೆಯಾಗಿ ಬಹಳ ದಿನ ಹೊಗಲಿಲ್ಲ—ನನ್ನ ಸಿದಿಗೆಯನ್ನು ಇಲ್ಲಿಗೆ ತರು ವುದಕ್ಕೆ ಇದು ನನ್ನ ಹೆತ್ತವರ ಅದೃಷ್ಟವೋ ದೇವರೇ ಬಲ್ಲ" ಎನ್ನುತ್ತ ಸುಮತಿ ನಿಂತಲ್ಲೇ ಅಳತೊಡಗಿದಳು ಅವಳು ಅಳುವುದನ್ನು ಕಂಡು ಶಂಕ ರನಿಗೆ ಕರುಣೆಯೂ ಬಂತು ತಾನೇಕೆ ಅವಳನ್ನು ಮಾತಾಡಿಸಿದೆ—ಎಂದೂ ಆತ ಕೊರಗಿದ. ಅಲ್ಲದೆ ಅವಳ ಬಾಯಿಯಿಂದ ಪೂರ್ಣ ವೃತ್ತಾಂತವನ್ನು ಆತನಿಂದ ಕೇಳುವುದಕ್ಕೂ ಆಗಲಿಲ್ಲ ಆಕೆ ಮುಂದೆ ಏನೂ ಹೇಳದೆ ಒಳಗೆ ಹೋದಳು. ಆಕೆಯ ಗಂಡ ಯಾರೆಂಬುದೂ ಅವನಿಗೆ ತಿಳಿಯಲಿಲ್ಲ. ಆತ ಆ ಬಗ್ಗೆ ಅರಿಯಲು ತವಕಪಡಲಿಲ್ಲ ಅವಳ ಬಾಯಿಯಿಂದ ಅದನ್ನು ಕೇಳು ವುದೂ ಅಸಾಧ್ಯವಾಗಿತ್ತು ಸುಮ್ಮನೆ ಯಾಕೆ ಉರಿಯುವ ಅಗ್ನಿಗೆ ಆಜ್ಯ

ಎರೆಯಬೇಕೆಂದು—ಶಂಕರ ಪುನಃ ಮಲಗಿದ ಪ್ರಯಾಣದ ಆಯಾಸವೂ ಅವನನ್ನು ವಿಶ್ರಾಂತಿ ತೆಗೆದುಕೊಳ್ಳುವಂತೆ ಮಾಡಿತು

ಶಂಕರ ಸುಮ್ಮನ ಮಲಗಿದ್ದ ನಿದೆ ಬಂದಿರಲಿಲ್ಲ ಎಷ್ಟೋ ಹೊತ್ತು ಹೋಯಿತು ಆಗ ಸಾವಿತ್ರಿ ಬಂದಳು ಚಾವಡಿಯಲ್ಲಿ ಯಾರೋ ಮಲಗಿದ್ದು ಅವಳಿಗೆ ದೂರದಿಂದಲೇ ಕಂಡಿತ್ತು 'ತನ್ನ ಅಳಿಯನ ಆಗಮನ ಆಗಿರಬಹುದೇ' ಎಂದು ಆಕೆಯ ಮನಸ್ಸು ಸಂಶಯ ಪಟ್ಟಿತು ಆದರೆ ಆಕೆ ಚಾವಡಿಯ ಮೆಟ್ಟಲು ಏರಿದೊಡನೆ ಅಲ್ಲಿ ಮಲಗಿದ ಶಂಕರ ನಗುತ್ತ ಎದ್ದು ಕೂತ "ಹೊ! ಶಂಕರನೇ, ಬಹಳ ದಿವಸಗಳಾದ ಮೇಲೆ ಊರಿನ ನೆನಪಾಯಿತು!" ಎಂದು ಸಟ್ಟನೆ ಹೇಳಿದಳು ಸಾವಿತ್ರಿ ಆ ಮಾತಿಗೆ ಉತ್ತರಿಸಲು ಶಂಕರನಿಂದಾಗಲಿಲ್ಲ ಅಲ್ಲಿಯೇ ಮುಖ ವಿನ್ಯಾಸ ಮಾಡಿ ಆತ ಕುಳಿತುಕೊಂಡ ಪುನಃ ಸಾವಿತ್ರಿಯೇ ಕೇಳಿದಳು "ಯಾವಾಗ ಬಂದಿ? ಊಟವಾಯಿತೇ?" ಎಂದು

"ಎಲ್ಲ ಸತ್ಕಾರ ಆಯಿತು ಆದರೆ ನನ್ನ ಟ್ರಂಕು ಸಂಪಿಗೆಯಲ್ಲೇ ಉಳಿದಿದೆ ಅದನ್ನು ಯಾರಿಂದಾದರೂ ತರಿಸಬೇಕಲ್ಲ" ಎಂದು ಶಂಕರ ಹೇಳಿದ

"ಕೋಟೇ" ಎಂದು ಸಾವಿತ್ರಿ ತನ್ನ ಸಂಗಡ ಬಂದ ಆಳನ್ನು ಕರೆದಳು ಅವನು ಬಂದವನೇ "ಥೇ ಥೇ ಗಟ್ಟದವರು! ಯಾವಾಗ ಬಂದದ್ದು!" ಎನ್ನುತ್ತ ಶಂಕರನತ್ತ ನೋಡತೊಡಗಿದ ಅವನ ನೋಟದ ಅಂತರ್ದರ್ಶನವನ್ನು ಅರಿತ ಶಂಕರ "ತಕೋ" ಎಂದು ಎರಡಾಣೆಯ ಪಾವಲಿಯನ್ನು ಅವನಿಗೆ ಕೊಟ್ಟನು ಅದನ್ನು ನಗುತ್ತ ಕೋಟಿ ಪಡೆದುಕೊಂಡು, "ನಿಮ್ಮ ಗಟ್ಟದ ಟ್ರೇಂಕ್ ಸಂಪಿಗೆಯಲ್ಲೆ ಉಂಟೋ ಇಲ್ಲಿಗೆ ತಂದಿದ್ದಿರೋ?" ಎಂದು ತಾನಾಗಿಯೇ ಕೇಳಿದ ಅದಕ್ಕೆ ಸಾವಿತ್ರಿ "ಅದನ್ನು ತರಲಿಕ್ಕೆ ನಿನ್ನನ್ನು ಕರೆದದ್ದು" ಎಂದು ಹೇಳಿದಳು "ಅದೇನು ದೊಡ್ಡ ಮಾತು" ಎನ್ನುತ್ತ ಕೋಟಿ ಸಂಪಿಗೆಗೆ ಹೊರಟ

ಸಾವಿತ್ರಿ ಎಲೆ ಅಡಿಕೆ ಮೆಲ್ಲುತ್ತ ಶಂಕರನೊಡನೆ ಗಟ್ಟದ ಸುದ್ದಿಯನ್ನು ಕೇಳತೊಡಗಿದಳು ಅವಳ ಪ್ರಶ್ನೆಗಳಿಗೆ ಸಾವಕಾಶವಾಗಿ ಉತ್ತರ ಕೊಡುತ್ತ

ಶಂಕರ ಮೆಲ್ಲನೆ ಸುಮತಿಯ ಮದುವೆಯ ಸುದ್ದಿಯನ್ನು ತೆಗೆದ " ಸುಮತಿಗೆ ಯಾವ ಊರಿನ ವರವಾಯಿತು ? " ಎಂದು ಪೀಠಿಕೆ ಹಾಕಿದ---ಶಂಕರ

" ಅದನ್ನೆಲ್ಲ ಹೇಳುತ್ತ ಕುಳಿತರೆ ಒಂದು ದೊಡ್ಡ ಕಥೆಯೇ ಆಗುತ್ತದೆ ಮಗೂ ಏನು ಮಾಡುವುದು ? ಎಲ್ಲ ಅವರವರ ಅದೃಷ್ಟ ಸುಮತಿಯನ್ನು ಬೇಕು ಬೇಕೆಂದೇ ಆ ಬಾಣಂಗಡಿಯ ಶಿವರಾಯನ ಕುತ್ತಿಗೆಗೆ ಕಟ್ಟಿದ ಹಾಗಾಯಿತು ಅವನ ಅಣ್ಣಂದಿರು ಎಲ್ಲ ಒಳ್ಳೆಯ ದರ್ಬಾರಿನಲ್ಲಿ ಇದ್ದಾರೆ ಇವನಿಗೆ ಮಾತ್ರ ಶನಿ ಕಾಡುತ್ತದೆಂದು ಕಾಣುತ್ತದೆ ಮದುವೆಯಾಗಿ ಮೂರೇ ತಿಂಗಳಲ್ಲಿ ಮನೆಬಿಟ್ಟು ಹೋದವನು ಯಾವ ಊರಿಗೆ ಹೋದನೆಂದು ಗೊತ್ತಿಲ್ಲ ಒಟ್ಟಾರೆ ಸುಮತಿಯ ಭಾಗ್ಯ ! "

" ಅವನು ಆ ಬಾಣಂಗಡಿ ಶಿವರಾಯ " ಎಂದು ಶಂಕರ ಆಲೋಚಿಸಿ ಹೇಳಿದ

" ಹೌದು, ಅವನೇ "

" ಅವನು ನನಗೆ ಹೋದ ವರುಷ ಪುಣೆಯಲ್ಲಿ ಸಿಕ್ಕಿದ್ದ ಅವನೇ ! ಸುಮತಿಯ ಗಂಡ ! ಅಲ್ಲಿ ಎಷ್ಟೆಲ್ಲ ದರ್ಬಾರು ಮಾಡುತ್ತ ಇದ್ದಾನೆ " ಎಂಬ ಮಾತುಗಳನ್ನು ಶಂಕರ ಹೇಳುವಾಗ " ರಾಮ ರಾಮ " ಎಂದು ಸಾವಿತ್ರಿ ದೇವರನ್ನು ಸ್ಮರಿಸಿದಳು " ನಾವು ಎಷ್ಟೆಲ್ಲ ಊರುಗಳನ್ನು ಶೋಧಿಸಿದರೂ ಅವನು ಸಿಗಲಿಲ್ಲ ಅಲ್ಲಿಗೂ ಒಮ್ಮೆ ನಮ್ಮ ರಾಘು ಹೋಗಿರಬೇಕು. ಆದರೆ ಅವನಿಗೇನು ಅವನು ಕಾಣಿಸಲಿಲ್ಲವಂತೆ ನಿನಗೆ ಅವನು ಸಿಕ್ಕಿದ್ದು ಖಂಡಿತ ವಲ್ಲವೋ ? "

" ನನಗೇನು ಅವನ ಗುರ್ತ ಇಲ್ಲದೇ ಇಲ್ಲ ? ಅವನೊಡನೆ ನಾನು ಹಲವಾರು ಸಲ ಕೇಳಿದ್ದೆ — 'ಏನಪ್ಪಾ ಮದುವೆ ಮಾಡಿಕೊಳ್ಳುವುದಿಲ್ಲವೋ? ಎಂದು. ಆದಕ್ಕೆ ಅವನು 'ನನಗೆ ಮದುವೆಯೇ ಬೇಡ' ಎನ್ನುತ್ತಿದ್ದ ಹೊರತಾಗಿ, ' ಮದುವೆ ಆಗಿದೆ ' ಎಂಬ ಮಾತನ್ನೇ ಎತ್ತುತ್ತಿರಲಿಲ್ಲ ಅವನ ಅಣ್ಣ ಅಲ್ಲಿ ' ಬುಧವಾರ ಪೇಟೆ ' ಯಲ್ಲಿ ದೊಡ್ಡ ಹೊಟೇಲು ನಡೆಸಿಕೊಂಡು ಇದ್ದಾನೆ ಆದರೆ ಅವನಲ್ಲಿಗೆ ಇವನು ಹೋಗುವುದಿಲ್ಲ. ಅಲ್ಲದೆ ಅವನ ಅಣ್ಣನಿಗೆ ಶಿವರಾಯ ಅದೇ ಊರಲ್ಲಿ ಇದ್ದಾನೆ ಎಂಬುದೂ ಗೊತ್ತಿರಲಿಲ್ಲ.

ಕೊನೆಗೆ ಮೊನ್ನೆ ಮೊನ್ನೆ ನಾನೇ ತಿಳಿಸಿದೆ ಅದಕ್ಕೆ ಅವರು ಯಾವ ರೀತಿ ಯಿಂದಲೂ ಕಿವಿಗೊಡಲಿಲ್ಲ "

" ಅವನು ಅಲ್ಲಿ ಏನು ದಂಧೆ ಮಾಡುತ್ತಾ ಇದ್ದಾನೆ? "

" ಏನು ಮಾಡುತ್ತಿದ್ದ ಎನ್ನುವುದು ನನಗೂ ಗೊತ್ತಿರಲಿಲ್ಲ 'ನಾನು ಹುಟ್ಟುವಾಗ ಏನೂ ತರಲಿಲ್ಲ ಸಾಯುವಾಗ ಒಯ್ಯುವ ಸಂಪತ್ತು ಅಷ್ಟ ರಲ್ಲೇ ಇದೆ ನನಗೆ ಯಾವ ಚಿಂತೆಯೂ ಇಲ್ಲ ಯಾವ ಹೆದರಿಕೆಯೂ ಇಲ್ಲ, ಎಲ್ಲರಿಗೆ ಜೀವದ ಆಸೆ ಬಹಳ ಇರುತ್ತದಂತೆ ಆದರೆ ನನಗೆ ಜೀವದ ಆಸೆ ಎಳ್ಳಷ್ಟೂ ಇಲ್ಲ ಮನುಷ್ಯ ಯಾವಾಗ ಹುಟ್ಟಿದನೋ ಆಗಲೇ ಸತ್ತಂತೆ' ಎಂದು ತನ್ನ ತತ್ವಜ್ಞಾನವನ್ನೇ ಹೇಳುತ್ತಿದ್ದ "

" ಹೇಳಿಯಾನು ! ಹೇಳದೆ ಏನು ಬಿಟ್ಟಾನೇ ? ಅವನಿಗೇನು ? ಹೆಣ್ಣು ಹೆತ್ತವರು ನಾವು " ಎಂದು ಸಾವಿತ್ರಿ ಅಳಿಯನ ಮೇಲೆ ಕೊಂಚ ಸಿಟ್ಟಿಗೆದ್ದಳು

" ಆಮೇಲೆ ಒಮ್ಮೆ ನಾನು ಪರ್ವತೀ ಗುಡ್ಡದತ್ತ ತಿರುಗಾಡಲು ಹೋದಾಗ ದಾರಿಯಲ್ಲಿ ಒಂದು ಹೊಟೇಲಿಗೆ ಚಹಾ ಕುಡಿಯಲು ಹೋದೆ. ಆಗ ಆ ಅಂಗಡಿಯಲ್ಲಿ ಶಿವರಾಯ ಕೆಲಸ ಮಾಡುತ್ತಿರುವುದನ್ನೂ ನೋಡಿದೆ. ಅವನು ಮಾತ್ರ ನನ್ನನ್ನು ನೋಡಲಿಲ್ಲ ಕೆಲವು ದಿವಸಗಳು ದಾಟಿದಮೇಲೆ ಪುನಃ ಅವನನ್ನು ಕೇಳಿದೆ ' ನೀನು ಏನು ಕೆಲಸ ಮಾಡುತ್ತಿ ? ' ಎಂದು. ಆದರೂ ಅವನು ನಾನು ಕೇಳಿದ ಪ್ರಶ್ನೆಗೆ ಉತ್ತರ ಕೊಡಲಿಲ್ಲ ಏನೇನೋ ಮಾತಾಡಿದ ಅದಕ್ಕೆ ನಾನೇ ಕೇಳಿದೆ ' ನೀನು ಆ ಹೋಟೇಲಿನಲ್ಲಿ ಇದ್ದಿ ಹೌದೋ ಅಲ್ಲವೋ ? ' ಎಂದು ಆಗ ಅವನಿಗೆ ಏನು ಅನಿಸಿತೋ ತಿಳಿಯೆ ' ನೀನು ಈ ಸಂಗತಿ ನಮ್ಮ ಅಣ್ಣನಿಗೆ ತಿಳಿಸಬೇಡ ' ಎಂದು ಹೇಳಿದ ' ಹೂಂ ' ಎಂದು ನಾನೂ ಅಂದೆ ಆದರೆ ಮುಂದೆ ಎಂಟು ದಿವಸಕ್ಕೆ ನಾನು ಅದೇ ಹೋಟೇಲಿಗೆ ಹೋದಾಗ ಅಲ್ಲಿ ಶಿವರಾಯ ಇರಲಿಲ್ಲ ಅಂದಿನಿಂದ ಸುಮಾರು ಒಂದು ವರುಷದಲಾಗಾಯ್ತು ಅವನದೂ ನನ್ನದು ಭೇಟಿಯಾಗ ಲಿಲ್ಲ ಅರ್ಥಾತ್ ಅವನು ಎಲ್ಲಿ ಯಾವ ಅಂಗಡಿಯಲ್ಲಿ ಇದ್ದಾನೆಂಬುದು ನನಗೆ ತಿಳಿಯಲಿಲ್ಲ. ಆದರೆ ಪುಣೆಯಲ್ಲೇ ಇದ್ದಾನೆಂಬದು ಮಾತ್ರಖಂಡಿತ

ಯಾಕೆಂದರೆ ಇಂದಿಗೆ ಎಂಟು ದಿನಗಳಹಿಂದೆ ಅವನು ನನಗೆ ಅಲ್ಲಿ ಸಿಕ್ಕಿದ್ದ" ಎಂದು ಶಿವರಾಯನ ಪತ್ನಿಯನ್ನು ಶಂಕರ ಹೇಳಿದ ಈ ಕಥೆಯನ್ನು ಸುಮತಿಯೂ ಕೇಳುತ್ತಿದ್ದಳು ಆಕೆ ಇದನ್ನೆಲ್ಲ ಕೇಳುತ್ತಿದ್ದಾಳೆಂಬುದನ್ನು ತಿಳದ ಶಂಕರ ಶಿವರಾಯನ ಬಣ್ಣನೆಯನ್ನು ಸಂಪೂರ್ಣವಾಗಿ ಮಾಡಲಿಲ್ಲ ಅವನ ಎಲ್ಲ ಸುದ್ದಿಗಳನ್ನೂ ಹೇಳಲಿಲ್ಲ ಯಾವುದನ್ನು ಹೇಳಬೇಕೋ ಅಷ್ಟನ್ನೇ ಹೇಳಿದ

ಅಳಿಯನ ಸುದ್ದಿಗೆ ಅಷ್ಟಕ್ಕೇ ವಿರಾಮವನ್ನು ಕೊಟ್ಟು ಸಾವಿತ್ರಿ ಶಂಕರನ ವಿಷಯ ಇನ್ನೂ ಹೆಚ್ಚು ತಿಳಿಯಲು ತವಕಿಸಿದಳು ಶಂಕರ ಕೈಗೆ ವಾಚು ಕಟ್ಟಿಕೊಂಡಿದ್ದ ವಾಚಿನ ಚೈನು (chain) ಸಾವಿತ್ರಿಯ ಕಣ್ಣಿಗೆ ಬಂಗಾರದ ಸರಪಳಿಯಾಗಿ ಕಂಡಿತು ಅವನ ಮೂರು ಬೆರಳುಗಳಲ್ಲಿ ಉಂಗುರಗಳು ಲಕಲಕನೆ ಹೊಳೆಯುತ್ತಿದ್ದವು ಕುತ್ತಿಗೆಯಂತು ಒಂದು ಬಂಗಾರದ ಸರದಿಂದ ಅಲಂಕೃತವಾದದ್ದನ್ನು ಸಾವಿತ್ರಿ ಮೊದಲೇ ನೋಡಿದ್ದಳು ಅಲ್ಲದೆ ಅವನು ಬಂದು ಹೊಕ್ಕೊಡನೆ ಅವರ ಮನೆಯ ಚಾವಡಿಯ ವಾತಾವರಣವೆಲ್ಲ ಸುಗಂಧ ಮಯವಾಗಿತ್ತು ಚಾವಡಿಯ ತುಂಬೆಲ್ಲ ಗಮಗಮ ಪರಿಮಳ ಎದ್ದಿತ್ತು ಅವನ ಹತ್ತಿರ ಹೋದೊಡನೆ ಆ ಸೌರಭದ ಸುವಾಸನೆ ಇನ್ನೂ ಅಧಿಕವಾಗುತ್ತಿತ್ತು ಸಾವಿತ್ರಿಗೆ ಈ ಎಲ್ಲ ಸಂಭ್ರಮವನ್ನು ನೋಡಿ ಹಿಗ್ಗುಂಟಾಯಿತು ತನ್ನ ಮಕ್ಕಳೂ ಗಟ್ಟಿದಿಂದ ಬರುತ್ತಾರೆ ಆದರೆ ಅವರು ಬಂದಾಗ ಇಂಥ ಸೌರಭ ಮನೆಯಲ್ಲಿ ಸೂಸುತ್ತಿರಲಿಲ್ಲ ಅಲ್ಲದೆ ಅವರ ಮೈಮೇಲೆ ಶಂಕರ ತೊಟ್ಟುಕೊಂಡಂಥ ಆಭರಣಗಳನ್ನು ಆಕೆ ನೋಡಿರಲಿಲ್ಲ ಕಾರಣ ಈಗ ಅವಳ ಮನಸ್ಸಿನಲ್ಲಿ ಹಲವಾರು ವಿಚಾರಗಳು ಬಂದವು ಅವುಗಳಲ್ಲಿ ಒಂದು ಮಾತ್ರ ಮುಖ್ಯವಾದದ್ದು ಅದು ಅವಳ ಮೂರ್ಖತನವೆಂದೇ ಅವಳು ನಿರ್ಧರಿಸಿಯೂ ಆಯಿತು ಅದಕ್ಕಾಗಿ ಸಾಕಷ್ಟು ವ್ಯಥೆ ಪಟ್ಟಿದ್ದೂ ಆಯಿತು ಅದೆಂದರೆ—ಶಂಕರನಿಗೆ ಸುಮತಿಯನ್ನು ಮದುವೆ ಮಾಡಿ ಕೊಡಬೇಕೆಂಬುದು ಸಾವಿತ್ರಿಯ ಆಶಯವಿತ್ತು ಆದರೆ ಆವಳ ಹಂಬಲಕ್ಕೆ ಮಣ್ಣು ಹಾಕಿದವರು—ಹೊನ್ನಪ್ಪಯ್ಯ ಶಂಕರನಂಥ ಬಡವನಿಗೆ ಮಗಳನ್ನು ಕೊಡುವುದು ತಮ್ಮ ಘನಸ್ಥಿತಿಕೆಗೆ ಕುಂದುತರುವ ಮಾತು ಎಂದು ಹೊನ್ನಪ್ಪಯ್ಯ ತಿಳಿದಿದ್ದರಷ್ಟೆ ಆದರೆ ಈಗ ಶಂಕರನನ್ನು ಅವರು ನೋಡಿರಲಿಲ್ಲ, ಇಂದು ಅವನನ್ನು ಅವರು

ನೋಡಿದ್ದರೆ ಮನಸ್ಸಿನಲ್ಲಾದರೂ ಸಾವಿತ್ರಿಯಂತೆ ಪಶ್ಚಾತ್ತಾಪ ಪಡದೆ ಬಿಡುತ್ತಿದ್ದಿಲ್ಲ "ಇವನಿಗೆ ಸುಮತಿಯನ್ನು ಕೊಟ್ಟಿದ್ದರೆ ಇವನೇ ನಮ್ಮ ಅಳಿಯನಾಗುತ್ತಿದ್ದನಲ್ಲ ! ಇವನ ಮೈಮೇಲಿನ ಒಡವೆಗಳೆಲ್ಲ ತನ್ನ ಮಗಳ ಪಾಲಿಗೆ ಬರುತ್ತಿದ್ದವು ಥೂ ಒಡವೆಗಳು ಯಾವ ಮಣ್ಣಿಗೆ ಹುಡುಗನ ಗುಣ ಹೇಗಿದೆ ? ಇಂಥ ಸುಗುಣಿ ಸುಂದರ, ಸುದೃಢ ಹುಡುಗನನ್ನು ಬಿಟ್ಟು ಅಂಥ ಬೀದಿ ಭಿಕಾರಿಗೆ ಹೆಣ್ಣು ಕೊಟ್ಟೆವಲ್ಲ" ಎಂದು ಸಾವಿತ್ರಿಯು ಮನಸ್ಸಿನಲ್ಲೇ ಮಾತಾಡಿಕೊಂಡಳು ಹೀಗೆ ಅವಳು ಎಷ್ಟು ಚಿಂತಿಸಿದರೂ ಕೊನೆ ಇಲ್ಲ ಅದೆಲ್ಲ ಮಿಂಚಿ ಹೋದ ಕಾರ್ಯವೆಂಬುದೂ ಅವಳಿಗೆ ಗೊತ್ತಿಲ್ಲವೇ ?

"ನೀನು ಪುಣೆಯಲ್ಲಿ ಏನು ಕಲಸ ಮಾಡಿಕೊಂಡು ಇದ್ದಿ ?" ಎಂದು ಮೊದಲನೆಯ ಪ್ರಶ್ನೆ ಕೇಳಿದಳು ಸಾವಿತ್ರಿ

"ನಾನು ಮಾಡುವುದು ದೊಡ್ಡ ನೌಕರಿ ಏನೂ ಅಲ್ಲ ಆದರೂ ಅದರಿಂದ ನನಗೆ ಬೇಕಾದಷ್ಟು ದುಡ್ಡು ಸಿಗುತ್ತದೆ, ಸಿಕ್ಕಿತು ನಾನು ಪ್ರಯತ್ನಪಟ್ಟಿದ್ದರೆ ಇನ್ನೂ ಹೆಚ್ಚು ಹಣಗಳಿಸಬಹುದಿತ್ತು ಆದರೆ ನಾನು ಹಾಗೆ ನಾಲಗ ಉದ್ದ ಮಾಡಲಿಲ್ಲ. ಅವರು ಮನಸ್ಸು ಮಾಡಿ ಕೊಟ್ಟದ್ದನ್ನು ಬೇಡವೆಂದು ನಿರಾಕರಿಸುವ ಬಿಂಕ ನನಗೆ ಬರಲಿಲ್ಲ ಶ್ರೀಮಂತರ ಮನಸ್ಸಿಗೆ ತೃಪ್ತಿಯಾದರೆ ಸಾಮಾನ್ಯವಾಗಿ ಅವರು ತೃಪ್ತಿಪಡಿಸಿದವರನ್ನು ಹಣದಿಂದಲೇ ಪ್ರಫುಲ್ಲರನ್ನಾಗಿ ಮಾಡುತ್ತಾರೆ ನನ್ನನ್ನೂ ಕೆಲವರು ಅದೇ ರೀತಿಯಲ್ಲಿ ಸನ್ಮಾನಿಸಿದರು ಒಬ್ಬವನು ತನ್ನ ಮಗಳಿಗೆ ಸಂಗೀತ ಕಲಿಸಿದ್ದಕ್ಕೆ ಬಂಗಾರದ ವಾಚ್, ಚೈನ ಸಮೇತ 'ಇನಾಮ್' ಕೊಟ್ಟ ಹೀಗೆ ನನ್ನ ಸಂಗೀತ ಕಲೆಗೆ ಹಲವರು ಸಂಭಾವನೆಯನ್ನು ತೆತ್ತು ನನ್ನ ಬೊಕ್ಕಸವನ್ನು ಉಬ್ಬಿಸಿದರು ಹಲವಾರು ಊರುಗಳನ್ನು ತಿರುಗಿದರೂ ನನ್ನಲ್ಲಿ ಹಣ ಉಳಿಯತೊಡಗಿತು ಉತ್ತರ ಹಿಂದುಸ್ಥಾನದಲ್ಲಿ ನಾನು ಬಹಳ ವರುಷ ಕಳೆದೆ ಅಲ್ಲಿಯ ಜನ ಬಹಳ ಶ್ರೀಮಂತರು ಅಂತೇ ತಮ್ಮನ್ನ ತೃಪ್ತಿಗೊಳಿಸಿದವರನ್ನು ಬರಿಗೈಯಿಂದ ಕಳುಹಿಸುವವರಲ್ಲ—ಪುಣೆಯಂತ ಹಾಗೆಂದು ಪುಣೆಯಲ್ಲಿ ನಾನು ಬಹಳ ವರ್ಷ ಇರಲಿಲ್ಲ ಒಟ್ಟಿನಲ್ಲಿ ಈಗಿನ ಕಾಲದಲ್ಲಿ ದುಡ್ಡು ಮಾಡಿದವನೇ ದೊಡ್ಡಪ್ಪ" ಎಂದು ಏನೋ ಹೇಳಿ ತಾನು ಮಾಡುವ ನೌಕರಿಯ ಹಸರನ್ನು ಸಾವಿತ್ರಿಗೆ ಹೇಳಲೇ ಇಲ್ಲ

" ಪುಣೆಯಲ್ಲಿ ನೀನು ಮರಾಠಿ ಭಾಷೆ ಮಾತಾಡಲು ಹೇಗೆ ಕಲಿತಿ ? ನಮಗೆಲ್ಲ ಅದು ಬರುವುದು ಕಷ್ಟವಂತೆ ಅದು ನಮ್ಮ ಈ ಕೊಂಕಣಿ ಭಾಷೆಯ ಹಾಗೇ ಇದೆಯಂತೆ ಆದರೂ ನಮಗೆ ಅದನ್ನು ಕಲಿಯಲಿಕ್ಕೆ ಬರುವುದಿಲ್ಲವಂತೆ "

" ಏನು ಹೇಳುತ್ತೀರಿ ಅಮ್ಮಾ ನೀವು ? ಅವರ ಮರಾಠಿ ನಮ್ಮ ಊರಿನ ಕೊಂಕಣಿ ಭಾಷೆಗಿಂತ ಸುಲಭ ಆದರೆ ನಾನು ಮಾತ್ರ ಪುಣೆಯಲ್ಲಿ ಇದ್ದರೂ ಕನ್ನಡ ಮಾತಾಡುತ್ತಿದ್ದೆ ಅಲ್ಲಿಯಾದರೂ ಬೇಕಾದಷ್ಟು ಜನ ಕನ್ನಡ ಬರುವವರು ಇದ್ದಾರೆ ನಮ್ಮ ಬಾಣಂಗಡಿಯ ಶಿವರಾಯನ ಅಣ್ಣನೇ ಇದ್ದಾನಲ್ಲ ಅವನಿಗೆ ಮರಾಠಿಯೇ ಮನೆಮಾತು ಅವನು ಇಲ್ಲಿ ಕನ್ನಡ ದಲ್ಲೇ ಹುಟ್ಟಿ ಬೆಳೆದವನು ಬಹುಶಃ ಆ ಮರಾಠಿ ದೇಶದಲ್ಲೇ ಸಾಯುತ್ತಾನೆಂದು ಕಾಣುತ್ತದೆ ಅದೆಲ್ಲ ಬೇಡ ಈಗ ಅವನಿಗೆ ಬಹಳ ಸೊಕ್ಕು ನನ್ನೊಡನೆ ಕೂಡಾ ಮರಾಠಿ ಮಾತಾಡಲಿಕ್ಕೆ ಪ್ರಾರಂಭಿಸುತ್ತಿದ್ದ ನಾನು ಅವನಿಗೆ ಅದಕ್ಕಾಗಿ ಎಷ್ಟೋ ಹೇಳಿಕೊಂಡು ನೋಡಿದೆ ಆದರೂ ಅವನು ಕೇಳಲಿಲ್ಲ ತನ್ನ ಮಕ್ಕಳನ್ನು ಕೂಡಾ 'ಮರಾಠಿ' ಮಾಡಿ ಮರಾಠಿ ಸಾಲೆಗೆ ಓಡಿಸಿದ್ದಾನೆ ಅವನಂಥ ಕದೀಮ ಈ ಜಗತ್ತಿನಲ್ಲೇ ಇಲ್ಲ ಅವನ ಬೂಟಿಗೆ ನಾನೇನು ಕಿವಿಗೊಡುತ್ತಿರಲಿಲ್ಲ ಅವನು ಮರಾಠಿ ಮಾತಾಡಿದರೆ ನಾನು ತುಟಿ ಬಿಚುತ್ತಿರಲಿಲ್ಲ ಅದಕ್ಕಾಗಿ ಅರ್ಧಮರ್ದ ಕನ್ನಡ ಮಾತಾಡುತ್ತಿದ್ದ ಅವನ ' ನಸೀಬ ಚಾಂಗ್ಲ ' ಇದ್ದುದರಿಂದ ಅವನಿಗೆ ಅಲ್ಲಿ ಹೋಗಿ ಶ್ರೀಮಂತನಾಗುವ ಯೋಗ ಬಂತಂತೆ ಮತ್ತೆ ಅವನೊಂದು ಅಡ್ಡ ಹೆಸರು ಹಾಕಿಕೊಂಡಿದ್ದಾನೆ. ' ಬಿ. ಎಸ್ ಬಾಣಂಗಡಿ ' ಅಂತೆ ! " ಎಂದು ಶಂಕರ ಸ್ವಲ್ಪ ಮಾತಿನ ದಾರಿಯನ್ನು ಬಿಟ್ಟು ಮಾತಾಡಿದ

ಅವನಿಗೆ ಆ ಪುಣೆಯ ಬಿ ಎಸ್ ಬಾಣಂಗಡಿಯವರ ಮೇಲೆ ಇನ್ನೂ ಕೋಪ ಸಮಾಧಾನವಾಗಿಲ್ಲ ಅವರೇ ಇವನನ್ನು ಪುಣೆಯಿಂದ ಓಡಿಸಿದವರು ಇವನಾದರೂ ಆ ಪುಣೆಗೆ ಕಾಲು ಹಾಕುವುದಿಲ್ಲ ಇನ್ನೊಮ್ಮೆ—ಎಂದು ಪಣ ತೊಟ್ಟೇ ಬಂದಿದ್ದಾನೆ ಅವರು ಪಕ್ಕಾ ಮರಾಠಿ ಮಾತಾಡುತ್ತಿದ್ದರು ಅವರು ಹುಟ್ಟಿ ಬೆಳೆದದ್ದು ಕನ್ನಡದ ಬಾಣಂಗಡಿಯಲ್ಲಿ ಆದರೆ ಘನತೆಗೇರಿದ್ದು ಅಲ್ಲಿ ಅದಕ್ಕಾಗಿ ಕನ್ನಡವನ್ನು ಕೀಳುಗಳೆಯಲು ಅವರು ಹೆದರುತ್ತಿದ್ದಿಲ್ಲ ಇದನ್ನೆಲ್ಲ

ನೋಡಿ ಶಂಕರನಿಗೆ ತಡೆಯಲಿಲ್ಲ ಎಷ್ಟೆಂದರೂ ಶಂಕರ ಕನ್ನಡದ ಕಟ್ಟಾಭಿಮಾನಿ ಅವನು ಕೇಳಿಯಾನೇ? ಕನ್ನಡದಲ್ಲಿ ಹುಟ್ಟಿ ಬೆಳೆದವರು ಕನ್ನಡವನ್ನು ತ್ಯೆಗಳೆದರೆ, ಕನ್ನಡಿಗರಲ್ಲದವರು ಎಷ್ಟು ದೂಷಿಸಬಹುದು? ಎಂದು ಶಂಕರ ವಿಚಾರಿಸಿ ಅವರೊಡನೆ ವಾಗ್ವಾದಕ್ಕೂ ನಿಂತಿದ್ದ ಅದಕ್ಕಾಗಿಯೇ ಆತ ಅವರೊಡನೆ ಜಗಳಾಡಬೇಕಾಯಿತು

ಅಷ್ಟಕ್ಕೇ ಅವರ ಮಾತುಗಳು ನಿಂತವು ಅಲ್ಲಿಗೆ ಆಗ ಕೋಟಿ ಟ್ರಂಕು ಹೊತ್ತುಕೊಂಡು ಬಂದನು ಬಂದವನೇ, "ಇದರಲ್ಲಿ ಬರೇ ಬಂಗಾರದ ಗುಡ್ಡವೇ ಇದೆಯೆಂದು ಕಾಣುತ್ತದೆ! ಅಬ್ಬಾ ದೇವರೇ ಇದರ ಭಾರವೋ! ದೊಡ್ಡ ಗುಂಡು ಕಲ್ಲು ಎತ್ತಿದ ಹಾಗೆ ಆಗುತ್ತದೆ" ಎಂದು ಪ್ರಲಾಪಿಸುತ್ತ ಪೆಟ್ಟಿಗೆಯನ್ನು ತಲೆಯಿಂದ ಇಳಿಸಿದ ಆಗ ಅವನಿಗೆ ಒಂದು ವೀಳ್ಯದೆಲೆ ತಿನ್ನಲಿಕ್ಕೆ ಕೊಟ್ಟು ಸಾವಿತ್ರಿ ಅವನನ್ನು ಕಳುಹಿಸಿದಳು ಶಂಕರ ಮೆಲ್ಲನೆ ಎದ್ದು ಆ ಪೆಟ್ಟಿಗೆಯ ಬಾಗಿಲನ್ನು ತೆಗೆದು, ಅದರೊಳಗೆ ಇದ್ದ ಒಂದು ಮಿಠಾಯಿಯ ಪೊಟ್ಟಣವನ್ನು ಸಾವಿತ್ರಿಯ ಕೈಗೆ ಕೊಟ್ಟ "ಇದೇಕೆ ನಮಗೆ? ನಿನ್ನ ಅಮ್ಮ ಇನ್ನೂ ಬರಲಿಲ್ಲ ಅವಳು ಬಂದೊಡನೆ ಎಲ್ಲರಿಗೂ ಕೊಡುವಂತೆ" ಎಂದು ಸಾವಿತ್ರಿ ಕೊಂಚ ಸಂಕೋಚಪಟ್ಟಳು ಆದರೆ ಶಂಕರನ ಆಗ್ರಹಕ್ಕೆ ಆಕೆ ಅದನ್ನು ಪಡೆದುಕೊಳ್ಳಲೇ ಬೇಕಾಯಿತು ಅವನು ಪೆಟ್ಟಿಗೆಯ ಬಾಗಿಲು ತೆರೆದಾಗ ಅಲ್ಲಿಗೆ ಸುಮತಿಯೂ ಬಂದು ಇಣಿಕಿದಳು ಅವಳನ್ನು ಕಂಡು ಶಂಕರ "ನಿನಗೇನುಬೇಕು?" ಎಂದು ನಗುತ್ತ ಕೇಳಿದ

"ನನಗೆ ಬೇಕಾದ್ದು ಅದರಲ್ಲಿ ಇದೆಯೇ?" ಎಂದಳು ಸುಮತಿ ಅದಕ್ಕೆ ಶಂಕರ ಒಂದು ಡಬ್ಬಿಯನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು "ಇಕೋ!" ಎಂದನು ಅದನ್ನು ತೆಗೆದುಕೊಳ್ಳಬೇಕೋ ಬಿಡಬೇಕೋ ಎಂಬುದು ಸುಮತಿಗೆ ತಿಳಿಯಲಿಲ್ಲ ಅವಳು ಸುಮ್ಮನೆ ತಾಯಿಯತ್ತ ನೋಡತೊಡಗಿದಳು ಆಗ ಸಾವಿತ್ರಿ "ತೆಗೆದುಕೋ, ನಿನಗೇನು? ಅವನು ಕೊಟ್ಟರೆ ನಾವು ಯಾಕೆ ಬಿಡಬೇಕು? ಅವನ ತಾಯಿ ಬಂದು ಅವನಿಗೇ ಬೈಯುತ್ತಾರೆ, ನಮಗೇನು?" ಎಂದು ಅನ್ನುವಾಗ ಸುಮತಿ ಅವನ ಕೈಯಿಂದ ಆ ಪೆಟ್ಟಿಗೆಯನ್ನು ಸ್ವೀಕರಿಸಿದಳು ಅವಳ ಹೃದಯ ಆನಂದದಿಂದ

ತುಳುಕಾಡಿತು "ಹಾ! ಇಂಥ ಪತಿಯನ್ನು ಪಡೆಯುವ ನನ್ನ ಯೋಗ ಹೋಯಿತಲ್ಲ" ಎಂದಾಕೆ ಮನಸ್ಸಿನಲ್ಲೇ ಮರುಗಿದಳು ಅದರಲ್ಲಿ ಏನಿದೆ ಯೆಂದು ನೋಡುವ ತನಕ ಅವಳಿಗೆ ಅಲ್ಲಿ ನಿಲ್ಲಲು ಸಾಧ್ಯವಾಗಲಿಲ್ಲ ಅಲ್ಲಿಂದ ಕೂಡಲೇ ಒಳಗೆ ಓಡಿದಳು ಅದನ್ನು ತೆರೆದು ಅದರೊಳಗೆ ಇರುವ ಕುಂಕುಮ ಡಬ್ಬಿ, ಹಸಿರು ಬಳೆ—ಮೊದಲಾದ ಮಂಗಲಕಾರಕ ವಸ್ತುಗಳನ್ನು ನೋಡಿ ಅವಳ ಸಂತಸಕ್ಕೆ ಮೇರೆಯೇ ಇಲ್ಲದಂತಾಯಿತು ಹೊಸ ಹೊಸ ಮಾದರಿಯ ಗಟ್ಟದ ಮೇಲಿನ ಆ ವಸ್ತು ವಿಶೇಷಗಳನ್ನು ಎಷ್ಟು ನೋಡಿದರೂ ಅವಳ ಕಣ್ಣಿಗೆ ತೃಪ್ತಿ ಸಿಗಲಿಲ್ಲ ಅವುಗಳನ್ನು ಪುನಃ ಪುನಃ ನೋಡತೊಡಗಿ ದಳು ನೋಡಿದ್ದನ್ನೇ ಮತ್ತೆ ಈಕ್ಷಿಸತೊಡಗಿದಳು. ಆ ಪನ್ನೀರದಾನಿ ಯನ್ನು ಮಾತ್ರ ತನ್ನ ಮುಖದ ವರೆಗೆ ತಂದು ಅದನ್ನು ಮುದ್ದಿಸುವ ಸಾಹ ಸಕ್ಕೂ ಅವಳು ಈಡಾದಳು ಆ ಪನ್ನೀರದಾನಿಯಲ್ಲಿ ಅವಳ ಕಣ್ಣಿಗೆ ಶಂಕರನ ಮೂರ್ತಿ ಕಾಣಿಸಿತು! ಅವಳ ಕಣ್ಣುಗಳಿಗೆ ಅದಕ್ಕಾಗಿ ಆಕೆ ಶಪಿಸಿಯೂ ಆಯಿತು ಎಷ್ಟೋ ಹೊತ್ತು ಶಂಕರ ಕೊಟ್ಟ ವಸ್ತುಗಳನ್ನೆಲ್ಲ ನೋಡುತ್ತ ನಿಂತಳು ಅವುಗಳಲ್ಲೆಲ್ಲ ಆವಳಿಗೆ ಅವನ ಮೂರ್ತಿಸ್ವರೂಪವೇ ಎದ್ದು ಕಾಣುತ್ತ ಇತ್ತು ಕೊನೆಗೆ ಅವುಗಳನ್ನು ಒಯ್ದು ಭದ್ರವಾಗಿ ತನ್ನ ಪೆಟ್ಟಿಗೆ ಯಲ್ಲಿ ಇಟ್ಟಳು

ಇನ್ನೂ ಕತ್ತಲಾಗಿರಲಿಲ್ಲ ಆಗ ಶಂಕರ ಪೇಟೆಯತ್ತ ಹೋಗುತ್ತೇ ನೆಂದು ಹೊರಡಲು ಅನುವಾದ ಆದರೆ ಸಾವಿತ್ರಿ "ಪೇಟೆ ಎಲ್ಲಿಗೆ ಹೋಗು ತ್ತದೆ? ಪ್ರಯಾಣದ ಆಯಾಸ ಕಳೆದುಕೋ ಸುಮ್ಮನೇ ವಿಶ್ರಾಂತಿ ತೆಗೆ ದುಕೋ ಇದು ನಿನ್ನ ಮನೆಯೆಂದೇ ಭಾವಿಸು ನಿನ್ನ ಅಮ್ಮ ಇವತ್ತು ಬಂದಾರು" ಎಂದು ಹೇಳಿದ್ದಕ್ಕೆ ಆತ ಅಲ್ಲಿಯೇ ಉಳಿಯಬೇಕಾಯಿತು ಮತ್ತು "ನನಗೆ ಚಿಕ್ಕಂದಿನಿಂದಲೂ ಈ ಮನೆಯಾಗಿತ್ತು ಇಲ್ಲಿಯೇ ನಾನು ಇರುತ್ತಿದ್ದೆ ನಮ್ಮ ಅಮ್ಮನಿಗಿಂತ ನಿಮ್ಮ ಮೇಲೇ ನನಗೆ ಹೆಚ್ಚು ಪ್ರೀತಿ" ಎಂದು ಹೇಳಿದ ಆಗ ಸಾವಿತ್ರಿಗೂ ಅವನ ಬಾಲ್ಯದ ನೆನಪು ಬಂತು ಆಕೆಯೇ ಅವನನ್ನು ತಾಯಿಗಿಂತ ಹೆಚ್ಚಿನ ಪ್ರೀತಿಯಿಂದ ಸಾಕಿದ್ದ ದಿನಗಳೂ ಅವಳ ಕಣ್ಣ ಮುಂದೆ ನಿಂತವು ದಿನದ ಮುಕ್ಕಾಲು ಪಾಲು ಸಮಯವನ್ನು

ಆತ ತನ್ನ ಮಗಳು–ಸುಮತಿಯ ಸಂಗಡ ಆಡುತ್ತ ಕಳೆದ ಸುದಿನಗಳನ್ನೂ ಸಾವಿತ್ರಿ ನೆನೆದುಕೊಂಡಳು

"ಹೌದು ಮಗೂ, ನೀನು ನನ್ನ ಮಗನಂತೆ ಇದ್ದೆ! ಆದರೆ ಅಂದಿನ ಆ ಕರುಳು ಇಂದು ನಿನ್ನಲ್ಲಿ ಉಳಿಯುತ್ತದೋ ಇಲ್ಲವೋ ಎಂದು ಭಾವಿಸಿದ್ದೆ ಈಗ ನಿನ್ನ ಮಾತನ್ನು ಕೇಳಿ ನನಗೆ ತುಂಬ ಸಂತೋಷವಾಯಿತು ಹೌದು, ಸಣ್ಣವನಿರುವಾಗ ನಿನಗೆ ಕೊಟ್ಟ ಪ್ರೀತಿಯ ಋಣವನ್ನು ನೀನು ಈಗ ಒಂದೇ ಮಾತಿನಲ್ಲಿ ತೋರಿಸಿದಿ ಇರಲಿ ದೇವರೇ ಇದೇರೀತಿಯಲ್ಲಿ ನಿನ್ನ ದೃಷ್ಟಿ ಎಲ್ಲರ ಮೇಲೂ ಪ್ರೀತಿಯಿಂದ ಕೂಡಿರಲಿ ಹಿರಿಯರಿಗೆ ನಿಮ್ಮಂಥ ಕಿರಿಗೂಸುಗಳು ಯಾವಾಗಲೂ ಕೃತಘ್ನರಾಗಬಾರದು ನೀನು ನಾಲ್ಕಾರು ವರುಷಗಳ ಕಾಲ ಇಲ್ಲಿ ತಾಯಿಯನ್ನು ಬಿಟ್ಟು ಹೋದಾಗ ನನಗೆ ಯಾಕೋ ನಿನ್ನ ಮೇಲೆ ಅವಿಶ್ವಾಸ ಹುಟ್ಟಿತು ಆದರೆ ಇಂದು ನೀನು ಬಂದೆ ಯಲ್ಲ! ನಮ್ಮೆಲ್ಲರ ನೆನಪು ನಿನಗೆ ಆಯಿತಲ್ಲ! ಅದೇ ದೊಡ್ಡದು ತಾಯಿ ಯಾದವಳನ್ನು ಬಿಟ್ಟು ಬಹಳ ದಿನ ದೂರ ಇರಬಾರದು ಮಗೂ ನಿನ್ನ ಅಮ್ಮ ಬಂದು ನಿನ್ನನ್ನು ಪ್ರೀತಿಯಿಂದ ತಿನ್ನದಿದ್ದರೆ ನಮ್ಮ ಭಾಗ್ಯ ಎನ್ನಬೇಕು!" ಎಂದು ಸಹಜವಾದ ವಾಣಿಯಿಂದ ಸಾವಿತ್ರಿ ಹೇಳುತ್ತ ಅವನ ಮೈ ಸವರಿ ಆನಂದ ಪಟ್ಟಳು

ಈ ದೃಶ್ಯವನ್ನು ಸುಮತಿಯು ನೋಡಿ, ತಾನೂ ಅವನನ್ನು ಹೋಗಿ ಮುಟ್ಟಿ ಬರಲೇ ಎಂದು ಎಣಿಸಿಕೊಂಡಳು ಆದರೆ ಅವಳ ಮನಸ್ಸಿನ ಆಳ ದಿಂದ ಯಾವುದೋ ಒಂದು ಅವ್ಯಕ್ತ ಶಕ್ತಿ ಬಂದು ಅವಳನ್ನು ಅದುಮಿ ಹಿಡಿ ಯಿತು ನಾಚಿಕೆ ಪಡುವಂತೆ ಮಾಡಿತು ಆಗ ಅವಳಿಗೆ ಹಿಂದಿನ ದಿನಗಳ ನೆನಪೂ ಮೂಡಿತು ಅಂದು . ಶಂಕರ ಹೇಗಿದ್ದ! ಅವನ ಮನಸ್ಸು ಎಷ್ಟು ಸರಳವಿತ್ತು ಇಂದೂ ಅದೇ ಮೈಕಟ್ಟು ಇಲ್ಲ! ಇಂದಿನ ಅವನ ದೇಹ ಮೋಹನದ ಮೂರ್ತಿಯಂತೆ ಕಂಡಿತು ಅವಳಿಗೆ ಕನಸಿನ ಕುವರನಂತೆಯೂ ಆತ ಅವಳಿಗೆ ಕಂಡ ಅವನನ್ನೇ ನೋಡಿದಳು ಅವನು ಇವಳ ದೃಷ್ಟಿಯನ್ನು ಗುರುತಿಸುವ ತನಕ ಅವನನ್ನೇ ನೋಡಿದಳು ಆದರೆ ಅವನು ಈಕೆಯ ದೃಷ್ಟಿಯು ತನ್ನತ್ತ ಬಿದ್ದಿರುವುದನ್ನು ನೋಡಿದಾಗ ಮುಗುಳು ನಗೆ ನಕ್ಕ ನಿಜ ಅವನ ಹೃದಯ ಮಾತ್ರ ಅವನನ್ನು ತಡೆಯುತ್ತಿತ್ತು

ಅಲ್ಲ, ಅವಳ ಬಾಳು ಹೇಗೆ ಸಾಗಿತು ಎಂಬುದಕ್ಕೆ ಅದು ಒಳಗಿಂದ ಕೊರಗು ತ್ತಿತ್ತು

ಶಿವರಾಯನ ಸ್ವಭಾವದ ಇತಿಶ್ರೀ ಎಲ್ಲವನ್ನೂ ಆತ ಪುಣೆಯಲ್ಲಿ ಕಂಡು ಬಂದಿದ್ದ " ಇಂಥ ಮುಗ್ಧೆಯ ಮುಖವನ್ನು ಬಿಟ್ಟು ಹೋದ ಅವನ ಕಠಿಣ ಹೃದಯ ಹೇಗಿದೆಯಪ್ಪಾ ! " ಎಂದು ಶಂಕರನ ಮನಸ್ಸು ಆಶ್ಚರ್ಯಪಟ್ಟಿತು ಅಷ್ಟೇ ಅಲ್ಲ ಅವಳೊಡನೆ ನಿರಾಭರಣನಾಗಿ ಬಾಲ್ಯದಲ್ಲಿ ಕಲ್ಲಾಟ ಆಡಿದ ದಿನ ಗಳು ಅಂದಿನ ಅವಳ ಮೈಯ ಸ್ಪರ್ಶ ಅಂದಿನ ಅವಳ ಮುಖದ ಬೆಡಗು ಅವಳ ಆದೊಂದು ಕಳಕೀರವಾಣಿ ಅಂಥ ಚೆಲುವಿನ ತಲೆ ಗೂದಲು ಎಲ್ಲವೂ ಅವನ ಚಿತ್ತಪಟಲದ ಮೇಲೆ ಪುನಃ ಜೀವ ತಾಳಿ ಕುಣಿದಾಡ ತೊಡಗಿದವು ಆದರೆ, ಅವೆಲ್ಲ ಕ್ಷಣದಲ್ಲೇ ಮಾಯವಾಗದೆ ಕೂಡಲಿಲ್ಲ

ಹೌದು, ಅಂದು ಅವರಿಬ್ಬರೂ ಸಣ್ಣವರಿರುವಾಗ ಏನೂ ಅರಿಯದ ಮುಗ್ಧರಾಗಿದ್ದರು ಆಗ ಅವರು ಏನು ಮಾಡಿದರೂ ಅದಕ್ಕೊಂದು ಚೆಂದ ವಿತ್ತು ಆ ಚಂದವನ್ನು ನೋಡುವವರೂ ಇದ್ದರು ಇಂದು ಹಾಗಲ್ಲ ಅವರಿಬ್ಬರ ಜೀವನ ಪುಷ್ಪ ಅರಳಿದೆ ಎರಡು ಹೂವಿನ ಮೊಗ್ಗೆಗಳು ಒಂದ ಕ್ಕೊಂದು ತಾಕಲಾಡುತ್ತ ಗಾಳಿಯಲ್ಲಿ ನೃತ್ಯ ಮಾಡಬಹುದು ಆದರೆ ಅವೇ ಎರಡು ಮುಕುಳಗಳು ವಿಕಾಸವಾದಾಗ ಅದೇ ಗಾಳಿ ಬೀಸಿ ಅವುಗಳನ್ನು ಒಂದುಕ್ಕೊಂದು ತಾಕಲಾಡುವಂತೆ ಮಾಡಿತೆಂದರೆ— ಆ ಎರಡೂ ಅರಳಿದ ಪುಷ್ಪಗಳ ಸೊಗಸು ನಾಶವಾದೀತಷ್ಟೆ ಇದೇ ತೆರನಾಗಿದೆ ಅವರಿಬ್ಬರ ಇಂದಿನ ಜೀವನ ಸುಮತಿಗೆ ಅವನೊಡನೆ ಮನವಾರೆ ಹರಟೆ ಹೊಡೆಯಬೇಕೆಂಬ ಆಸೆ ಆದರೆ ಸುತ್ತುಮುತ್ತಲಿನ ಕ್ಷೇತ್ರ ಅದಕ್ಕೆಲ್ಲ ಆಸ್ಪದ ಕೊಡುವಷ್ಟು ಉದಾರವಾಗಿರಲಿಲ್ಲ

ಶಂಕರನ ಮನೆ ಸುಮತಿಯ ಮನೆಯಿಂದ ಒಂದೇ ಫರ್ಲಾಂಗು ದೂರ ದಲ್ಲಿ ಇತ್ತು ಅವನ ಮನೆ ಈ ಮೂಡುಮನೆಗಿಂತ ಸ್ವಲ್ಪ ಎತ್ತರದಲ್ಲೇ ಇತ್ತು ಆ ಮನೆಯ ಸುತ್ತುಮುತ್ತಲಿನ ಹೊಲ, ಗಿಡ, ಮರ, ತೋಟಗಳೆಲ್ಲ ಅವರವೇ ಅವರ ಜೀವನಕ್ಕೆ ಸಾಕಾಗುವಷ್ಟು ಫಲ ಪೈರನ್ನು ಆ ಭೂಮಿ ಒದಗಿಸುತ್ತಿತ್ತು ಹಾಗೆಂದು ಅವರ ಮನೆಯಲ್ಲಿ ಲೆಕ್ಕವಿಲ್ಲದಷ್ಟು ಜನರಿದ್ದರು

ಎಂದಲ್ಲ ಶಂಕರನ ತಂದೆ, ಇವನು ತೀರ ಸಣ್ಣವನಿರುವಾಗಲೇ ಇಹಲೋಕ ಬಿಟ್ಟಿದ್ದರು ಆಮೇಲೆ ಅವನ ತಾಯಿ, ಸುಬ್ಬಮ್ಮ ಮನೆತನ ನಡೆಸುತ್ತ ಬಂದಳು ಶಂಕರ ಮತ್ತು ಕೋನಮ್ಮ ಎಂಬ ಇಬ್ಬರೇ ಮಕ್ಕಳು—ಸುಬ್ಬ ಮ್ಮಳಿಗೆ ಕೋನಮ್ಮ ಶಂಕರನಿಗಿಂತ ದೊಡ್ಡವಳು ಆವಳ ಮದುವೆಯಾಗಿ ಈಗ ಆರೇಳುವರುಷಗಳಾಗಿವೆ ಆವಳ ಲಗ್ನವಾಗುವ ಮೊದಲನೆಯ ವರುಷ ಶಂಕರ ತನ್ನೂರು ಬಿಟ್ಟುಹೋಗಿದ್ದ ಆ ಮೇಲೆ ಬಂದದ್ದು ಅಂದರೆ ಇದೇ ಮೊದಲ ಸಲ ಆತ ಬರುವಾಗಲೇ ಸುಬ್ಬಮ್ಮ ತನ್ನ ಮಗಳ ಮನೆಗೆ ಹೋಗಬೇಕೇ? ಆವಳು 'ಕೊಲ್ಲೂರು' ಬಿಟ್ಟು ಯಾವಾಗ ಬಂದಾಳು ಎಂಬುದನ್ನು ಈಗ ಶಂಕರ ಕಾಯುತ್ತಿದ್ದ ಆಗ ಅವನ ತಲೆಯಲ್ಲಿ ಬಾಲ್ಯ ಸ್ಮರಣೆಗಳು ಒಂದೊಂದಾಗಿ ತಿರುಗುತ್ತಿದ್ದವು

ಶಂಕರನ ಜೀವನ ಇಲ್ಲಿಯವರೆಗೆ ಅಸ್ಥಿರವಾಗಿತ್ತು ಆವನಿಗೀಗ ಇಪ್ಪತ್ತೇಳು ವಯಸ್ಸು ನಡೆಯುತ್ತಿದೆ ಕಾಲಾವಧಿಯಲ್ಲಿ ಅವನು ಸಾಧಿಸಿದ್ದು ತೀರ ಕಡಿಮೆ ಅವನ ಧ್ಯೇಯ ಧೋರಣೆಗಳು ಆಸೆ ಆಕಾಂಕ್ಷೆಗಳು ನೂರಾರು ಅವುಗಳಲ್ಲಿ ಒಂದನ್ನೂ ಆತ ಇಲ್ಲಿಯವರೆಗೆ ರೂಢಿಸಿಕೊಂಡು ಚೆನ್ನಾಗಿ ಕೈಗತ ಮಾಡಿಕೊಳ್ಳಲಿಲ್ಲ ಒಮ್ಮೆ ದೊಡ್ಡ ಗಾಯಕನಾಗಬೇಕೆಂದು ಯೋಚಿಸಿದ್ದ ಮತ್ತೊಮ್ಮೆ ಮಹಾಕವಿಯಾಗಬೇಕೆಂದು ಕನಸ್ಸು ಕಟ್ಟಿದ್ದ ಇನ್ನೊಮ್ಮೆ ಜಗದ್ವಂದ್ಯ ಚಿತ್ರಕಾರನಾಗುವೆನೆಂದೂ ಹಟತೊಟ್ಟಿದ್ದ ಆದರೆ ಇಷ್ಟರಲ್ಲೇ ಅವನ ಧ್ಯೇಯಗಳೆಲ್ಲ ಧೂಪವಾಗಿ ಹೋಗಿದ್ದವು. ಗಾಯನದ ಹುಚ್ಚೇ ಅವ ನನ್ನು ಪುಣೆಯವರೆಗೆ ಮುಟ್ಟಿಸಿತ್ತು.

ತನ್ನೂರಿಗೆ ಬಂದ 'ಸ್ವರಮೂರ್ತಿ' ಪದವಿಯ ಮಾನ್ಯತೆ ಪಡೆದ ಗೋಕುಲಕರುಣಯ್ಯಂಗಾರರ ಸಂಗಡ ಶಂಕರ ಮನೆಬಿಟ್ಟು ಹೋಗಿದ್ದನಷ್ಟೆ ಕಲಾವಿದರ ಜೀವನಕ್ಕೆ ಕಲೆಯಲ್ಲೇ ನೆಲೆ ಬಾಹ್ಯ ಪ್ರಪಂಚದಲ್ಲಿ ಅವರ ಬಾಳಿಗೆ ಬಡತನವೇ ಕೊಡುಗೆಯಾಗಿರುತ್ತದೆ ಅಂತೇ 'ಸ್ವರಮೂರ್ತಿ' ಅಯ್ಯಂಗಾರರ ಜೀವನವೂ ಅದಕ್ಕೊಂದು ಅಪವಾದವಾಗಿರಲಿಲ್ಲ ಅವರ ಗಳಿಕೆಗೂ ಅಷ್ಟರಲ್ಲೇ ಇತ್ತು ಅವರ ವಯಸ್ಸು ಮೀರಿತ್ತು ಅಂಥ ವೇಳೆ ಯಲ್ಲೇ ಅವರ ಬೆನ್ನಿಗೆ ಶಂಕರನೂ ಅಂಟಿದ್ದ ಅದರಂತೆ ಇವನೂ ಜೀವನ ಕಲೆಯನ್ನು ಕೆಲವುದಿನ ಬೆಳಗಿಸಿದ

ಮುಂದೆ ಸ್ವಲ್ಪ ದಿನಗಳಲ್ಲಿ ' ಸ್ವರಮೂರ್ತಿ ' ಯವರ ಸ್ವರ, ಮೂರ್ತಿಯನ್ನು ಬಿಟ್ಟು ದಿವ್ಯಸ್ವರದಲ್ಲಿ ಲೀನವಾಯಿತು ಅವರ ಕೀರ್ತಿ ಉಳಿಯಿತು- ಶಂಕರನಂಥ ಶಿಷ್ಯರ ಬಾಯಿಯಲ್ಲಿ ಶಂಕರನ ಟ್ರಂಕಿನಲ್ಲಿ ಅವರ ಒಂದು ಭಾವಚಿತ್ರವೂ ಇದೆ ಅದಕ್ಕೆ ಆತ ಮನಸ್ಸಿಗೆ ಬಂದಾಗೊಮ್ಮೆ ನಮಸ್ಕರಿಸುವುದುಂಟು ಪ್ರಿಯ ಗುರುಗಳ ಮರಣದ ತರುವಾಯ ಶಂಕರ ಗಾಯನವಿದ್ಯೆಯನ್ನು ರೂಢಿಸಲಿಲ್ಲ ಒಂದೆರಡು ತಿಂಗಳು ಚಿತ್ರಶಾಲೆಗೂ ಮುಖತೋರಿಸಿದ ಆದು ಅವನಿಗೆ ಸೇರಿದರೂ ಪುಣೆಯ ಚಿತ್ರವಿಶಾರದ ಗುರುಗಳಿಗೂ ಅವನಿಗೂ ಕೂಡಿ ಬರಲಿಲ್ಲ ಅಷ್ಟರಲ್ಲಿ ಅವನ ಕಿಸೆಯೂ ಬರಿದಾಯಿತು ಸರಿ, ಒಂದು ಹೋಟೇಲಿನಲ್ಲಿ ಕಾರಕೂನನ ನೌಕರಿಗೆ ಸೇರಿದ ಆದರೆ ಅಲ್ಲಿ ಅವನ ಆತ್ಮಕ್ಕೆ ಸುಖಸಿಗಲಿಲ್ಲ ಕೊನೆಗೊಮ್ಮೆ ಆ ನೌಕರಿಯನ್ನು ತೊರೆದು ಅಲ್ಲಿಯೇ ಒಂದು ಕನ್ನಡ ಸಾಲೆಯಲ್ಲಿ ಉಪಾಧ್ಯಾಯನಾದ ಸಾಲೆಯಲ್ಲಿ ವಿದ್ಯೆ ಕಲಿಸಿದರೆ ಮನೆಯಲ್ಲಿ ಸಂಗೀತವನ್ನೂ ಕಲಿಸುವ ಕಾರ್ಯಕ್ಕೆ ಕೈ ಹಾಕಿದ. ತಮ್ಮೂರಿನ ನಾಲ್ಕಾರು ಮನೆಗಳಲ್ಲಿ ಗಾಯನ ಕಲಿಸುವ ಕೆಲಸ ಪ್ರಾರಂಭಿಸಿ ಕೈತುಂಬ ಹಣಮಾಡಿದ ಆ ಹಣವನ್ನು ತನ್ನೂರಿನಲ್ಲಿ ವಿನಿಯೋಗಿಸುವ ಸುಬುದ್ಧಿಯಿಂದ ಊರಿಗೆ ಬಂದನೆನ್ನಬಹುದು ಊರಿಗೆ ಬಂದು ಏನೋ ಒಂದು ಆದರ್ಶ ಕೆಲಸವನ್ನು ಮಾಡಿ ತೋರಿಸಬೇಕೆಂಬ ನಿರ್ಧಾರವನ್ನು ಎಂದೋ ಮನಸ್ಸಿನಲ್ಲಿ ಇರಿಸಿದ್ದ ಒಟ್ಟಿನಲ್ಲಿ ಮನುಷ್ಯನಾಗಿ ಹುಟ್ಟಿದ್ದಕ್ಕೆ ತನ್ನ ಸುತ್ತುಮುತ್ತಲಿನವರಿಗೆ ಕೈಲಾದ ಮಟ್ಟಿಗೆ ಏನಾದರೂ ಸಹಾಯ ಮಾಡಬೇಕು, ಅವರನ್ನು ಉದ್ಧರಿಸಬೇಕು ಎಂಬುದೇ ಅವನ ಜೀವನದ ಧ್ಯೇಯವಾಗಿತ್ತು

ಮೂಡ-ಮನೆಯನ್ನು ಮೊದಲು ಪ್ರವೇಶಿಸಿದೊಡನೆ ಅವನಿಗೆ ಎದುರಾದ ಸುಮತಿಯನ್ನು ನೋಡಿ ಅವನ ಮನಸ್ಸಿನ ಕಣ್ಣುಗಳು ಗತಕಾಲದ ಗವಿಯೊಳಗೆ ಕವಿಯ ಕಣ್ಣುಗಳಂತೆ ದೃಷ್ಟಿ ಚೆಲ್ಲಿ ಚಿರಸ್ಮರಣೀಯವಾದ ಬಾಲಲೀಲೆಗಳನ್ನು ಕಂಡವು ಮುಂದಿನ ಜೀವನದ ಹಾದಿಯನ್ನು ಬದಲಿಸಲೂ ಪ್ರಯತ್ನಿಸಿದವು ಆದರೆ ಅವುಗಳಿಗೆಲ್ಲ ಶಂಕರ ಎಡೆಕೊಡಲಿಲ್ಲ ಆತನೇನು ಹೆಣ್ಣುಗಳನ್ನು ಕಣ್ಣಿನಿಂದ ನೋಡಿಲ್ಲವೇ ? ಅವನಾಗಿಯೇ ಹೇಳುತ್ತಿದ್ದ ಹೆಣ್ಣು, ಹೊನ್ನು, ಮಣ್ಣು ಎಲ್ಲವೂ ಒಂದೇ, ಆದರೆ ಹೆಣ್ಣಿಗೆಮಾತ್ರ ಮಾತಿ

ನಿಂದ ಮೋಹಿಸುವ ಶಕ್ತಿ ಇದೆ, ಮನುಷ್ಯನು ಮರುಳಾಗುವ ಹೆಣ್ಣು ಮಣ್ಣು ಮತ್ತು ಹೊನ್ನುಗಳಲ್ಲಿ ಹೆಣ್ಣಿಗೇ ಪ್ರಥಮ ಸ್ಥಾನವಿದೆ—ಯಾಕಂದರೆ ಅದಕ್ಕೆ ಉಳಿದ ಎರಡಕ್ಕಿಂತ ಹೆಚ್ಚಿನ ಶಕ್ತಿ ಇದೆ, ಮಾತಿನಿಂದ ಹೆಣ್ಣು ಏನು ಬೇಕೋ ಅದನ್ನು ಮಾಡಬಲ್ಲುದು !

ಪುಣೆಯಲ್ಲಿ ಎಷ್ಟೋ ಹೆಣ್ಣುಗಳು ಅವನನ್ನೇ ಬೆನ್ನುಹತ್ತಿದಾಗ ಅವರತ್ತ ಕಣ್ಣು ಹೊರಳಿಸದ ಶಂಕರ, ಮೂಡುಮನೆಯ ಮೆಟ್ಟಲು ಹತ್ತಿದೊಡನೆ ಸುಮತಿಯನ್ನು ನೋಡಿ ಒಮ್ಮೆಲೇ ಹೇಗೆ ಅವಳಮೇಲೆ ಪ್ರೇಮಾತುರನಾದ ? ಈಗ ಅವನು ಹಿಂದೆ ಹೇಳುತ್ತಿದ್ದ— 'ಮದುವೆ ! ಎಲ್ಲರೂ ಮದುವೆಯಾಗುತ್ತಾರೆ, ಎಲ್ಲರೂ ಹೆಂಡತಿ ಮಕ್ಕಳು ಮರಿಗಳನ್ನು ಸಾಕುತ್ತಾರೆ— ಆದರೆ ಎಲ್ಲರೂ ಮಾಡುವುದನ್ನು ನಾನು ಮಾಡಲಾರೆ, ಅವರೆಲ್ಲ ಸಾಧಿಸದ ಏನಾದರೂ ಒಂದು ಮಹತ್ಕಾರ್ಯವನ್ನು ನಾನು ಮಾಡುವವನು' ಎಂಬ— ಮಾತುಗಳು ಅವನಿಗೆ ಮರೆತು ಹೋದವೆಂದು ಹೇಳೋಣವೆ ? ಬೇಡ-- ಅವನಿನ್ನೂ ಮದುವೆಯಾಗಲಿಲ್ಲ ಆ ವಿಚಾರವೂ ಅವನ ತಲೆಯಲ್ಲಿ ಇಲ್ಲ ಹಾಗಾದರೆ ಅವನು ಆಗ ಯಾಕೆ ಸುಮತಿಗೆ ಆ ಉಡುಗೊರೆ ಕೊಟ್ಟ ? ಅದು ಆಕಗೆಂದೇ ಆತ ಪುಣೆಯಿಂದ ಹೊತ್ತುತಂದದ್ದೇ ಅಲ್ಲ ಅದು ಅವನ ಸೋದರಿ ಕೋನಮ್ಮಳಿಗೆ ಕೊಡಲು ತಂದದ್ದು ಎಂದೊಡನೆ ಅಕ್ಕನಿಗೆ ಕೊಡಲು ತಂದುದನ್ನು ಇವಳಿಗೆ ಕೊಟ್ಟನೆಂದು ತಿಳಿದರೆ ತಪ್ಪಾದೀತು ಯಾಕಂದರೆ ಉಡುಗೊರೆಯ ಪೊಟ್ಟಣ ಅಂಥ ಅವನ ಪೆಟ್ಟಿಗೆಯಲ್ಲಿ ಇನ್ನೂ ಒಂದು ಇದೆ !

ಇಲ್ಲಿಯವರೆಗೆ ಶಂಕರ ವಿಚಾರಿಸುತ್ತ ಮಲಗಿದ್ದನಷ್ಟೆ ಆ ಭಾವಸಮಾಧಿಯಲ್ಲಿ ಅವನಿಗೆ ಹೊರಗೆ ಕತ್ತಲಾದದ್ದೂ ಗೋಚರಿಸಲಿಲ್ಲ ಆದರೆ ಸುಮತಿ ಚಿಮಣಿಯ ಬುರುಡೆಯನ್ನು ಹೊತ್ತಿಸಿಕೊಂಡು ತಂದು ಚಾವಡಿಯ ಗೋಡೆಗೆ ತೂಗಿಸುವಾಗ ಒಮ್ಮೆಲೇ ಅವನ ದೃಷ್ಟಿ ಅವಳತ್ತ ಹೋಯಿತು ಚಿಮಣಿಯ ಬೆಳಕು ಅವಳ ಮುಖವನ್ನು ಕೆಂಪಾಗಿ ಕಾಣುವಂತೆ ಮಾಡಿತು ಅವಳ ಚೆಂದುಟಿಗಳು ರಕ್ತಮಯವಾಗಿ ಕಂಡವು ಅವಳ ತುಂಬುಜವ್ವನ ಇವನ ದೃಷ್ಟಿಯನ್ನು ಸೆಳೆಯಿತು ಅವಳ ಆ ಸುಂದರ ತನುವನ್ನು ಇವನಿಗೆ ನೋಡಿದಷ್ಟೂ ಸಾಲಲಿಲ್ಲ ತೆರೆದ ಕಣ್ಣುಗಳನ್ನು ಮುಚ್ಚಲು ಪ್ರಯತ್ನಿಸಿದ ಅವುಗಳು ಕೇಳಲಿಲ್ಲ "ಸುಮತಿ ಇಷ್ಟು ಸುಂದರಿಯೇ!" ಎಂದು ಅವನ ಮನ ವಿಸ್ಮ

ಯಗೊಂಡಿತು ಅವಳೊಡನೆ ಮಾತಾಡಲು ಬಾಯಿ ಅಪೇಕ್ಷಿಸಿತು “ಇಷ್ಟು ಬೇಗ ದೀಪ ಹಚ್ಚುವುದೇ ? ” ಎಂದು ಅವಳನ್ನು ಉದ್ದೇಶಿಸಿ ಪ್ರಶ್ನಿಸಿದ

“ ಇದೇನು ಬೇಗ ! ” ಎಂದು ಆಕೆ ಇವನತ್ತ ನೋಡಿ ನಕ್ಕಳು

“ಆಯಿತು” ಎಂದು ಶಂಕರ ಹೇಳುವಾಗ ಹೊನ್ನಪ್ಪಯ್ಯನವರ ಸವಾರಿ ಬಂತು ಇತ್ತ ಶಂಕರನ ತಾಯಿಯ ಪ್ರವೇಶವೂ ಆಯಿತು ಇವರ ಪ್ರವೇಶದಿಂದ ಅಲ್ಲಿಯ ದೃಶ್ಯವೇ ಬದಲಾಯಿತು ಎಲ್ಲರ ಮುಖದಲ್ಲೂ ನಗೆ ನಲಿಯಿತು

ಶಂಕರನನ್ನು ನೋಡಲು ಅವನ ತಾಯಿಗೆ ಎರಡು ಕಣ್ಣುಗಳು ಸಾಲಲಿಲ್ಲ. ಆಕೆಯ ಮುದಿ ದೇಹದ ಅವಯವಗಳಲ್ಲಿ ಆ ಎರಡು ಕಣ್ಣುಗಳಿಗೆ ಅದೆಂಥ ಯೌವನ ಪ್ರಾಪ್ತಿಯಾಯಿತೋ ತಿಳಿಯದು ಅವಳ ನೋಟದಲ್ಲಿ ವಾತ್ಸಲ್ಯದ ಓಟ ಧಾರಾವಾಹಿನಿಯಾಗಿ ಸಾಗುತ್ತ ಇತ್ತು ಎಷ್ಟೋ ಹೊತ್ತಿನ ವರೆಗೆ ಮಗನನ್ನು ನೋಡಿಯೇ ನೋಡಿದಳು “ ಶಂಕರ ” ಎಂದು ಮಾತ್ರ ಹೃದಯ ಕರೆಯಿತು ಆದರೆ ಅವಳ ಬಾಯಿಗೆ ಹೃದಯದಿಂದ ಉಕ್ಕಿ ಬಂದ ಶಬ್ದದ ಜೊನಲನ್ನು ಹೊರದೂಡಲು ಶಕ್ತಿ ಸಾಲದಾಯಿತು ಕಾರಣ ಸಾವಕಾಶವಾಗಿ “ ಶಂ ..ಕ ರಾ ” ಎನ್ನುವ ಹೆಸರು ಅವಳ ತುಟಿ ದಾಟಿ ಹೇಗೂ ಬಂದಿತು ಕಣ್ಣುಗಳು ನೀರನ್ನು ಚೆಲ್ಲಲು ಮರೆಯಲಿಲ್ಲ ಇತ್ತ ಶಂಕರ ತಟ್ಟನೆ ಎದ್ದು ತಾಯಿಯ ಪಾದಪದ್ಮಗಳಿಗೆ ತಲೆತಾಗಿಸಿದ

“ ಯಾವಾಗ ಬಂದಿ ಮಗೂ ? ” ಎನ್ನುತ್ತ ಸುಬ್ಬಮ್ಮ ಮಗನ ಮೈ ಮೇಲೆ ಕೈಯಾಡಿಸಿ ಅವನ ಬಳಿಯಲ್ಲೇ ಕುಳಿತಳು ಶಂಕರನಿಗೆ ಉತ್ತರ ಕೊಡಲು ಬಾಯೇ ಬರಲಿಲ್ಲ

“ ದೇವರು ಎಷ್ಟು ಒಳ್ಳೆಯವನು ! ” ಎಂದು ಆಕೆ ದೇವರನ್ನು ಕೊಂಡಾಡಿದಳು

“ ಅಕ್ಕನನ್ನು ಕರೆದು ತರಲಿಲ್ಲವೋ ? ” ಎಂದು ಶಂಕರ ಕೇಳಿದ

“ ನೀನು ಇವತ್ತು ಬರುತ್ತಿ ಎಂದು ಯಾರಿಗೆ ಗೊತ್ತಿತ್ತು ? ಗೊತ್ತಿದ್ದರೆ ಕರೆದು ತರುತ್ತಿದ್ದೆ ” ಎಂದಳು ಆಕೆ

“ ಅಮ್ಮ ಆರೇ ವರುಷಗಳಲ್ಲಿ ಎಷ್ಟು ಸೊರಗಿದ್ದಾಳಲ್ಲ ”

" ನನಗೆ ನೀನು ಒಂದು ಕಣ್ಣು ಕೋನವ್ವ ಮತ್ತೊಂದು ಕಣ್ಣು " ಎಂದು ಏನೋ ಹೇಳಿ ಸುಬ್ಬಮ್ಮ ಸುಮ್ಮನಾದಳು ಅಲ್ಲ, ಕಣ್ಣು ಗಳನ್ನು ಕೆಂಪು ಸೀರೆಯಿಂದ ಒರಸಿಕೊಳ್ಳಲಾರಂಭಿಸಿದಳು

" ನೀನು ಯಾಕೆ ಅಳುತ್ತೀ ಅಮ್ಮಾ ? "

" ಇಲ್ಲ ಮಗೂ ನಾನು ಆಳುತ್ತಲಿಲ್ಲ ಅಳುವೇ ನನ್ನನ್ನು ಆಳಿಸುತ್ತಿದೆ " ಎಂದು ಹೇಳುವಾಗಂತು ಒಮ್ಮೆಲೇ ಕಣ್ಣೀರು ಉಕ್ಕಿ ಬಂದವು ಅವಳಿಗೆ " ನೀನು ಅತ್ತರೆ ನನಗೂ ಅಳುವಂತಾಗುತ್ತದಮ್ಮಾ " ಎಂದು ಶಂಕರನೂ ಕಣ್ಣಲ್ಲಿ ನೀರು ತುಂಬಿಸಿದ ಅವನ ಮುಖವನ್ನು ನೋಡಿ ಸಾವಿತ್ರಿ ಬೇಕಂದೇ ಸುಬ್ಬಮ್ಮನಿಗೆ ನಾಲ್ಕು ಮಾತು ಆಡಿದಳು " ಅಳ ಬೇಡವೋ ನೀನು ! ಮಗ ಬಂದವನಿಗೆ ಹೀಗೇ ಮಾಡಬೇಕು ಸ್ವಾಗತ ಅಯ್ಯ ನಿನ್ನ ಧೈರ್ಯವೇ ! ಇದೂ ಅಳುವ ಹೊತ್ತೇ ? " ಎಂದು ಸಾವಿತ್ರಿ ಹೇಳಿದಾಗ ಸುಬ್ಬಮ್ಮ ಧೈರ್ಯ ತಂದುಕೊಂಡಳು

ತಾಯಿಯ ಮಾತುಗಳನ್ನು ಕೇಳಿ ಶಂಕರನಿಗೆ ಅಪಾರವಾದ ಪೂಜ್ಯ ಭಾವನೆ ಹುಟ್ಟಿತು ಇಷ್ಟೊಂದು ವರುಷಗಳ ಕಾಲ ತಾನು ವಾತ್ಸಲ್ಯವಿರಹಿ ಯಾಗಿ ತಿರುಗಿದರೂ ಆಕೆ ಒಂದೂ ಚುಚ್ಚು ಮಾತನ್ನು ಆಡಲಿಲ್ಲವಲ್ಲ ಬದಲು ಆ ಬಗೆಯ ಮೊನೆಮಾತು ಹೊನ್ನಪ್ಪಯ್ಯ ಆಡಿದ್ದು ಅವನಿಂದ ಮರೆಯಲಾಗ ಲಿಲ್ಲ ಈ ಮೊದಲು ಸಾವಿತ್ರಿಯಾದರೂ ಆ ರೀತಿ ಆಡಿದ್ದಳಷ್ಟೆ ತಾಯಿ ಮಕ್ಕಳ ಸರಸ ಮಿಲನವನ್ನು ನೋಡಿದ ಮೇಲೆ ಹೊನ್ನಪ್ಪಯ್ಯ " ಇಷ್ಟು ಬೇಗ ಯಾಕೆ ಬಂದೆ ? ಹೇಗೂ ಐದಾರು ವರುಷ ಬಿಟ್ಟು ಬಂದಿದ್ದರೆ ಬಹಳ ಒಳ್ಳೆಯ ದಾಗುತ್ತಿತ್ತು ! ಆಂದರೆ ' ತಾಯಿ ' ಎಂಬುವವಳನ್ನು ಕಣ್ಣು ತುಂಬ ನೋಡಬಹುದಿತ್ತು " ಎಂದು ವ್ಯಂಗ್ಯವಾಗಿ ನುಡಿದರು. ಅವರ ಮಾತಿನ ಕಹಿ ಶಂಕರನ ಮನಸ್ಸನ್ನು ಆಹಿಯಂತೆ ಕಚ್ಚಿತು ಉಳಿದವರಿಗೆ ಅದರ ಪರಿಣಾಮ ವೇನೂ ಆಗಲಿಲ್ಲ ಹೊನ್ನಪ್ಪಯ್ಯ ಹಾಗೇ ಮುಂದುವರಿದು ತಮ್ಮ ಜಾಮಾತೃ ವಿನ ತ್ಯಗಳಿಕಗೂ ಪ್ರಾರಂಭಿಸಿದರು " ನಮ್ಮ ಆಳಿಯನ ದರ್ಶನ ಎಲ್ಲಿ ಯಾದರೂ ಆಗಿತ್ತೇ ? " ಎಂದು ಕೇಳುವಾಗ ಅವರ ಧ್ವನಿಯಲ್ಲಿ ಇನ್ನೂ ಬಿರುಸುತನ ಜಾರಿದಂತೆ ತೋರಲಿಲ್ಲ ಅಳಿಯನ ಪತ್ತೆ ಸಿಕ್ಕ ವಿಷಯುವನ್ನು

ಸಾವಿತ್ರಿಯೇ ಶಂಕರನ ಪರಿಯಿಂದ ನಿರೂಪಿಸಿದಳು ಅವಳು ಹೇಳಿದ ಕಥೆಯನ್ನು ಹೊನ್ನಪ್ಪಯ್ಯ ಮೈಮರೆದು ಕೇಳಿದರು ಆದರೂ ಅವರಿಗೆ ಸಮಾಧಾನವಾಗಲಿಲ್ಲ ಇನ್ನೊಮ್ಮೆ ಶಂಕರನ ಬಾಯಿಯಿಂದ ಅದೆಲ್ಲವನ್ನು ಸಮಗ್ರವಾಗಿ ಕೇಳಬೇಕೆಂದು ಅಪೇಕ್ಷಿಸಿದರು ಆದರೆ ಆ ಸಮಯವು ಅದಕ್ಕೆ ಯೋಗ್ಯವಲ್ಲವೆಂದು ಬಗೆಯಲು ಅವರಿಗೆ ಬಹಳ ಹೊತ್ತು ಹಿಡಿಯಲಿಲ್ಲ ಯಾಕಂದರೆ ಸಾವಿತ್ರಿ "ಪಾಪ, ಹುಡುಗ ದೂರದ ಪ್ರಯಾಣದಿಂದ ಬಂದೂ ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೊಳ್ಳಬಾರದೇ ? ಅವನೇನು ನಾಳೆ ಎಲ್ಲಿಗಾದರೂ ಓಡಿಹೋಗುತ್ತಾನೆಯೇ ? ನಾಳೆ ಇಡೀ ದಿವಸ ಬೇಕಾದರೆ ಅವನೊಡನೆ ಪಟ್ಟಾಂಗ ಹೊಡೆಯುತ್ತ ಕುಳಿತುಕೊಳ್ಳಿ" ಎಂದು ಪತಿಯನ್ನು ಎಚ್ಚರಿಸಿದಳು

ಎಷ್ಟೋ ಹೊತ್ತಿನವರೆಗೆ ಸುಬ್ಬಮ್ಮ ತನ್ನ ಮಗನ ಮೈಮೇಲಿನ ಚಿನ್ನಾಭರಣವನ್ನು ಕಾಣಲಿಲ್ಲ ಅವಳ ಕಣ್ಣಿಗೆ ಅವುಗಳು ಮೊದಲು ಕಾಣಿಸಿಕೊಳ್ಳುವುದು ಅಸಾಧ್ಯವಾಗಿತ್ತು ಬಹುಶಃ ಆ ವಾತ್ಸಲ್ಯಪಿರಹ ದೃಷ್ಟಿ ಆಭರಣ ಅಲಂಕಾರಗಳನ್ನು ಭೇದಿಸಿ ತನ್ನ ಮುದ್ದುಮಗನ ಮೂರ್ತಿಯನ್ನು ಮುಟ್ಟುವವರೆಗೆ ಧಾವಿಸಿತೆಂದು ತೋರುತ್ತದೆ ಮಗನು ಮಣಿಗಟ್ಟಿಗೆ ಚಿನ್ನ ತೊಟ್ಟು ಕೊಂಡಿದ್ದಾನೆಂಬುದನ್ನು ಆಕೆಗೆ ಸಾವಿತ್ರಿಯೇ ತಿಳಿಸಬೇಕಾಯಿತು ಹೊನ್ನಪ್ಪಯ್ಯ "ಏನಪ್ಪ, ಇವೆಲ್ಲ ಬಂಗಾರವೋ ಅಥವಾ 'ಗೋಲ್ಡ' ಬಂಗಾರವೋ?" ಎಂದು ಅವನ ಮೈಮೇಲಿನ ಒಡವೆಗಳನ್ನುದ್ದೇಶಿಸಿ ವಿಮರ್ಶೆಯ ಮಾತನ್ನಾಡಿದರು ಆಗಲೇ ಸುಬ್ಬಮ್ಮ ಮೆಲ್ಲನೆ ಮಗನ ಮೈಮೇಲೆ ಕೈಸವರುತ್ತ ಬಂಗಾರವನ್ನು ಪರೀಕ್ಷಿಸಲು ಪ್ರಾರಂಭ ಮಾಡಿದಳು ಅವನ ಕುತ್ತಿಗೆಯ ಸರವನ್ನು ನೋಡಿ ಅವಳ ಮನಸ್ಸು ತೃಪ್ತಿ ಹೊಂದಿತು "ಮಗ ಬಹಳ ದಿನಗಳ ವರೆಗೆ ಊರು ಬಿಟ್ಟಿದ್ದರೂ ತನ್ನ ಭವಿಷ್ಯವನ್ನು ಹಾಳುಮಾಡಲಿಲ್ಲ ದೇವರೇ ಆ ಪ್ರಕಾರ ಬುದ್ಧಿ ಕೊಟ್ಟ" ಎಂದು ಆಕೆ ದೇವಸ್ಮರಣೆ ಮಾಡಿಕೊಂಡಳು

ಹೊನ್ನಪ್ಪಯ್ಯನವರಿಗೆ ಇನ್ನೂ ಸಂಶಯ ನಿವಾರಣೆಯಾಗಲಿಲ್ಲ ಇಷ್ಟು ಸಣ್ಣ ಕಾಲಾವಧಿಯಲ್ಲಿ ಇಷ್ಟೆಲ್ಲ ಹಣ ಅವನು ಹೇಗೆ ಗಳಿಸಿದ ಎಂಬ ಸಂದೇಹ ಅವರನ್ನು ಪೀಡಿಸಿತು ಅದಕ್ಕಾಗಿ ಸ್ವಲ್ಪ ಅಸೂಯೆಯೂ ಅವರ ಮನದಲ್ಲಿ ಅಂಕುರಿಸಿತೆನ್ನಬಹುದು ತನ್ನ ಮಕ್ಕಳು ಗಟ್ಟಿ ಹತ್ತಿ ದುಡಿಯಲಿಕ್ಕೆ ಸುರು

ಮಾಡಿ ಎಷ್ಟೋ ವರುಷಗಳಾದವು ಆದರೂ ಅವರ ಕೊರಳಲ್ಲಿ ಒಂದು ಬಂಗಾರದ ಸರವಾಗಲೀ, ಕೈಗೆ ಬಂಗಾರದ ವಾಚಾಗಲೀ ತಾನು ಕಾಣಲಿಲ್ಲ– ಎಂದೂ ಆವರ ವಿಚಾರ ತುಲನಾತ್ಮಕ ದೃಷ್ಟಿಯಿಂದ ಹೊರಟಿತು ಅವನ ಒಡವೆಗಳು ಗಿಲೀಟಿನವಾಗಿರಬೇಕು ಎಂದು ಎಷ್ಟು ಮನಸ್ಸಿಗೆ ಸಮಾಧಾನ ಹೇಳಿದರೂ ಅದು ಕೇಳದು " ಲಕ್ಷ್ಮಿ ಚಂಚಲೆ " ಎಂದೂ ಅದು ಬೋಧಿಸ ತೊಡಗಿತು ಕೂಡಲೆ " ಇವನು ನನ್ನ ಅಳಿಯನಾಗುತ್ತಿದ್ದರೆ . ಛೀ, ಅಂದು ಇವನಿಗೆ ಹೆಣ್ಣು ಕೊಡಲು ಹಿಂದೆ ಮುಂದೆ ನೋಡಿದೆ, ಈಗ ಮರುಗ ಬಾರದು " ಎಂಬ ವಿಚಾರವು ಅವರ ತಲೆಯನ್ನು ಕೆಡಿಸಿತು ಸ್ವಲ್ಪ ಹೊತ್ತು, ಶಂಕರ ಉಳಿದವರೊಡನೆ ಮಾತಾಡುವಾಗ–ಇವರು ಸುಮ್ಮನೆ ಕೂತರು ಚಾವಡಿಯ ತುಂಬೆಲ್ಲ ಸುವಾಸನೆ ಹರಡಿತ್ತಷ್ಟೆ ಆ ಸೌರಭ ಅವರ ಮನಸ್ಸನ್ನು ಮತ್ತಷ್ಟು ಚಂಚಲಗೊಳಿಸಿತು ಎಲ್ಲರೂ ಅವನೊಡನೆ ಮಾತಾ ಡುವುದು ಮುಗಿಯಿತು ಅವರೆಲ್ಲ ಒಳಗೆ ನಡೆದರು ಸುಬ್ಬಮ್ಮ ಮಾತ್ರ ತನ್ನ ಮನೆಗೆ ಹೋಗಿ ಒಲೆ ಹೊತ್ತಿಸಿ ಅಡುಗೆ ಮಾಡುತ್ತೇನೆಂದು ಅವಸರಿಸ ಹತ್ತಿದಳು " ಪರವೂರಿನಿಂದ ಬಂದವನು ಮೊದಲೇ ಇಲ್ಲಿಯ ಅನ್ನ ಉಣ್ಣು ವುದೇ ? ನಮ್ಮನೆಂದು ಮನೆಯಿದೆ ಎಂದಮೇಲೆ ಹಾಗ ಇನ್ನೊಬ್ಬರ ವ ನೆ ಯಲ್ಲಿ ಇರುವುದು ಸರಿಯಲ್ಲ " ಎಂದು ಸುಬ್ಬಮ್ಮ ಸಾವಿತ್ರಿಯೊಡನ ಹೇಳಿ ದಳು.

" ನೀನೊಂದು ಸಣ್ಣ ಮಗುವಿನಂತೆ ಏನು ಮಾತಾಡ ತ್ತಿ ಸುಬ್ಬೀ ! ಇದು ಇನ್ನೊಬ್ಬರ ಮನೆಯೇ? ನಿನ್ನ ಮನೆಗೂ ನಮ್ಮ ಮನೆಗೂ ಏನು ಭೇದ ? ನೀನು ಇನ್ನು ಹೋಗಿ ಅಡುಗೆ ಮಾಡಿ ಅವನಿಗೆ ಬಡಿಸುವುದು ನಾಳೆಗೆ " ಎಂದು ಸಾವಿತ್ರಿ ಹೇಳುವಾಗ ಸುಬ್ಬಮ್ಮ ನಡುವೆ ಬಾಯಿ ಹಾಕಿ, " ಇಂಥ ದಿವಸ ಬರುತ್ತೇನೆಂದು ನಾಲ್ಕು ಅಕ್ಷರ ಬರೆದು ಆದರೂ ತಿಳಿಸಿದನೋ ! " ಎಂದು ಮಗ ಪತ್ರ ಬರೆಯುದುದಕ್ಕೆ ವಿಶಾದ ಪಟ್ಟುಕೊಂಡಳು

" ನೀನು ಶಂಕರನ ವಿಷಯ ಬಹಳ ಮಾತಾಡಬೇಡ ಸುಬ್ಬೀ ನಿನ ಗಿಂತ ಅವನ ಮೇಲೆ ಪ್ರೀತಿ ನನಗೆ ಹೆಚ್ಚು ಉಂಟು ಅಂತೇ ಅವನಿಗಾ ದರೂ ನಮ್ಮಮನೆಯ ಮೇಲಿನ ಪ್ರೇಮ ಎಷ್ಟಿದೆಯೆಂಬುದು ನಿನಗೆ ಗೊತ್ತಿಲ್ಲ ಅವನೇನು ಈ ಮನೆ ಬೇರೆ ನಿಮ್ಮ ಮನೆ ಬೇರೆ ಎಂದು ತಿಳಿದುಕೊಂಡಿಲ್ಲ

ಅವನು ಈ ಮನೆಯನ್ನು ತನ್ನ ಸ್ವಂತ ಮನೆಗಿಂತ ಹೆಚ್ಚಾಗಿ ಭಾವಿಸಿದ್ದಾನೆ ನೀನು ಇವತ್ತು ಒಂದು ವೇಳೆ ಬಾರದಿದ್ದರೆ ಅವನೇನು ಹಿಂದೆ ಹೋಗುತ್ತಿದ್ದನೇ ? " ಎಂದಳು ಸಾವಿತ್ರಿ

" ಅದು ನೀನು ಹೇಳುವುದು ನಿಜ ನನಗಿಂತ ಹೆಚ್ಚು ನೀನೇ ಅವನನ್ನು ಪ್ರೀತಿಸಿದ್ದಿ, ಸಾಕಿದ್ದಿ ಅವನಿಗೆ ಈ ಮನೆ ಎಂದರೆ ಮೊದಲಿನಿಂದಲೂ ಮಮತೆ ತನ್ನ ಸ್ವಂತ ಮನೆಗಿಂತ ಹೆಚ್ಚಾಗಿ ಇದನ್ನು ಕಾಣುತ್ತಿದ್ದ " ಎಂದಳು ಸುಬ್ಬಮ್ಮ

" ಹಾಂ, ನಿಜವೋ ? ಹಾಗಾದರೆ ಇವತ್ತು ರಾತ್ರಿ ಇಲ್ಲಿಯೇ ಇದ್ದು ಬಿಡಿ ನೀವು ಇಬ್ಬರು ಇಲ್ಲಿ ಇದ್ದೀರೆಂದು ನಾವೇನು ದೊಡ್ಡ ಪಕ್ವಾನ್ನ ಬೇಯಿಸುವುದಿಲ್ಲ ದಿನದ ಅಡಿಗೆಯನ್ನೇ ಮಾಡುತ್ತೇವೆ ಅದನ್ನೇ ಎಲ್ಲರೂ ಇದ್ದಂತೆ ಹಂಚಿ ಉಣ್ಣೋಣ ನಿತ್ಯಕ್ಕಿಂತ ಹೆಚ್ಚು ಅಕ್ಕಿ ಕೂಡಾ ಹಾಕಲಿಲ್ಲ " ಎಂದು ಸಾವಿತ್ರಿ ಹೇಳಿ ತಾಯಿಮಕ್ಕಳಿಬ್ಬರೂ ಅಂದಿನ ರಾತ್ರಿಯನ್ನು ಅಲ್ಲಿಯೇ ಕಳೆಯುವಂತೆ ಮಾಡಿದಳು

ಇತ್ತ ಚಾವಡಿಯಲ್ಲಿ ಕುಳಿತುಕೊಂಡ ಹೊನ್ನಪ್ಪಯ್ಯನವರಿಗೂ ಶಂಕರನಿಗೂ ಸಂಭಾಷಣೆ ನಡೆದೇ ಇತ್ತು ಇಲ್ಲಿಯವರೆಗೆ ಅವರ ಮಾತುಗಳು ಪುಣೆಯ ಸುದ್ದಿ, ತಮ್ಮೂರಿನ ಜನರ ಬಗ್ಗೆ, ಕಲಿತವರು—ಕಲಿಯುತ್ತಿರುವವರ ಬಗ್ಗೆ ಮಾತ್ರ ನಡೆದಿದ್ದವು ಅವುಗಳಿಗೆ ಶಂಕರ ಉತ್ತರಿಸುತ್ತಿದ್ದ ರೀತಿಯೇ ಬೇರೆಯಾಗಿತ್ತು ಅವನ ಮಾತುಗಳನ್ನು ಕೇಳಿ ಒಮ್ಮೊಮ್ಮೆ ಅವರಿಗೆ, ಶಂಕರನ ತಲೆ ಸ್ವಲ್ಪ 'ಸಡಿಲು' ಎಂದು ಅನಿಸಿರಬಹುದು ಯಾಕೆಂದರೆ ಅವರು ತಮ್ಮೂರಿನ ಜನರು ಈಗ ವಿದ್ಯೆ ಕಲಿತು, ಜಜ್ಜನೋ, ಡಾಕ್ಟರನೋ, ಇಂಜಿನಿಯರನೋ, ಅದೋ ಇದೋ ಎಂದು ದೊಡ್ಡ ದೊಡ್ಡ ನೌಕರಿಗಳನ್ನು ಸಂಪಾದಿಸತೊಡಗಿದ್ದಾರೆ, ಆದ್ದರಿಂದ ತಮ್ಮೂರವರು ಮುಂದೆ ಬಂದರು—ಎಂದು ಹೇಳಿದರು ಶಂಕರ ಅವರ ಆ ಮಾತಿಗೆ ಒಪ್ಪಲಿಲ್ಲ ಅವರೊಡನೆ ತರ್ಕಕ್ಕೂ ಸಿದ್ಧನಾದ " ತಮ್ಮ ತಮ್ಮಷ್ಟಕ್ಕೇ ಜಜ್ಜ, ಡಾಕ್ಟರನಾಗಿ ಏನು ಪ್ರಯೋಜನ ? " ಎಂದು ಶಂಕರ ಕೇಳಿದ

" ಅಂದರೆ—ಇದು ಒಳ್ಳೆಯ ಲೆಕ್ಕ ! ", ಎಂದು ಹೊನ್ನಪ್ಪಯ್ಯ ಆಶ್ಚರ್ಯಪಟ್ಟರು

" ಅಂದರೆ—ನಾನು ಹೇಳುವುದು ಅವರಿಂದ ನಮಗೆ ನಿಮಗೆ ಏನಾದರೂ ಉಪಯೋಗ ಅಥವಾ ಸಹಾಯವುಂಟೇ ಎಂದು ? "

" ಏನು ಹೇಳುತ್ತಿ ಮಹಾರಾಯಾ ! ಡಾಕ್ಟರನಾದವನು ಎಷ್ಟು ಜನರ ಜೀವ ಉಳಿಸುವುದಿಲ್ಲ ? ಅವನು ಪಾರುಮಾಡುವ ಜೀವಗಳ ಲೆಕ್ಕವನ್ನೇ ಎಣಿಸಿದರೆ ಅವನಿಗೆ ಎಷ್ಟು ಪುಣ್ಯವುಂಟೋ ! "

" ಜೀವ ಬದುಕಿಸುತ್ತಾನೇನೋ ನಿಜ, ಆದರೆ ಅವರಿಂದ ಹಣ ಸೂರೆ ಮಾಡುವ ರೀತಿ ಅವರನ್ನು ಕೊಂದುದಕ್ಕಿಂತ ಪಾಪಕರವಾಗುತ್ತದೆ "

" ಇದು ಒಳ್ಳೆಯ ಲೆಕ್ಕ ! ಅವನು ಡಾಕ್ಟರ ಪರೀಕ್ಷೆ ಪಾಸಾಗಲಿಕ್ಕೆ ಎಷ್ಟು ಹಣ ವೆಚ್ಚ ಮಾಡಿರುವುದಿಲ್ಲ ! ಅದನ್ನೆಲ್ಲ ಡಾಕ್ಟರಿಕೆ ಮಾಡಿ ಗಳಿಸ ದಿದ್ದರೆ ಮತ್ತೆ ಹೇಗೆ ಗಳಿಸಬೇಕು ? ಅವನಿಗೇನು ಧರ್ಮಕ್ಕೆ ವಿದ್ಯೆ ಸಿಗುತ್ತ ದೆಯೇ ? "

" ಧರ್ಮಕ್ಕೆ ವಿದ್ಯೆ ಸಿಗದಿದ್ದರೆ ಧರ್ಮಕ್ಕೆ ಔಷಧ ಕೊಟ್ಟು ಬಡವರಿಗೆ ಸಹಾಯ ಮಾಡಬಾರದೆಂದಿಯೇ ? "

" ಏನೋ ಮಹರಾಯಾ ನಿನ್ನೊಡನೆ ಮಾತಾಡಲಿಕ್ಕೆ ನನಗೆ ತಿಳಿಯುವು ದಿಲ್ಲ ! ಧರ್ಮಕ್ಕೆ ಔಷಧ ಬೇಕಾದವರಿಗೆ ಸರಕಾರದವರಿಲ್ಲವೋ ? " ಎಂದು ಹೊನ್ನಪ್ಪಯ್ಯ ಸ್ವಲ್ಪ ಕೋಪಗೊಂಡವರಂತೆ ಆದರು

" ನೀವು ಸಿಟ್ಟು ಮಾಡಿಕೊಳ್ಳುವುದಿಲ್ಲ ಅಂದರೆ ನಾನು ನಿಮಗೆ ನನ್ನ ವಿಚಾರ ಹೇಳುತ್ತೇನೆ " ಎಂದು ಶಂಕರ ಹೇಳಿದ

" ಆಗಲಿ ಕೇಳುತ್ತೇನೆ. ಸಿಟ್ಟು ಯಾತರದ್ದು ? "

" ನಮ್ಮ ಜನರೇ ಆಗಲಿ, ಬೇರೆ ಜನರೇ ಆಗಲಿ, ದೊಡ್ಡ ದೊಡ್ಡ ಹುದ್ದೆ ಗಳನ್ನು ದೊರಕಿಸಿಕೊಂಡು ಸುಮ್ಮನೆ ಕೂತರೆ ಏನು ಪ್ರಯೋಜನ ? ಇವತ್ತು ಒಬ್ಬವನು ಡಾಕ್ಟರ ಪರೀಕ್ಷೆ ಪಾಸಾದನೆಂದು ತಿಳಿಯುವಾ ನಾಳೆ ಅವ ನೊಂದು ದವಾಖಾನೆ ತೆರೆದು ರೋಗಿಗಳಿಗೆ ಔಷಧ ಕೊಡಲಿಕ್ಕೆ ಪ್ರಾರಂಭಿಸು ತ್ತಾನೆ ಹಣ ಬೇಕಾದಷ್ಟು ಗಳಿಸುತ್ತಾನೆ ಅಂತೆಯೆ ಒಂದು ಚಂದವಾದ ಹೆಣ್ಣನ್ನೂ ಮದುವೆಯಾಗುತ್ತಾನೆ ಅಂಥವನಿಗೆ ಹೆಣ್ಣು ಯಾರೂ ಕೊಡು ತ್ತಾರೆನ್ನಿ ಆ ಮೇಲೆ ತನ್ನ ಹೆಂಡತಿಮಕ್ಕಳಿಗೆ ಕೂತು ಉಣ್ಣುವಷ್ಟು ಹಣ ವನ್ನು ಇನ್ನೂರು ಮಾಡಿಟ್ಟು ಅವನು ಸಾಯುತ್ತಾನೆ ಅಲ್ಲವೋ ? "

" ಹೌದು ಅದಕ್ಕಿಂತ ಹೆಚ್ಚಿನದ್ದು ಅವನೇನು ಮಾಡಬೇಕು ? "

" ಅದನ್ನೇ ಈಗ ನಾನು ಹೇಳುವುದು ಅವನು ಅಷ್ಟೆಲ್ಲ ಮಾಡಿದರೂ ಅವನಿಂದ ಕಿಂಚಿತ್ತಾದರೂ ಸಹಾಯ ಅವನ ಸುತ್ತುಮುತ್ತಲಿನ ಸಮಾಜಕ್ಕೆ ಆಗುತ್ತದೆಯೇ ಹೇಳಿ ನೋಡೋಣ ? "

" ಹಾಗೆ ಸಹಾಯ ಮಾಡುತ್ತ ಹೋದರೆ ಅವನು ಮಣ್ಣು ತಿನ್ನಬೇಕಾದೀತು, ಅವನ ಹೆಂಡತಿ ಮಕ್ಕಳು ಉಪವಾಸ ಬೀಳಬೇಕಾದೀತು ಅದೆಲ್ಲ ಬರೇ ಬಾಯಿಯಿಂದ ಹೇಳುವ ತತ್ವಜ್ಞಾನ, ಏನೋ ನಮ್ಮ ಅಜ್ಜಿ ಒಬ್ಬಳು ನಿನ್ನಂತೆ ಹೇಳುತ್ತಿದ್ದಳು 'ಬೇರೆಯವರ ಮಕ್ಕಳಿಗೆ ಸಹಾಯ ಮಾಡಬೇಕು, ಪ್ರೀತಿಸಬೇಕು, ಅಂದರೆ ನಿಮ್ಮ ಮಕ್ಕಳನ್ನು ದೇವರು ಪ್ರೀತಿಸುತ್ತಾನೆ' ಎಂದು ಇದೆಲ್ಲ ಹಿಂದಿನವರ ಮಾತಾಯಿತು ಈಗೆಲ್ಲ ಆ ಪರೋಪಕಾರ ನಡೆಯುವುದಿಲ್ಲ "

" ನಿಮ್ಮ ಈ ಮಾತಿಗೆ ನಾನು ಒಪ್ಪುವುದಿಲ್ಲ ಹಾಗೆ ಜಗತ್ತಿನಲ್ಲಿ ಒಬ್ಬರಿಗೊಬ್ಬರು ಸಹಾಯ ಮಾಡದಿದ್ದರೆ ಜೀವನವೆ ಇಲ್ಲದಾದೀತು. ಅಂಥ ಸತ್ಪುರುಷರಿದ್ದಾರೆಂದೇ ಜಗತ್ತು ನಡೆಯುತ್ತದೆ ಅಂಥವರು ಹಿಂದಕ್ಕೂ ಇದ್ದರು. ಇಂದಿಗೂ ಇದ್ದಾರೆ ಒಟ್ಟಿನಲ್ಲಿ ನಾನು ಹೇಳುವುದೆಂದರೆ ಮನುಷ್ಯನಾಗಿ ಹುಟ್ಟಿ ಬಂದುದಕ್ಕೆ ಏನಾದರೂ ತನ್ನ ಕೈಲಾದಷ್ಟು ಪರೋಪಕಾರ ಮಾಡಬೇಕು ನೀವೇನೋ ಹೇಳಿದಿರಲ್ಲ—ನಿಮ್ಮ ಅಜ್ಜಿ ಬೋಧಿಸುತ್ತಿದ್ದ ಮಾತು, ಅದು ನಿಜಕ್ಕೂ ದೊಡ್ಡ ಮಾತು "

" ನಿನ್ನ ಮಾತಿನ ಪ್ರಕಾರ ಮನುಷ್ಯ ಹುಟ್ಟಿದ್ದೇ ಪರರಿಗೆ ಸುಖ ಕೊಡಲಿಕ್ಕೆ ಅಲ್ಲವೋ ? "

" ಹಾಗೆ ನೋಡಲಿಕ್ಕೆ ಹೋದರೆ ಜಗತ್ತಿನಲ್ಲಿ ಸುಖವೂ ಇಲ್ಲ ದುಃಖವೂ ಇಲ್ಲ "

" ಸರಿ ! ಮತ್ತೇನಿದೆ ? "

" ಸುಖ ಮತ್ತು ದುಃಖಗಳ ಅವಸ್ಥೆಯನ್ನು ಒಂದಕ್ಕೊಂದು ಹೋಲಿಸುವುದೇ ಹೊರತು ಬೇರೇನಿಲ್ಲ "

" ನಿನ್ನ ಮಾತಿನ ಅರ್ಥವೇ ನನಗೆ ತಿಳಿಯದು! "

" ಅದೆಲ್ಲ ಸಾಯಲಿ, ನಮ್ಮೂರಿನಲ್ಲೂ ಯಾರೋ ಒಬ್ಬರು ಪುಣ್ಯಕಾರ್ಯಕ್ಕೆ

ಕೈಹಾಕಿ ಯಶಸ್ವಿಯಾಗಿದ್ದಾರಲ್ಲ! ಅವರಂಥ ಪುಣ್ಯವಂತರು ಇಂದೂ ಇದ್ದಾರೆಂದಮೇಲೇ ಜಗತ್ತು ನಡೆಯುತ್ತಿದೆ ನಾನು ಊರು ಬಿಡುವಾಗ ಸಂಪಿಗೆಯ ಆ ವಿಶಾಲವಾದ ಮೈದಾನು ಬರಡಾಗಿತ್ತು ಈ ಆರು ವರುಷಗಳಲ್ಲೇ ಅಲ್ಲಿ ಒಂದು 'ಧರ್ಮಾರ್ಥ ಚಿಕಿತ್ಸಾಲಯ' ಮೇಲೇರಿದೆಯಲ್ಲ! ಅಂಥ ಪುಣ್ಯವಂತರಾರಪ್ಪಾ ಅವರು! ಆ ಒಂದು ಚಿಕಿತ್ಸಾಲಯ ಕಟ್ಟಿಸಿದ ಅವರು ನೂರು ದೇವಾಲಯಗಳನ್ನು ಕಟ್ಟಿಸಿದ್ದಕ್ಕಿಂತ ಹೆಚ್ಚಿನ ಪುಣ್ಯಪಡೆದುಕೊಂಡರು "

"ನೀನು ಯಾವಾಗ ನೋಡಿದಿ ಮಹರಾಯಾ ಅದನ್ನು? ಅದು ನಮ್ಮ ಊರಿನ ಕೃಷ್ಣರಾಯರ ಧರ್ಮಾರ್ಥ ಚಿಕಿತ್ಸಾಲಯ ಅವರು ಅತ್ತಲಾಗೆ ಗಟ್ಟದ ಮೇಲ ಬರಿ ಹೊಟ್ಟೆಯಿಂದ ಹೋಗಿ, ನಾಕಷ್ಟು ಬವಣೆಪಟ್ಟು ಡಾಕ್ಟರಿಕ ಕಲಿತು, ತಮ್ಮ ಸ್ವಂತ ವೆಚ್ಚದಿಂದಲೇ ಅಷ್ಟು ದೊಡ್ಡ ಸಾಹಸ ಮಾಡಿದರು !"

"ಸಾಹಸ ಅನ್ನಬೇಡಿ, ಪುಣ್ಯ ಮಾಡಿದರೆನ್ನಿ ನೋಡಿ ನಿಮ್ಮ ಬಾಯಿಯಿಂದ ಈಗಲೇ ಈಗ ಹೇಗೆ ಬಂತು ಅವರ ಹೊಗಳಿಕೆ—ಅವರ ಸಾಹಸ! ನಾನು ಆ ಪುಣ್ಯಾಲಯವನ್ನು ಬರುವಾಗ ಬಸ್ಸಿನಲ್ಲೇ ನೋಡಿವೆ ಹೊರಗೆ ನಿಂತಿರುವ ಬೋರ್ಡನ್ನು ಓದಿದೆ ಅದನ್ನೂ ನೆಟ್ಟಗೆ ಓದುವುದಕ್ಕಾಗಲಿಲ್ಲ ಆದರೆ ಹಲವಾರು ಬಡವರ ತಂಡ, ಅಲ್ಲಿ ಮದ್ದಿಗಾಗಿ ಕಾದಿರುವುದು, ಮದ್ದು ಒಯ್ಯುವುದು—ಎಲ್ಲವೂ ನನ್ನ ಕಣ್ಣಿಗೆ ಕಂಡಿತು ಆಗ ನನ್ನ ಆತ್ಮಕ್ಕೆ ಆದ ಆನಂದವನ್ನು ಅದೆಂತು ಬಣ್ಣಿಸಲಿ!"

"ಅವರು ಸಂಪಿಗೆಯಲ್ಲಿ ಧರ್ಮಾರ್ಥ ಚಿಕಿತ್ಸಾಲಯ ತೆರೆದ ಮೇಲೆ ನಮ್ಮ ಈ ಹತ್ತಿರದ ಪೇಟೆಯ ಆಳಲೆಕಾಯಿ ಪಂಡಿತರು, ಮಂತ್ರವಾದಿಗಳು ಸ್ವಲ್ಪ ಬಾಲ ಮಡಚಿ ಸುಮ್ಮನೆ ಕೂತಿದ್ದಾರೆನ್ನಬಹುದು ಡಾ| ಕೃಷ್ಣರಾಯರಿಗೂ ಈ ಊರಿನ ಬಂಡವಾಳುದಾರರು ಒಂದು ಕೈ ತೋರಿಸಲು ಕಚ್ಚೆಕಟ್ಟಿದರು ಆದರೆ ರಾಯರು ಹೆದರಲಿಲ್ಲ "

"ಅಂದರೆ ಈ ಊರಿನ ಸಿರಿವಂತರು ಏನಾದರೂ ಪಿತೂರಿ ಹೂಡಿದರೇ? ಜನಹಿತಕ್ಕೆ ಇಳಿಯುವವನಿಗೆ ಕಲ್ಲು ಒಗೆಯುವವರು ಬಹಳ ಅದರಲ್ಲೂ ದುಡ್ಡಿನ ಮಸ್ತಿಯುಳ್ಳವರಿಗೆ ಅಂಥ ಕಾರ್ಯಗಳನ್ನು ನೋಡಲಿಕ್ಕೆ ಆಗುವುದಿಲ್ಲ "

" ಅದೇಪ್ರಕಾರ ಆಯಿತು ನೋಡು ಪಾಪ, ಕೃಷ್ಣರಾಯರು ಮೊದಲೇ ಬಡವರು ಸಾದಾಜೀವನ ಅವರದು ಅಷ್ಟು ದೊಡ್ಡ ಡಾಕ್ಟರರಾದರೂ ಅವರ ಜೀವನದಲ್ಲಿ ಸಲ್ಲದ ಆಡಂಬರ—ಬೆಡಗುಗಳಿಗೆ ಎಡೆಯಿಲ್ಲ ಅಂಥ ವರಿಗೆ ಆ ದೊಡ್ಡ ಸಾಹಸಕ್ಕೆ ಕೈಹಾಕಲು ದೇವರೇ ಧೈರ್ಯ ಕೊಟ್ಟನೆಂದು ಹೇಳ ಬೇಕು ಆಸ್ಪತ್ರೆಲಾಗೆ ಗಟ್ಟಿದಮೇಲೆ ಕೃಷ್ಣರಾಯರು ನಮ್ಮೂರಿನ ಸಾಹು ಕಾರರ ಕೈಯಿಂದ ವಿನಯಪೂರ್ವಕ ದಿನದಿನವೂ ಒಂದಾಣೆ ನಿಧಿಯನ್ನು ಸಂಗ್ರ ಹಿಸಿ, ಅದನ್ನು ಇಲ್ಲಿಯ ಧರ್ಮಾರ್ಥ ಚಿಕಿತ್ಸಾಲಯಕ್ಕೆ ವಿನಿಯೋಗಿಸುತ್ತಿ ದ್ದರು ಆದರೆ ಅದನ್ನು ನೋಡಲಾಗದೆ, ನಮ್ಮೂರಿನ ಬೀದಿ ಹೆಣದ ಎಲು ಬನ್ನು ಹಣಕ್ಕಾಗಿ ನೆಕ್ಕುವ ಸಿರಿವಂತರು ಕಟಾಯಿಸಿಯೇ ಬಿಟ್ಟರು ಅದಾ ದರೂ ನ್ಯಾಯಪ್ರಕಾರ ಮಾಡಿದರೇ ? ಇಲ್ಲ, ಆ ಒಂದಾಣೆ ನಿಧಿ ಸಂಗ್ರಹಿ ಸುವ ಹುಡುಗನನ್ನು ಹಿಡಿದು ಬಲತ್ಕಾರದಿಂದ ಹೇಡಿಗಳಂತೆ ಅವನ ಕೈಯಿಂದ ಹಣದ ಡಬ್ಬಿಯನ್ನು ನೆಳೆದುಕೊಂಡು ಇಟ್ಟರು ! ಅಂದಿನಿಂದ ಕೃಷ್ಣರಾಯರು ತಮ್ಮ ಸ್ವಂತ ಖರ್ಚಿನಿಂದ ಯಾರ ಸಹಾಯವಿಲ್ಲದೆ, 'ನೀನೇ ಗತಿ ' ಎಂದು ದೇವರನ್ನು ನಂಬಿ ಆ ಆಸ್ಪತ್ರೆಯನ್ನು ನಡೆಸುತ್ತಿದ್ದಾರೆ ಈಗ ಈ ಸಾಹುಕಾರದುಗಳು ಮುಖ ಕೆಳಗೆ ಹಾಕಿಕೊಂಡು ತಿರುಗಾಡುತ್ತಾರೆ " ಎಂದು ಹುರುಪಿನಿಂದ ಹೊನ್ನಪ್ಪಯ್ಯ ಒಂದು ಕತೆಯನ್ನೇ ಹೇಳಿದರು ಅದನ್ನು ಕೇಳುವಾಗ ಶಂಕರ ಪುಣ್ಯಕಥೆಯನ್ನು ಕೇಳುವ ಶ್ರದ್ಧೆಯಿಂದ ಗುರು ಗುಮ್ಮಗೆ ಕುಳಿತಿದ್ದ ಈ ಕತೆಯನ್ನು ಹೇಳಿದ ಮೇಲೆ ಹೊನ್ನಪ್ಪಯ್ಯ " ಮಾಡಿದರೆ ಅವರ ಹಾಗೆ ದೇಶಸೇವೆ ಮಾಡಬೇಕು " ಎಂದು ಹೇಳಿದರು ಅವರಿಗೆ ಶಂಕರನ ಮಾತುಗಳಲ್ಲಿ ಮೊದಮೊದಲು ಅರ್ಥವಿಲ್ಲೆಂದು ಅನಿಸಿದರೂ ಕೊನೆಕೊನೆಗೆ ಅವನಲ್ಲೂ ಹುರುಳಿದೆಯೆಂದು ಖಾತ್ರಿಯಾಯಿತು

ಅಂದಿನ ದಿನ ಕಳೆಯಿತು ಮರುದಿನ ತಾಯಿಮಗ ಸೇರಿಕೊಂಡು ತಮ್ಮ ಮನೆಯನ್ನು ಪ್ರವೇಶಿಸಿದರು ನಿನ್ನೆಯ ರಾತ್ರಿ ಇಡೀ ಸುಬ್ಬಮ್ಮ ನಿದ್ರೆ ಮಾಡಿರಲಿಲ್ಲ ಅವಳ ತಲೆಯಲ್ಲಿ ಸಾವಿರಾರು ಕನಸುಗಳು ಕಟ್ಟಡ ಕಟ್ಟುತ್ತಿದ್ದವು " ಮಗನಿಗೆ ಎಲ್ಲಿಯ ಹೆಣ್ಣು ತರಲಿ ? " ಎಂಬುದು ಜಟಿಲವಾದ ಸಮಸ್ಯೆಯಾಗಿಯೇ ಪರಿಣಮಿಸಿತು ಅವಳಿಗೆ ಆದಕ್ಕಾಗಿ ರಾತ್ರಿಯಲ್ಲೇ ಕೇಳಿದಳು—ಸಾವಿತ್ರಿಯೊಡನೆ, " ನಿನ್ನ ಗೊತ್ತಿನಲ್ಲಿ ಯಾವಾವ

ಕನ್ನೆಯರಿದ್ದಾರೆ ಹೇಳು ಸಾವಿತ್ರಿ ” ಎಂದು

“ ನಾವು ಯಾಕೆ ಕನ್ನೆ ಹುಡುಕಲು ಹೋಗಬೇಕು ಸುಬ್ಬೀ ? ಸ್ವಲ್ಪ ತಡಿ, ನಾಲ್ಕಾರು ದಿನಗಳು ದಾಟಲಿ, ಆಮೇಲೆ ನೋಡು — ಜಾತಕಗಳ ರಾಶಿಯೇ ಬಂದು ಬೀಳುತ್ತದೆ ನಿನ್ನ ಪಾದದ ಬುಡದಲ್ಲಿ ಹುಡುಗ ಸ್ವಲ್ಪ ದುಡ್ಡು ಮಾಡಿದ್ದಾನೆಂದು ಊರಿನವರಿಗೆ ತಿಳಿಯಿತೆಂದರೆ ಸಾಕು ಆ ಸುದ್ದಿ ಹಬ್ಬಲಿಕ್ಕೆ ಬಹಳ ಸಮಯಬೇಡ ” ಎಂದು ಸಾವಿತ್ರಿ ಉತ್ತರಿಸಿದಳು

ಸಾವಿತ್ರಿ ಸುಬ್ಬಿಯರ ಸಂಭಾಷಣೆಯನ್ನು ಚಾಚೂ ತಪ್ಪದೆ ಕೇಳಿದ ವಳೆಂದರೆ ಸುಮತಿ ಅವಳಾದರೂ—ಮನಸ್ಸಿನಲ್ಲಿ ಯಾರೊಡನೆಯೋ ಸಂಭಾಷಣೆ ನಡೆಸಿದ್ದಳು

ಸುಬ್ಬಮ್ಮ ಹೇಳಿದ ಕೊನೆಯ ಮಾತು ಸುಮತಿಯ ಕಿವಿಯಲ್ಲಿ ಸರ್ರನೆ ಹೋಯಿತು “ ಸಾಯುವುದರೊಳಗೆ ಶಂಕರನ ತಲೆಗೆ ಅಕ್ಕಿಕಾಳು ಹಾಕ ಬೇಕೆಂಬ ಆಸೆ ” ಎನ್ನುವುದೇ ಆಕೆಯ ಕೊನೆಯ ಬಯಕೆ, ಮಾತು

೪

ಸಂಜೀವಿಗೆ ಪ್ರೇತಬಾಧೆಯಾಗಿತ್ತು ಎಂಬುದು ಅಣ್ಣಪ್ಪಯ್ಯನವರ ಮತ ಅದನ್ನು ಅವರು ಅಳಿಯನ ಮಂತ್ರ ಉಪಯೋಗಿಸಿ ನಿವಾರಿಸಿದ್ದರು ಅಷ್ಟೇ ಅಲ್ಲ ಆ ಅಬ್ಬಿಯಲ್ಲಿ ಬಿದ್ದು ಸತ್ತ ಮನುಷ್ಯನ ಹೆಣವನ್ನು ಸುಟ್ಟಲ್ಲಿಗೆ ಹೋಗಿ, ಮೆಟ್ಟು ಹಾಕಿದ ಕಾಲುಗಳಿಂದ ಬಲವಾಗಿ ಒದ್ದು ಒದ್ದು ಬಂದಿ ದ್ದರು “ ಎಷ್ಟು ರಾಪುತ್ತಿ ನೀನು ? ನಿನ್ನನ್ನು ಇನ್ನು ಮುಂದೆ ಎಲ್ಲಿಯಾ ದರೂ ಕಂಡೆನಾದರೆ ನಿನ್ನ ಗತಿಯೇ ಬೇರೆ ಮಾಡುತ್ತೇನೆ ನಾಚಿಗೆ ಇಲ್ಲದ ವನೇ, ನನ್ನ ಮಗಳಿಗೆ ಹೆದರಿಸಿದಿಯಾ ? ” ಎಂದು ಆ ಪ್ರೇತಕ್ಕೆ ಬಯ್ದೂ ಆಗಿತ್ತು ಅಣ್ಣಪ್ಪಯ್ಯನವರಿಗ ಹೆದರಿಯೇ ಆ ಪ್ರೇತ ಮುಂದೆ ಯಾರಿಗೂ ಪೀಡಿಸಲಿಲ್ಲವೆಂದು ಹೇಳಬಹುದು ಆಮೇಲೆ ಎಷ್ಟೋ ಸಲ ಸಂಜೀವಿಯೇ ಅಲ್ಲಿಗೆ ಹೋಗಿದ್ದಳು ಅವಳಿಗೂ ಅದರ ಬೆದರಿಕೆಯಾಗಲಿಲ್ಲ ಅಂದು

ಅಂದರೆ, ಅವರು ತಿನ್ನುವುದರಲ್ಲೂ ನಿಯಂತ್ರಣ—ನಿಯಮಗಳನ್ನು ಅನುಸರಿಸುತ್ತಿದ್ದರೆಂಬುದು ನಿಜ ಅವರ ಆ ಸ್ವಭಾವ ಬೇರೆಯವರ ಕಣ್ಣಿಗೆ ಸರಿದೋರುತ್ತಿರಲಿಲ್ಲ ಅಷ್ಟೇಕೆ ದೂರ ಹೋಗಬೇಕು ? ಸ್ವತಃ ಅವರ ಮಗ ಇದ್ದಾನಲ್ಲ ರಾಮದಾಸ, ಅವನಿಗೂ ಅವರ ಆ ಸ್ವಭಾವ ಸರಿಯೆಂದು ಅನಿಸುತ್ತಿರಲಿಲ್ಲ ಯಾಕಂದರೆ, ಅವರ ಮನೆಯಲ್ಲಿ ಅಡುಗೆ ಮಾಡಿದರೆ ಅವರಿಗೆ ಎಷ್ಟು ಬೇಕೋ ಅಷ್ಟೇ ಹೊರತು, ಫಕ್ಕನೆ ಯಾವನಾದರೂ ಒಬ್ಬವನು ತಿಥಿ, ವಾರ, ಇಲ್ಲದೆ ಅತಿಥಿಯೆಂಬ ಹೆಸರಿಗೆ ಸರಿಯಾಗಿ ಬಂದನೆಂದರೆ— ಅವನಿಗೆ ಪ್ರತ್ಯೇಕ ಅಡುಗೆ ಮಾಡಬೇಕಾಗುತ್ತಿತ್ತು ಒಟ್ಟಿನಲ್ಲಿ ಅವರ ಮನೆಯ ಅನ್ನದ ಗಡಿಗೆಯಲ್ಲಿ ಮೂರು ಜನರಿಗೆ ಸಾಲುವಷ್ಟು ಅನ್ನ ಬೇಯುತಿತ್ತೇ ವಿನಾ ನಾಲ್ಕನೆಯವನು ಬಂದರೆ ಹಿಂದೆ ಹೋಗುವ ಪ್ರಸಂಗ ತಪ್ಪುತ್ತಿದ್ದಿಲ್ಲ ಅವರ ಮನೆಗೆ ಬರುವ ಅತಿಥಿಗಳೂ ಬಹಳವಿರಲಿಲ್ಲ ಒಂದುವೇಳೆ ಅತಿಥಿಗಳಾಗಿ ಹೋದರೂ ಅಲ್ಲಿ ಊಟಕ್ಕೆ ಕೂಡುವ ಯೋಚನೆಯನ್ನು ಅಲ್ಲೇನು ಅವರು ಮಾಡುತ್ತಿರಲಿಲ್ಲ ಅಣ್ಣಪ್ಪಯ್ಯನವರ ವ್ಯವಸ್ಥೆ ಅಷ್ಟು ಚೊಕ್ಕಾಗಿತ್ತು ಮನೆಯಲ್ಲಿ ಮಗಳು ಇದ್ದರೂ ಅಡುಗೆ ಮಾಡುವ ಹೊರೆಯನ್ನು ಅವಳ ಮೇಲೆ ಹಾಕುವುದು ಅವರಿಗೆ ಸರಿಯೆನಿಸದು ಅವಳು ಮಾಡಿದ ಅಡುಗಯೂ ತಮ್ಮ ಕೈಯಿಂದ ಬೇಯಿಸಿದಷ್ಟು ಶುಚಿ—ರುಚಿಯೆಂಬ ಭಾವನೆ ಬರುವುದು ಕಷ್ಟ ಅನಿವಾರ್ಯ ಪ್ರಸಂಗಗಳಲ್ಲಿ ಮಗಳು ಮನೆಗೆಲಸ ಮಾಡಬೇಕೆಂಬುದು ಅವರ ಉದ್ದೇಶವೋ ತಿಳಿಯದು ಅಥವಾ ತಾನೇ ಎಲ್ಲವನ್ನೂ ಮಾಡಬೇಕೆಂಬ ಹಂಬಲ ಎಂದರೂ ಸರಿಯೆ ಒಟ್ಟಾರೆ ಅವರಿಗೆ ಕೆಲಸವಿಲ್ಲದೆ ಕೂಡುವುದಕ್ಕೆ ಸಾಧ್ಯವಿಲ್ಲ ಆದರೆ ಮಗಳು ಮಾತ್ರ ಆ ಅವರ ಹುರುಪಿಗೆ ಅಡ್ಡ ಬಾರದೆ ಇಲ್ಲ

"ನಾನು ಹೆಣ್ಣಾಗಿ ಹುಟ್ಟಿದ್ದು ಯಾಕೆ ? ನಿನ್ನನ್ನು ಹೀಗೆ ಅಡುಗೆ ಮನೆಯಲ್ಲಿ ಹೆಂಗಸರಂತೆ ಹೊಗೆಯಲ್ಲಿ ಕಣ್ಣೀರು ಸುರಿಸಲಿಕ್ಕೇ ? ನೀನು ಬೇಯಿಸಿದ್ದನ್ನು ನಾನು ಉಣ್ಣುವುದೇ ? " ಎಂದು ಸಂಜೀವಿ ಹಲವಾರು ಸಲ ತಂದೆಗೆ ತಿಳಿವನ್ನು ಹೇಳಬೇಕಾಗುತ್ತಿತ್ತು ಮಳೆಗಾಲದಲ್ಲಿ ಒಮ್ಮೊಮ್ಮೆ ಅಡುಗೆ ಮಾಡುವಾಗ ಮನೆಯಲ್ಲಿ ಹೊಗೆ ತುಂಬುತ್ತಿತ್ತು ಆಗ ಅಣ್ಣಪ್ಪಯ್ಯ ಕೂಡಲೇ ಒಳಗೆ ಬಂದು ಒಲೆಯತ್ತ ಬಗ್ಗಿ 'ಪೂ, ಪೂ' ಎಂದು ಊದಿಯೇ

ಊದುತ್ತಿದ್ದರು ಮಗಳು "ಬೇಡ" ಎಂದರೂ ಕೇಳುವುದಿಲ್ಲ ಎಷ್ಟೋ ಸಲ ಅವರು ಎಷ್ಟು ಊದಿದರೂ ಬೆಂಕಿ ಉರಿಯುತ್ತಿರಲಿಲ್ಲ

ಕೊನೆಗೆ ತಮ್ಮ ಪರಾಭವವನ್ನು ಒಪ್ಪಿಕೊಂಡು ಹೊರಗೆ ಬರುತ್ತಿದ್ದರು ಬಂದವರೇ ಹೊರಗಿನಿಂದ ಚಿಮಣಿ ಎಣ್ಣೆಯ ಬಾಟ್ಲಿಯನ್ನು ಒಯ್ದು ಸ್ವಲ್ಪ ಎಣ್ಣೆಯನ್ನು, ತೀರ್ಥ ಕೊಟ್ಟಂತೆ—ಕಟ್ಟಿಗೆಯ ಮೇಲೆ ಚೆಲ್ಲಿ, ಬೆಂಕಿ ಹೊತ್ತಿಸಿ ಕೊಡುತ್ತಿದ್ದರು—ಮಗಳಿಗೆ ಒಡನೆ ಅವರ ತಲೆಯಲ್ಲೊಂದು ವಿಚಾರ ಹೊಳೆಯುತ್ತಿತ್ತು "ಎಲ್ಲಿ ಇವಳು ಹೀಗೆ ದಿನವೂ ಚಿಮಣಿ ಎಣ್ಣೆ ಒಲೆಗೆ ಆಹುತಿಕೊಡುತ್ತಾಳೋ!" ಎಂಬ ಸಂಶಯ ಬರುತ್ತಿತ್ತು— ಅವರಿಗೆ ಅದಕ್ಕಾಗಿ, "ಚಿಮಣಿ ಎಣ್ಣೆ ಬಾಟ್ಲಿಗೆ ಎರಡಾಣೆ ಸಂಜೀವೀ, ಈ ಒಲೆ ಯೊಂದು ಚೆನ್ನಾಗಿ ಉರಿಯುವುದಿಲ್ಲ!" ಎಂದು ಹೇಳುತ್ತಿದ್ದರು. ಆದರೆ ಸಂಜೀವಿ ಎಂದೂ ಅಂಥ ಸುಲಭೋಪಾಯದಿಂದ ಒಲೆ ಉರಿಸುವ ಹಂಚಿಕೆ ಹೂಡಿದವಳಲ್ಲ ಅವಳಿಗಾದರೂ ಅಣ್ಣಪ್ಪಯ್ಯನವರಿಗಿಂತ ಹೆಚ್ಚಿನ ಮನೆಯ ಕಾಳಜಿ ಇದೆ "ನೀನು ಯಾಕೆ ಚಿಮಣಿ ಎಣ್ಣೆ ಸುರಿಯುತ್ತಿ?" ಎಂದು ಅವಳೇ ಇವರಿಗೆ ಕೇಳುತ್ತಿದ್ದಳು ಮಗಳ ಜಾಣ್ಮೆ, ಮುಂದಾಲೋಚನೆ ಗಳನ್ನು ಕಂಡು ಅಣ್ಣಪ್ಪಯ್ಯ ಹಿಗ್ಗುತ್ತಿದ್ದರು ಹೊರತು ತಾನು ಅವಳಬಗ್ಗೆ ತಪ್ಪು ತಿಳಿದುಕೊಂಡೆನೆಂದು ಪಶ್ಚಾತ್ತಾಪ ಪಡುವುದು ವಿರಳ "ಇವಳಂತಹ ಬುದ್ಧಿ ಆ ರಾಮದಾಸನಿಗೂ ದೇವರು ಕೊಟ್ಟಿದ್ದರೆ!" ಎಂದು ಅವರು ಆ ಹೊತ್ತಿನಲ್ಲಿ ನೆನೆಸದೆ ಇಲ್ಲ ಅವನ ದರ್ಬಾರು, ದುಂದುಗಾರಿಕೆಗಳು ಇವರಿಗೆ ಸೇರಿಕೆಯಾಗವು ಆದರೆ ಅವನು ಇವರು ಹೇಳಿದಂತೆ ಕೇಳುವುದು ಕಷ್ಟ. ಇವರು ಎಷ್ಟು ಹೇಳಿದರೂ ಅಷ್ಟೇ ಅವನು ಸ್ವತಂತ್ರ ಜೀವಿ ತಾನೇ? ಅವನ ಮಟ್ಟಿಗೆ ಅವನು ಸ್ವತಂತ್ರನೆಂದು ತಿಳಿದುಕೊಂಡಿದ್ದಾನೆ. ಅಣ್ಣಪ್ಪಯ್ಯ ನವರ ಕಣ್ಣಿಗೆ ಅವನಿನ್ನೂ ಸಣ್ಣವನಾಗಿಯೇ ಕಾಣುತ್ತಾನೆ ಅವರು ಅವ ನನ್ನು ಇನ್ನೂ ಪರಾವಲಂಬಿಯೆಂದು ತಿಳಿದಿದ್ದರು

ಅಲ್ಲದೆ "ನಿನ್ನ ಕೈಯಿಂದ ನೀನು ದುಡಿದು ತಿನ್ನುವಾಗ ತಿಳಿಯುತ್ತದೆ" ಎಂದು ಮಗನಿಗೆ ಹೇಳುವ ರೂಢಿಯು ಅವರಲ್ಲಿ ಸದಾ ನೆಲೆಸಿತ್ತು ಅದೇ ಪ್ರಕಾರ ಅವರ ದೃಷ್ಟಿಯಲ್ಲಿ ಆತ ಪ್ರಾಥಮಿಕ ಸಾಲೆಯ ಉಪಾಧ್ಯಾಯನಾಗಿ ತಿಂಗಳಿಗೆ ಇಪ್ಪತ್ತೈದು ರೂಪಾಯಿಗಳ ಸಂಬಳ ಪಡೆಯುತ್ತಿದ್ದರೂ, ಹಣ ಗಳಿ

ಸುತ್ತ ಇಲ್ಲ ಎಂಬುದು ಖಂಡಿತವಾಗಿತ್ತು ಯಾಕಂದರೆ ಅವನು ಒಮ್ಮೆಯೂ ಇವರಿಗೆ ತನ್ನ ಸಂಬಳದಿಂದ ಹಣ ಕೊಟ್ಟಿರಲಿಲ್ಲ ಬದಲು ತನ್ನ ಕೈಯಲ್ಲಿ 'ನಾಲ್ಕು ದುಡ್ಡು' ಕೂಡಿಸಿಟ್ಟ ಕುರುಹನ್ನೂ ಅಣ್ಣಪ್ಪಯ್ಯನವರಿಗ ಆತ ಕಾಣಿಸಿರಲಿಲ್ಲ

ಸಾಲೆ ಇರಲಿ–ಇಲ್ಲದಿರಲಿ ರಾಮದಾಸ ಕತ್ತಲೆಯಾಗದೆ ಮನೆಗೆ ಬರುತ್ತಿರಲಿಲ್ಲ ಅದಕ್ಕಾಗಿ ತಂದೆಯಿಂದ ಬೈಗಳನ್ನು ಆತ ಹಿಂದಿನಿಂದ ಕೇಳಬೇಕಾಗಿತ್ತು ಅಣ್ಣಪ್ಪಯ್ಯ ಎಂದೂ ಮಗನಿಗೆ ಎದುರಲ್ಲೆ ನಿಂತು ಬೈಯುವವರಲ್ಲ ಅವರು ಹಾಗೆ ಬುದ್ಧಿ ಹೇಳುವುದು ಅವನು ಮನೆಯಲ್ಲಿ ಇಲ್ಲದಾಗ ಆ ರೀತಿ ಗುಣುಗುಟ್ಟುವುದು ಸಂಜೀವಿಯ ಎದುರಿನಲ್ಲಿ ಅವಳೊಡನೆಯೇ ಮಗನಿಗೆ ಎಷ್ಟು ಬೇಕೋ ಅಷ್ಟು ಬುದ್ಧಿಮಾತನ್ನು ಹೇಳುವುದು ಅದನ್ನು ರಾಮದಾಸನಿಗೆ ಹೇಳುತ್ತಾಳೆಂದು ಅವರಿಗೆ ಗೊತ್ತಿದ್ದು ಆ ಪ್ರಕಾರ ಮಂತ್ರ ಹಾಕುತ್ತಿದ್ದರೆಂದು ಕಾಣುತ್ತದೆ ಅವಳಾದರೂ ದಾಸನಿಗೆ ತಂದೆ ಹೇಳಿದುದನ್ನೆಲ್ಲ ತಿಳಿಸದೆ ಇಲ್ಲ ಆತ ಅದಕ್ಕೆಲ್ಲ ಕಿವಿಗೊಡುವವನಲ್ಲ ಬದಲು ತಂದೆಯ ತಪ್ಪುಗಳನ್ನೇ ಸಂಜೀವಿಗೆ ತಿಳಿಸಿಕೊಡುತ್ತಿದ್ದ "ಅವನು ದಿನವಿಡಿಯೂ ಎಷ್ಟು ದುಡಿಯುತ್ತಾನೆ ದಾಸಾ! ನಿನಗೆ ಅಷ್ಟೂ ತಿಳಿಯುವುದಿಲ್ಲವೇ? ಸಂಬಳದಲ್ಲಿ ಒಂದು ಪೈಯನ್ನೂ ಮನೆಗೆ ಮುಟ್ಟಿಸುವುದಿಲ್ಲವಂತೆ! ನೀನು ಇನ್ನೂ ಚಿಕ್ಕವನೇ? ಇನ್ನು ಇದೇ ಒಂದು ವರುಷ ಮುಂದಿನ ವರುಷ ನಿನಗೆ ಮದುವೆ ಮಾಡಬೇಕೆಂದು ಹೇಳುತ್ತಾನೆ ಅವನು ಇಷ್ಟೆಲ್ಲ ಮಾಡುವುದು ಯಾರಿಗಾಗಿ? ಅವನೇನು ಸಾಯುವಾಗ ಹಣ ಒಯ್ಯುತ್ತಾನೋ? ಅವನು ಮಾಡಿದ್ದೆಲ್ಲ ನಿನಗೇ ಉಳಿಯುತ್ತದೆ" ಎಂದು ಆಕೆ ಇವನಿಗೆ ಬುದ್ಧಿ ಹೇಳುತ್ತಿದ್ದಳು ಹೀಗೆ ಅವಳು ಅವನೊಡನೆ ಮಾತಾಡಬೇಕಾದರೂ ಎಷ್ಟೋ ದಿನಗಳ ಪರ್ಯಂತ ತಕ್ಕ ಸಂಧಿಯನ್ನು ಕಾಯಬೇಕಾಗುತ್ತಿತ್ತು ಯಾಕಂದರೆ ತಂದೆ ಮನೆಯಲ್ಲಿ ಇಲ್ಲದಾಗ ಇವಳು ಅವನೊಡನೆ ಆ ವಿಷಯ ಪ್ರಸ್ತಾಪಿಸಬೇಕು ಸಂಜೀವಿ ಎಂದಾದರೂ ಮೇಲಿನಂತೆ ಉಪದೇಶಿಸತೊಡಗಿದರೆ ದಾಸ ಹೇಳುವ ಮಾತುಗಳೂ ಒಂದೇ ಆಗಿದ್ದವು ಆಕೆ "ಅಪ್ಪ ಎಷ್ಟೆಲ್ಲ ಕಷ್ಟಪಡುತ್ತಾರೆ!" ಎಂದು ಪರಿತಾಪ ಪಟ್ಟರೆ ಇವನು—

"ಅಷ್ಟೆಲ್ಲ ಕಷ್ಟಪಡಲಿಕ್ಕೆ ಯಾರು ಹೇಳುತ್ತಾರೆ? ಸುಮ್ಮನೆ ಕೂತು

ಕೊಂಡು ಇದ್ದಷ್ಟನ್ನೇ ತಿನ್ನಬಾರದೇ ? ಪೂರ್ವಾರ್ಜಿತದಿಂದ ಬಂದ ಆಸ್ತಿ ಯಿಂದ ಬಂದದ್ದನ್ನ ಬೇಕಾದ ಹಾಗೆ ರಾಜನಂತೆ ಕೂತು ಉಂಡು ಜೀವನ ಸಾಗಿಸಬಹುದು ! ಅದೆಲ್ಲ ಬಿಟ್ಟು ಇಂಥ ಹೀನ ಕೆಲಸಗಳನ್ನು ಅವರೇಕೆ ಮಾಡಬೇಕು ? ಅದೆಲ್ಲ ಹೋಗಲಿ, ಮನೆಯಲ್ಲಿ ಅಡುಗೆ ಮಾಡಲಿಕ್ಕೆ ನೀನು ಇರುವಾಗ ಯಾಕೆ ಅವರು ಅದನ್ನು ಮೈಮೇಲೆ ಹಾಕಿಕೊಳ್ಳಲು ಹಾತೊರೆಯ ಬೇಕು ? " ಎಂದು ಅವಳಿಗೇ ಪ್ರಶ್ನಿಸುವುದುಂಟು

ಸಂಜೀವಿಗೂ ತಮ್ಮನ ಅಭಿಪ್ರಾಯಗಳು ಸರಿಯೆಂದು ಅನಿಸುತ್ತಿತ್ತು ಆದರೆ ಆಕೆ ತಂದೆಯನ್ನು ಟೀಕಿಸಿ, ಅವನು ಹಾಗೆ ದುಡಿಯುವುದು ಅಸಮಾ ಧಾನಕರವೆಂದು ವ್ಯಕ್ತಪಡಿಸಲಾರಳು ಅವಳು ತಂದೆಯ ಆ ಸ್ವಭಾವಗಳು ಕ್ಷುದ್ರವೆಂದು ಪರಿಗಣಿಸಲಾರಳು ಅವುಗಳಿಗೂ ಹಿರಿಮೆ ಇದೆಯೆಂಬುದು ಅವಳಿಗೆ ಗೊತ್ತು ತಮ್ಮನಿಗೆ ಅದಕ್ಕಾಗಿ, " ಮೈಮುರಿದು ದುಡಿಯುವುದು ಅವನ ಸ್ವಭಾವ ಮೊದಲಿನ ಕಾಲದ ಜನ ಅವನು ಅವನಿಗೆ ಈಗಿನವರಂತೆ ಸೋಮಾರಿಯಾಗಿರುವುದು ಮನಸ್ಸಿಗೆ ಬಾರದು ಅವನು ಯಾವಾಗಲೂ ಮೈಪುಡಿ ಮಾಡಿಕೊಂಡೇ ಇರುತ್ತಾನೆ ಅದಕ್ಕೆಂದೇ ಅವನ ದೇಹ ಈಗಲೂ ಹೀಗಿದೆ ಇಲ್ಲದಿದ್ದರೆ ಈಗಿನ ಕಾಲದವರ ಹಾಗೆ ಅವನೂ ಕುಳ್ಳನಾಗುತ್ತಿದ್ದ ಏನು ಮಾಡುವುದು ? ಮೊದಲಿನ ಜನರಿಗೆ ಸ್ವಲ್ಪ ' ಸೂಕ್ಷ್ಮ ' ಹೆಚ್ಚು ಪ್ರತಿಯೊಂದರಲ್ಲೂ ಅವರಿಗೆ ಸೂಕ್ಷ್ಮತೆ ಇರಬೇಕು ಅದನ್ನು ನಾವು ಜಿಪುಣ ತನ ಎಂದು ದೂಷಿಸಿದರೆ ನಮ್ಮದೇ ಮೂರ್ಖತನ " ಎಂಬ ವಿವೇಕವನ್ನೂ ಹೇಳಿಕೊಡುತ್ತಿದ್ದಳು

ಮಗನಿಗೆ ಬೈದು ಬುದ್ಧಿ ಹೇಳುವ ಗೋಜಿಗೆ ಹೋಗುವುದನ್ನು ಬಿಟ್ಟು ಅಣ್ಣಪ್ಪಯ್ಯ ಎಷ್ಟೋ ವರುಷಗಳಾದವು ಒಟ್ಟಿನಲ್ಲಿ ಅವನ ಎದುರಿಗೆ ಅವ ನನ್ನು ಹಳಿಯಲಾರರು ಹೀಗೆ ಮಾಡಲು ಪ್ರಾರಂಭಿಸಿದ್ದು ರಾಮದಾಸ ಒಂದು ನೌಕರಿ ದೊರಕಿಸಿಕೊಂಡ ಮೇಲೆ ಅಥವಾ ಆತ ಕಾರ್ಕಳದಲ್ಲಿ ಕಾಲೇಜು ಕಲಿಯಲು ಆರಂಭಿಸಿದ ಮೇಲೆ ಎನ್ನಬಹುದು ಪ್ರಾಥಮಿಕ ಸಾಲೆಯ ಉಪಾಧ್ಯಾಯನಾಗಲು ಟ್ರೇನಿಂಗ (Training) ಪಡೆಯಲು ಕಾರ್ಕಳ ದಲ್ಲಿ ಆತ ಕಳೆದ ದಿನಗಳು ಚಿರಸ್ಮರಣೀಯವಾದ ದಿನಗಳು ಯಾಕಂದರೆ ಅಣ್ಣಪ್ಪಯ್ಯ ಒಂದು ಪೈ ಕೂಡಾ ಮಗನ ವಿದ್ಯಾಭ್ಯಾಸಕ್ಕಾಗಿ ಗಂಟು ಬಿಚ್ಚ

ಲಿಲ್ಲ ಅದನ್ನೆಲ್ಲ ಆತ ತಾಯಿಯ ಕಡೆಯಿಂದ ಪಡೆದನೆಂದರೂ ತಪ್ಪಾದೀತು ಅವಳಾದರೂ ಅಷ್ಟೆಲ್ಲ ಹಣ ಎಲ್ಲಿಂದ ಕೊಟ್ಟಾಳು ? ಆಕೆ ಅವನು ಪೂರ್ಣ 'ಟ್ರೇನಿಂಗ' ಮುಗಿಸುವುದರೊಳಗೆ ಪರಲೋಕವಾಸಿಯಾದಳು ಅಂದಿನಿಂದಲೇ ರಾಮದಾಸನಿಗೆ ತಂದೆಯ ಮೇಲೆ ಅಸಮಾಧಾನವೆನಿಸಿತ್ತು ಆದರೆ ಅದನ್ನೆಲ್ಲ ಬಾಯಲ್ಲಿ ಅವರೆದುರು ಆತ ಆಡಿತೋರಿಸಿರಲಿಲ್ಲ

ಅವರಾದರೂ ಅವನೊಡನೆ ಎದುರಿನಲ್ಲಿ ಚೆನ್ನಾಗಿ ಮಾತಾಡುತ್ತಿದ್ದರು ಆದರೆ ಹಣದ ವಿಷಯದಲ್ಲಿ ಮಾತ್ರ ಅವರಿಗೆ ಯಾವಾಗಲೂ ಎಚ್ಚರಿಕೆ ಬಹಳ. ಮಗ ದೊಡ್ಡವನಾಗಬೇಕು ವಂದೆ ಬರಬೇಕು, ದೊಡ್ಡ ಜಜ್ಜನಾಗಬೇಕು— ಎಂಬ ಅನೇಕ ಅಭಿಲಾಷೆಗಳು ಅವರಿಗಿದ್ದವು ಹಣಕೊಡುವಾಗ ಅವರಿಗೆ ಚಳಿಜ್ವರ ಬಂದಂತೆ ನಡುಗು ಹುಟ್ಟುತ್ತಿತ್ತು ವರುಷಕ್ಕೆ ಮೂವತ್ತು ನಾಲ್ವತ್ತು ರೂಪಾಯಿ ಅವರು ಕೈಬಿಟ್ಟರೆ ದೇವರ ಪುಣ್ಯ ಅದೆಲ್ಲ ಹಿಂದಿನ ಸುದ್ದಿಯಾಯಿತು ಆಗ ಹೇಗಾದರೂ ಕಷ್ಟಪಟ್ಟು ಕಲಿತು ರಾಮದಾಸ ದಡ ಸೇರಿಯಾಯಿತು ಆದರೆ ಈಗಿನ ಸಮಸ್ಯೆಗಳೇ ಬೇರೆ ಅರ್ಥಾತ್ ಅಣ್ಣಪ್ಪಯ್ಯನವರ ಮನಸ್ಸಿನೊಳಗೆ ಏನೋ ಒಂದುತರಹದ ದುಗುಡವಿದೆ, ರಾಮದಾಸನ ಮನದಲ್ಲೂ ಯಾವುದೋ ಒಂದು ತಂದೆಯ ಅಪರಾಧ ಹುದುಗಿದೆ ಆದರೆ ಇಬ್ಬರೂ ಮನದಲ್ಲೆ ಅದನ್ನು ಇಟ್ಟುಕೊಂಡು ದಿನಗಳೆಯುತ್ತಿದ್ದಾರೆ.

ಹಾಗೆಂದು ಪ್ರತಿದಿನವೂ ತಂದೆ ಮತ್ತು ಮಗ ಕೂತುಕೊಂಡು ಹರಟೆ ಹೊಡೆಯದೆ ಇಲ್ಲ ಮಗ ಹೋಗುವ ಸಾಲೆಯ ವಿಷಯದಲ್ಲಿ ಯಾವಾಗಲೂ ಅಣ್ಣಪ್ಪಯ್ಯ ಉತ್ಸಾಹಿಗಳಾಗಿಯೇ ಇರುತ್ತಾರೆ ಅದರ ಬಗ್ಗೆ ಅವನೊಡನೆ ದಿವಸಕ್ಕೆ ಒಮ್ಮೆಯಾದರೂ ಮಾತೆತ್ತದಿದ್ದರೆ ಅವರಿಗೆ ನಿದ್ದೆ ಬೀಳದು ಕೊನೆಗೆ ರಾತ್ರಿ ಮಲಗಿಕೊಂಡ ಮೇಲಾದರೂ " ಇವತ್ತು ಸಾಲೆಯಲ್ಲಿ ಯಾವ ಹುಡುಗನಿಗಾದರೂ ಪೆಟ್ಟುಕೊಟ್ಟೆಯಾ ? " ಎಂದು ಕೇಳದೆ ಇಲ್ಲ

ಅಷ್ಟೇ ಅಲ್ಲ, " ನಿನಗೆ ಆ ಹೆಡ್ಡಮಾಸ್ತ್ರ ( Head Master ) ಕೆಲಸ ಸಿಗಲಿಕ್ಕಿಲ್ಲವೋ ? ಪ್ರಯತ್ನ ಮಾಡು " ಎನ್ನುವುದೂ ಅಣ್ಣಪ್ಪಯ್ಯನವರ ಮಾತುಗಳಲ್ಲಿ ಒಂದು ಒಮ್ಮೊಮ್ಮೆ ಬೆಳಿಗ್ಗೆ ರಾಮದಾಸ ಲೆಕ್ಕ ಮಾಡುತ್ತ ಕುಳಿತಿದ್ದರೆ, ಅಲ್ಲಿಗೂ ಅಣ್ಣಪ್ಪಯ್ಯ ಕಣ್ಣಿಗೆ ಕನ್ನಡಕ ಹಾಕಿಕೊಂಡು ಬಂದು ಇಣಿಕಿ ನೋಡುತ್ತ, "ನೋಡೋಣ, ಅದೇನು ? " ಎಂದು ಕೇಳುವುದುಂಟು

ಆಗ ದಾಸ ಲೆಕ್ಕದ ಪುಸ್ತಕವನ್ನು ತಂದೆಗೆ ತೋರಿಸಿ, ಅದರಲ್ಲಿಯ ಯಾವುದಾದರೂ ಒಂದು ಲೆಕ್ಕವನ್ನು ಬೆರಳು ಮಾಡಿ, " ಈ ಲೆಕ್ಕ ಮಾಡುತ್ತಾ ಇದ್ದೇನೆ" ಎಂದು ಹೇಳುವನು ಅಣ್ಣಪ್ಪಯ್ಯ ತಾವೂ ಅದನ್ನು ಓದಿ ಅರ್ಥ ಮಾಡಿಕೊಂಡು, " ನೋಡೋಣ ಸ್ಲೇಟು ತಾ, ನನಗೆ ಬರುತ್ತದೆಯೋ " ಎಂದು ಅನ್ನುತ್ತಾ ಸ್ಲೇಟಿನ ಮೇಲೆ ಲೆಕ್ಕ ಮಾಡುವರು ತಮ್ಮ ಕಾಲದಲ್ಲಿ ಈಗಿನಷ್ಟು ಸುಲಭದ ಲೆಕ್ಕಗಳು ಇರಲಿಲ್ಲ ಈಗಿನ ಹಾಗೆ ಆಗಿದ್ದರೆ ತಾವೂ ದೊಡ್ಡ ಜಜ್ಜರಾಗುತ್ತಿದ್ದರೆಂದೂ ಕೊಚ್ಚಿಕೊಳ್ಳುವರು ಮಗ ಮನಸ್ಸಿನಲ್ಲೇ ನಗುತ್ತಿದ್ದ " ಆಗಿನ ಕಾಲದಲ್ಲಿ ಈ ಸ್ಲೇಟು-ಪ್ಲೇಟು ಎಲ್ಲಿತ್ತು ? ನಾವೆಲ್ಲ ಬರೆಯುತ್ತಿದ್ದದ್ದು ಉಸುಕಿನ ಹಾಸಿಗೆಯ ಮೇಲೆ ಲೆಕ್ಕ ಮಾಡುತ್ತಿದ್ದದ್ದೂ ಅದರ ಮೇಲೆಯೇ ಫಕ್ಕನೆ ಒಂದು ಅಕ್ಷರ ತಪ್ಪಿದರೆ ಪಾದ್ರಿ ನಮ್ಮ ಬೆರಳನ್ನು ಉಸುಕಿನಲ್ಲಿ ಒತ್ತಿ ತಿಕ್ಕುತ್ತಿದ್ದ ಆಗ ಕೈಬೆರಳುಗಳು ಭಗಭಗನೆ ಉರಿಯುತ್ತಿದ್ದವು ಆಗಿನ ಕಾಲದಲ್ಲಿ ಶಿಕ್ಷೆಯೇ ಶಿಕ್ಷಣದ ಗುರು " ಎಂದು ತಮ್ಮ ಹಿಂದಿನ ಬಾಲ್ಯದ ಸ್ಮರಣೆಯನ್ನು ಹೇಳುತ್ತಿದ್ದರು

ಹೀಗೆ ರಾತ್ರಿ/ದೀಪ ಆರಿಸಿದ ಮೇಲೆ ಮಧ್ಯರಾತ್ರಿ ದಾಟುವ ತನಕವೂ ಅವರ ಮಾತುಕತೆ ನಡೆಯುತ್ತಿದ್ದವು ಅಣ್ಣಪ್ಪಯ್ಯ ರಾತ್ರಿ ಎಷ್ಟೇ ಹೊತ್ತಾಗಿ ಮಲಗಲಿ, ಬೆಳಗ್ಗೆ ಬೇಗ ಏಳುತ್ತಿದ್ದರು ಆದರೆ ರಾಮದಾಸ ಹಾಗಲ್ಲ ಅವನು ಏಳುವುದು ಅಣ್ಣಪ್ಪಯ್ಯ ತಮ್ಮ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಬಂದು, " ದಾಸಾ, ಏಳು ಏಳು ! ಇವತ್ತು ಸಾಲೆ ಇಲ್ಲವೋ ? ಸೂರ್ಯನ ಬಿಸಿಲು ಬಡೆಯುತ್ತಿದೆ ! " ಎಂದು ಹೇಳಿದ ಮೇಲೆ

ಅವರು ಎದ್ದೊಡನೆ ಒಮ್ಮೆ ತಮ್ಮ ಬಯಲು ಗದ್ದೆಗಳಿಗೆಲ್ಲ ಒಂದು ಪ್ರದಕ್ಷಿಣೆ ಹಾಕಿ, ದಾರಿಯಲ್ಲಿ ಸಿಕ್ಕವರೊಡನೆ " ಏನು ನಿಮ್ಮ ಗದ್ದೆಯ ಬೆಳೆ ಹೇಗಿದೆ ? " ಎಂದು ಮುಂತಾಗಿ ಮಾತಾಡಿ, ಒಂದು ಗಂಟೆ ವೇಳೆಯನ್ನು ಅದಕ್ಕೆ ಕಳೆದು ಮನೆ ಸೇರುವರು ಮನೆಗೆ ಬರುವಾಗಲೇ ಸಂಜೀವಿ ಒಳಗೆ ಒಲೆ ಉರಿಸುತ್ತ ಕೂತಿರುವುದು ಅವರ ಕಣ್ಣಿಗೆ ಬೀಳಬೇಕು ಇಲ್ಲದಿದ್ದರೆ ತಾನೇ ಒಲೆ ಹೊತ್ತಿಸುವರು ಆಕೆ ಒಲೆ ಉರಿಸುತ್ತ ಕೂತಿದ್ದರ ತಾವು ಕೊಬ್ಬರಿ ತುರಿಯುವರು ಅವಳು ಎಷ್ಟು ಹೇಳಿದರೂ ಕೇಳುವ ಹಾಗಿಲ್ಲ ಒಡೆದ ತೆಂಗಿನಕಾಯಿ ಇಲ್ಲದಿದ್ದರೆ ಅಟ್ಟಹತ್ತಿ, ತೆಂಗಿನಕಾಯಿ ತೆಗೆದು, ಸಿಪ್ಪೆ

ಸುಲಿದು ಆದರೂ ಕಾಯಿ ತುರಿಯಲು ಕೊಡುವರು ಒಂದು ಬಟ್ಟಲ ಕಾಯಿಯಲ್ಲಿ ಅಂದಿನ ಬೆಳಗಿನ ಉಪ್ಕರಿಯೂ ಪಲ್ಯವೂ ಮುಗಿಯಬೇಕು ಅರ್ಥಾತ್ ಒಂದು ತೆಂಗಿನಕಾಯಿ ಎರಡು ದಿನಕ್ಕೆ ಬರಬೇಕು ಆ ರೀತಿ ಮಗಳಿಗೆ ಉಪದೇಶವಾಗಿತ್ತು ಆಕೆಯಾದರೂ ಅದೇ ರೀತಿ ಮಾಡುತ್ತಿದ್ದಳು ಸರಿ, ಅರ್ಧ ಬಟ್ಟಲು ಕೊಬ್ಬರಿಯ ಸೂಸಲಿಗೆ ಒಂದು ಸೇರು ಅವಲಕ್ಕಿ ಹಾಕಿ, ಒಂದು ಉಪ್ಕರಿ ತಯಾರಾಗುತ್ತಿತ್ತು ಈ ಅವಲಕ್ಕಿಯ ಉಪ್ಕರಿಯನ್ನು ಅಣ್ಣಪ್ಪಯ್ಯನವರೇ ಮಾಡುತ್ತಾರೆ

ಸಂಜೀವಿ ಒಳಗೆ ಕಾಫಿ ಮಾಡಲು ನೀರು ಕುದಿಸುತ್ತಿದ್ದರೂ ಅವಳನ್ನು "ಅದು ತಾ, ಉಪ್ಪು ತಾ, ಮೆಣಸು ತಾ" ಎಂದು ಹೇಳಿ ಅತ್ತಿತ್ತ ಓಡಿಸಿ, ಉಪ್ಕರಿ ಮಾಡಿ ಮುಗಿಸುವರು ಆ ಮೇಲೆ ತಾವೇ ಒಳಗೆ ಹೋಗಿ "ನೀರು ಕುದಿ ಬಂತೇ?" ಎಂದು ನೀರು ಕುದಿಯುತ್ತಿದ್ದರೂ ಮಗಳಿಗೆ ಕೇಳುವರು ಆ ಕಾಫಿ ನೀರಿಗೆ ಪುಡಿ ಎಷ್ಟು ಹಾಕಬೇಕು, ಬೆಲ್ಲ ಎಷ್ಟು ಹಾಕಬೇಕು ಎಂಬುದನ್ನು ತೋರಿಸಿ ತೋರಿಸಿಯೇ ಅಣ್ಣಪ್ಪಯ್ಯ ಕಾಫಿ ಮಾಡುತ್ತಿದ್ದರೇ ಹೊರತು ಅವಳಿಗೆ ಕಾಫಿ ಮಾಡಲು ಬಿಡುತ್ತಿದ್ದಿಲ್ಲ ಹೀಗೆ ಬೆಳಗಿನ ಫಳಾಹಾರದ ತಯಾರಿ ಆಗುತ್ತದೆ ಅದನ್ನೆಲ್ಲ ತಯಾರಿಸಿಟ್ಟು ಅಣ್ಣಪ್ಪಯ್ಯ ಹೊರಗೆ ಬಂದು ಚಾವಡಿಯಲ್ಲಿ ಮಗನಿದ್ದಾನೋ ಇಲ್ಲವೋ ಎಂಬುದನ್ನು ನಿರೀಕ್ಷಿಸುತ್ತ ಹಟ್ಟಿಗೆ ಹೋಗುತ್ತಾರೆ ಬರುವಾಗ ಒಂದು ದೊಡ್ಡ ತೆಂಗಿನಕಾಯಿಯ ಪರಟೆಯನ್ನು ಆದಷ್ಟು ಮುಚ್ಚಿಕೊಂಡೇ ತರುವರು ಮಗನ ಕಣ್ಣಿಗೆ ಅದು ಬೀಳಬಾರದು ಎಂಬುದು ಅವರ ಉದ್ದೇಶ ಆದರೆ ಮಗ ಕರೆಯದ ಹೊರತು ತೋಟದಿಂದ ಬರುತ್ತಿದ್ದಿಲ್ಲ ಆದರೂ ಅಣ್ಣಪ್ಪಯ್ಯನವರಿಗೆ ಸಂಶಯ ಕೊರೆಯುತ್ತಿತ್ತು ಇತ್ತ ಸಂಜೀವಿಯು ಕಾಫಿ, ಉಪ್ಕರಿಯು ತಯಾರಾದೊಡನೆ ಹಟ್ಟಿಗೆ ಹಾಲು ಕರೆಯಲು ಹೋಗುತ್ತಿದ್ದಳು

ಅವಳು ಹಾಲು ಕರೆಯಲು ಹೋದೊಡನೆ ಅಣ್ಣಪ್ಪಯ್ಯ ಆ ಪರಟೆಯನ್ನು ಒಳಗೆ ಒಯ್ದು, ಅದರಲ್ಲಿ ಒತ್ತಿ ಒತ್ತಿ ಅವಲಕ್ಕಿಯ ಉಪ್ಕರಿಯನ್ನು ತುಂಬಿಸುತ್ತಿದ್ದರು ಅದರಲ್ಲಿ ಏನಿಲ್ಲವೆಂದರೂ ಒಂದು ಪಾವು ಉಪ್ಕರಿ ಹಿಡಿಸುತ್ತಿತ್ತು ಅದನ್ನು ಒಯ್ದು, ಹಟ್ಟಿಯ ಗೋಡೆಯ ಮೇಲೆ, ಒಂದು ನಿರ್ದಿಷ್ಟವಾದ ಸ್ಥಾನದಲ್ಲಿ ಯಾರಿಗೂ ಕಾಣದಂತೆ ಇಡುವರು ಅಲ್ಲಿಂದ

ಬಂದವರೇ ಉಳಿದ ಅವಲಕ್ಕಿಯನ್ನು ಹಂಚಿ ಮೂರು ಪಾಲು ಮಾಡುತ್ತಾರೆ ಮೂರೂ ಪಾಲುಗಳೂ ಸಮನಾಗಿರುತ್ತವೆ ಮತ್ತೆ ಹೊರಗೆ ಬಂದು, "ದಾಸಾ" ಎಂದು ಕೂಗುವರು

ದಾಸ ಒಮ್ಮೊಮ್ಮೆ ಅವರ ಚಾವಡಿಯ ಬಾಗಿಲಿನ ಹತ್ತಿರ ನಿಂತಾಗಲೇ ಮುಖ ಒರಸಿಕೊಂಡು ಬರುವುದುಂಟು ಹಾಗೆ ಬಂದರೂ " ಬಾ, ಬಾಬಾ ಬೇಗ ಬಾ " ಎಂದು ಅವಸರದಿಂದ ಕರೆಯುತ್ತ ಒಳಗೆ ಹೋಗುವರು ಆತ ಚಾವಡಿಗೆ ಹೋಗಿ, ಕನ್ನಡಿಯಲ್ಲಿ ಮುಖ ನೋಡಿ, ಹಲ್ಲುಗಳ ಹೊಲಸು ಹೋಗಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸುತ್ತಿರುವಾಗ, ಸಂಜೀವಿಯು ಹಾಲು ಕರೆದುಕೊಂಡು ಬಂದು " ನಡೆ, ಹೋಗೋಣ " ಎಂದು ಹೇಳುವಳು ಅವಳು ಮುಂದಿನಿಂದ ಹೋದಮೇಲೆ ಇವನೂ ಹೋಗುವನು

ಬೆಳಗಿನ ಕಾಫಿ-ಉಪ್ಕರಿಗೆ ಮೂವರೂ ಉಪಸ್ಥಿತರಿರುತ್ತಾರಷ್ಟೆ ಎಲ್ಲರೂ ಹಾಗೆ ಒಮ್ಮೆಲೇ ಕೂತುಕೊಂಡು ಅದು ಇದು ಮಾತಾಡುತ್ತ ಫಳಾರ ಮಾಡದಿದ್ದ ದಿನವಿಲ್ಲ 'ತಂಗಳನ್ನ' ಇದ್ದ ದಿವಸ ಸಂಜೀವಿ ತನ್ನ ಪಾಲಿನ ಉಪ್ಕರಿಯನ್ನು ಅವರಿಬ್ಬರಿಗೆ ಹಂಚಿಹಾಕುವಳು ತಾನು ಕಾಫಿಯನ್ನಷ್ಟೆ ಕುಡಿಯುವಳು ಅಣ್ಣಪ್ಪಯ್ಯನವರಿಗೆ ಆಗ ಮಗಳ ಮನಸ್ಸಿನ ಹಿರಿಮೆ ಹೊಳೆಯುತ್ತಿತ್ತು ಅಷ್ಟೇ ಅಲ್ಲ ಅವಳಿಗೆ ತನ್ನ ಮೇಲಿದ್ದ ಪ್ರೇಮವೂ ವ್ಯಕ್ತ ವಾಗುತ್ತಿತ್ತು ಯಾಕೆಂದರೆ ಪ್ರತಿದಿನವೂ ಸಂಜೀವಿ ತನ್ನ ಪಾಲಿನಿಂದ ಅವ ಲಕ್ಕಿಯನ್ನು ಕನಿಷ್ಟಪಕ್ಷಕ್ಕೆ ಒಂದೆರಡು ಮುಷ್ಟಿಯನ್ನಾದರೂ ತಂದೆಯ ಪಾಲಿಗೆ ಹಾಕದೆ ಇಲ್ಲ " ನಿನಗೆ ? " ಎಂದು ಅಣ್ಣಪ್ಪಯ್ಯ ಕೇಳದ ದಿನವೂ ಇಲ್ಲ ಆಗ ಆಕೆ, " ನಾವು ಎಷ್ಟೆಂದರೂ ಒಳಗೆ ಕೂತು ಕೆಲಸ ಮಾಡುವ ಹೆಂಗ ಸರು ನೀವು ಹೊರಗೆ ಮೈಮುರಿದು ದುಡಿಯಬೇಕಾಗುತ್ತದೆ " ಎಂದು ಹೇಳುವುದೂ ಉಂಟು

ಇತ್ತ ಹಟ್ಟಿಯಲ್ಲೂ ಒಬ್ಬಳು ಉಪ್ಕರಿ ಭಕ್ಷಿಸುತ್ತ ಇರುವವಳು ಇದ್ದಾಳೆ ಅವಳೂ ಅದೇ ಹೊತ್ತಿಗೆ ಒಂದು ಹೊರೆ ಸೊಪ್ಪನ್ನು ತಂದು ಹಟ್ಟಿಗೆ ಹಾಕಿ, ಅಲ್ಲಿರುವ ಗೆರಟೆಯನ್ನು ಮೆಲ್ಲನೆ ತೆಗೆದು ಅವಲಕ್ಕಿ ಫಳಾರ ಮಾಡುವಳು ಅವಳೇ ತಿಮ್ಮಾಲೆ ಅಣ್ಣಪ್ಪಯ್ಯನವರ ಮನೆಯ ಆಳು ಎಂದೂ ಹೇಳ ಬಹುದು ಅವರ ಒಕ್ಕಲು ಎಂದು ಹೇಳಿದರೂ ತಪ್ಪಾಗದು ತಿಮ್ಮಾಲೆ

ಯಾದ್ದರೂ ಮಧ್ಯವಯಸ್ಸಿನ ಹೆಣ್ಣು ವಯಸ್ಸಿನ ಒತ್ತಡವು ಅವಳ ಸುಕೋಮಲ ದೇಹಕ್ಕೆ ಯಾವ ರೀತಿಯಿಂದಲೂ ಕೆಟ್ಟ ಪರಿಣಾಮ ಮಾಡಿರಲಿಲ್ಲ ಆಕೆಗೆ ಬಹಳವಾದರೆ ನಾಲ್ವತ್ತು ವರುಷಗಳಾಗಬಹುದು ಆದರೆ ಅವಳ ರೂಪವನ್ನು ನೋಡಿದರೆ ಆಕೆ ಇನ್ನೂ ಇಪ್ಪತ್ತೈದು ವರುಷದ ತರುಣಿಯಂತೆ ಕಾಣುತ್ತಿದ್ದಳು ಅವಳು ಅಣ್ಣಪ್ಪಯ್ಯನವರ ಜಾಗದಲ್ಲಿ ಇರಲಿಕ್ಕೆ ಹತ್ತಿ ಬಹಳ ವರುಷಗಳಾದವು ಅವಳಿಗೂ ಮನೆಮಾರು ಇದೆ ಚಂದ್ರಯ್ಯ ಅವಳ ಮುದಿ ತಂದೆ, ಮನೆಯ ಮೂಲೆಯಲ್ಲೇ ಇರುವವನು ಅವಳಿಗಿಂತ ನಾಲ್ಕಾರು ವರುಷಗಳಿಗೆ ದೊಡ್ಡವನಾದ ಸಬ್ಬ ಎಂಬವನು ಅವಳ ಅಣ್ಣ ಅವನಿಗೆ ಇನ್ನೂ ಮದುವೆಯಾಗಿಲ್ಲ ಮದುವೆಯಾಗುವ ಮನಸ್ಸು ಅವನಿಗೆ ಇದ್ದ ಹಾಗೆಯೂ ಕಾಣಿಸುವದಿಲ್ಲ ಆದರೆ ಶಿರ್ಮಾಲೆಗೆ ಮದುವೆಯಾಗಿತ್ತು ದುರ್ದೈವದಿಂದ ಅವಳ ಗಂಡ ತೀರಿಕೊಂಡನಂತೆ ಅವಳು ಬಯಸಿದ್ದರೆ ಬೇರೆ ಮದುವೆ ಆಗುತ್ತಿತ್ತು ಅವಳು ಹಾಗೆ ಲಗ್ನವಾಗುವ ಗೋಜಿಗೆ ಹೋಗಲಿಲ್ಲ ತಂದೆಯ ಮನೆಯಲ್ಲಿ ಬಂದು ಕೂತಳು ತಂದೆಗೂ ಅವಳಿಂದ ಎಷ್ಟೋ ಉಪಕಾರವಾಯಿತು ಮನೆಯಲ್ಲಿ ದುಡಿದು ಹಾಕುವ ಮಗಳು ಬಂದುದರಿಂದ ಅವನು ಹಿಗ್ಗಿದ

ಶಿರ್ಮಾಲೆ ಮನೆಗೆಲಸಗಳನ್ನಷ್ಟೇ ಮಾಡುತ್ತಿರಲಿಲ್ಲ ಬೇರೆಯವರ ಮನೆಗೂ ಕೂಲಿಗೆ ಹೋಗುತ್ತಿದ್ದಳು ಯಾರಲ್ಲಿ ಕೆಲಸಕ್ಕೆ ಹೋದರೂ ಅಣ್ಣಪ್ಪಯ್ಯನವರ ಹಟ್ಟಿಗೆ ದಿವಸವೂ ಬೆಳಿಗ್ಗೆ ಒಂದು ಹೊರೆ ಸೊಪ್ಪನ್ನು ಅವಳು ತಪ್ಪಿಸುತ್ತಿರಲಿಲ್ಲ ಅವರು ಹೇಳಿದಂತೆ ಇವರೆಲ್ಲ ಕೇಳಬೇಕಿತ್ತು ಎಷ್ಟೆಂದರೂ ಅಣ್ಣಪ್ಪಯ್ಯನವರ ಒಕ್ಕಲುಗಳು—ಇವರು ಎಂದವರೇಲಿ ಧನಿಯರ ಮಾತುಮೀರಲಿಕ್ಕೆ ಸಾಧ್ಯವಿಲ್ಲ

ಶಿರ್ಮಾಲೆಯ ಮನೆಯಿಂದ ಅಣ್ಣಪ್ಪಯ್ಯ ವರುಷಕ್ಕೆ ಐದು ಮುಡಿ ಅಕ್ಕಿ ಗೇಣಿಯಾಗಿ ಪಡೆಯುತ್ತಿದ್ದರು ಗೇಣಿಚೀಟಿ ಶಿರ್ಮಾಲೆಯ ಹೆಸರಲ್ಲೇ ಆಗಿತ್ತು ಇದೆಲ್ಲ ಊರವರಿಗೂ ಗೊತ್ತಿತ್ತು ಎಷ್ಟೋ ಜನ ಹೇಗೋ ನೋಡುತ್ತಿದ್ದರು—ಅವಳನ್ನು ಅವರಿಗೆಲ್ಲ ಇವಳು ಹೆದುರವವಳಲ್ಲ “ ಬೇರೆಯವರಿಗೆ ನಾಲ್ಕು ಕೆಟ್ಟಮಾತು ಆಡಲಾರೆನೆಂದು ಕೂಡಬಹುದು ಆದರೆ ಬೇರೆಯವರಿಂದ ಕೆಟ್ಟಮಾತು ಕೇಳಿಸಿಕೊಳ್ಳಲಾರನೆಂದು ಕೂಡಲಿಕ್ಕೆ ಸಾಧ್ಯ

ವಿದೆಯೇ? " ಎಂಬ ತತ್ವ ಹೊಡಿ, ಅವಳು ಊರವರ ನಿಂದೆಗೆ ಕಿವಿಗೊಡುತ್ತಿರಲಿಲ್ಲ

ಅವಳ ಮನೆ ಅಣ್ಣಪ್ಪಯ್ಯನವರ ಮನೆಗಿಂತ ಎತ್ತರದಲ್ಲಿ ಇತ್ತು ಕಾಂತಪ್ಪ ದೊಡ್ಡ ಒಕ್ಕಲಷ್ಟೆ ಅವನು ಕೊಡತಕ್ಕ ಗೇಣಿಯೂ ಹೆಚ್ಚು ಅವನೇ ಅಣ್ಣಪ್ಪಯ್ಯನವರ ಗದ್ದೆಗಳನ್ನು ಬೇಸಾಯ ಮಾಡುವ ಒಕ್ಕಲುಗಳಲ್ಲಿ ಪ್ರಮುಖನಾದವನು ಉಳಿದ ಒಕ್ಕಲುಗಳು ಅವನಷ್ಟು ಗೇಣಿ ಕೊಡುತ್ತಿದ್ದಿಲ್ಲ ಕಾಂತಪ್ಪನ ಮೇಲೆ ಅಣ್ಣಪ್ಪಯ್ಯನವರಿಗೆ ತುಂಬ ವಿಶ್ವಾಸವಿತ್ತು ಅವನಿಗೂ ಇವರೆಂದರೆ ಗೌರವವಿತ್ತು ಅವನಿಗೆ ಕೂಡ ಅವರ ಮತ್ತು ಶಿರ್ಮಾಲೆಯ ಸಂಬಂಧದ ವಿಷಯ ಗೊತ್ತಿಲ್ಲದೆ ಇಲ್ಲ

ಹಾಗೆಂದು ಅವರಾಗಿ ಕೆಲವು ಸಲ "ಏನುಮಾಡವುದು ಮಹರಾಯಾ ? ಅವಳೊಬ್ಬಳನ್ನು ಹೇಗಾದರೂ ಸಾಕಬೇಕಲ್ಲ " ಎಂದು ಹೇಳುತ್ತಿದ್ದದ್ದು ಕಾಂತಪ್ಪ ಕೇಳಿದ್ದ ಆ ಸಂಬಂಧವನ್ನು ಬಿಡಿಸಲೂ ಕಾಂತಪ್ಪ ಪ್ರಯತ್ನಿಸಿದ್ದ ಆದರೆ ಅದು ಅವನಿಂದ ಸಾಧಿಸಿರಲಿಲ್ಲ ಅಲ್ಲದೆ ಶಿರ್ಮಾಲೆಯಾದರೂ ಕಾಂತಪ್ಪನೊಡನೆ "ಏನೋ ನಮ್ಮ ಧನಿಗಳು ನನ್ನಮೇಲೆ ವಿಶ್ವಾಸವಿಟ್ಟು ನನಗೆ ಆಗಾಗ ಸಹಾಯ ಮಾಡುತ್ತಾರೆ ಅದಕ್ಕೆ ಜನರೆಲ್ಲ ಹೇಗೋ ತಿಳಿದುಕೊಂಡು ಏನೇನೋ ಮಾತಾಡಿಕೊಳ್ಳುತ್ತಾರೆ " ಎಂದು ಒಂದೆರಡು ಸಲ ಹೇಳಿದ್ದಳು

ಆದರೆ ಒಮ್ಮೆ ಮಾತ್ರ ಕಾಂತಪ್ಪ, ಅವಳು ಆ ಮಾತು ಹೇಳಿದಾಗ—"ನೀನು ಅವರ ಮೇಲೆ ಅಷ್ಟೊಂದು ವಿಶ್ವಾಸ ಇಟ್ಟಿದ್ದು ಸರಿಯಲ್ಲ ಎಷ್ಟೆಂದರೂ ಅವರು ಮೇಲು ಜಾತಿಯವರು ನೀನು ಶೂದ್ರ ಹೆಣ್ಣು ನಿನಗೇ . ಪಾಪ" ಎಂದು ಹೆದರದೆ ಹೇಳಿದ್ದ ಅವನ ಮಾತನ್ನು ಕೇಳಿ ಅವಳಿಗೆ ಕೋಪ ಉಕ್ಕಿಬಂತು ಕೂಡಲೇ ತೆರೆದ ಬಾಯಿಗೆ ಹೇಳಿದಳು "ನೀನೊಂದು ದೊಡ್ಡ ಋಷಿಯ ಹಾಗೆ ಮಾತಾಡಬೇಡ ನೀನು ಮಾಡುವ ಪುಣ್ಯದ ಕೆಲಸ ನನಗ ಗೊತ್ತಿಲ್ಲವೆಂದು ತಿಳಿದಿರುವೆಯಾ ? " ಆಗ ಕಾಂತಪ್ಪ ಸುಮ್ಮನೆ ಬಾಯಿ ಮುಚ್ಚಿ ಮನೆಗೆ ಬಂದ. ಮುಂದೆ ಒಂದು ಸಂಚನ್ನೂ ಹೊಡಿದ ಅವನ ಆ ಸಂಚಿನಿಂದ ಶಿರ್ಮಾಲೆಗೆ ಬೆಳಗ್ಗೆ ಸಿಗುವ ಉಪ್ಪರಿಗೆ ನೀರು ಬಂತು.

ಹಟ್ಟಿಯ ಗೋಡೆಯ ಮೇಲೆ ಉಪ್ಪರಿಯ ಗೆರಟೆ ತಂದು ಇಟ್ಟು ಅಣ್ಣಪ್ಪಯ್ಯ ಹೋಗುತ್ತಿದ್ದರು ಅವರು ಬೆನ್ನು ಹಾಕಿ ಹೋಗುವುದನ್ನು ನೋಡಿದೊಡನೆ ಕಾಂತಪ್ಪನ ಶಿಷ್ಯನಾದ ಪಾಂಡಿಯು ಸರ್ರನೆ ಒರುತ್ತಿದ್ದ ಆ ಪರಟೆಯೊಳಗಿನ ಅರ್ಧ ಅವಲಕ್ಕಿಯ ಉಪ್ಪರಿಯನ್ನು ತನ್ನ ಪಂಚೆಯಲ್ಲಿ ಕಟ್ಟಿಕೊಂಡು ಓಡುತ್ತಿದ್ದ ಹೀಗೆ ಹಲವಾರು ದಿನಗಳ ಪರ್ಯಂತ ಮಾಡಿದ ಒಂದೆರಡು ದಿನಗಳವರಗೆ ತಿರ್ಮಾಲೆ ಸುಮ್ಮನೆ ಕೂತಳು ಅದರಲ್ಲಿ ಇದ್ದಷ್ಟನ್ನೇ ತಿಂದು ತೃಪ್ತಳಾದಳು "ಮನೆಯಲ್ಲಿ ಕುಟ್ಟಿಸಿ ಇಟ್ಟ ಅವಲಕ್ಕಿ ಇರಲಿಕ್ಕಿಲ್ಲ" ಎಂದು ಭಾವಿಸಿದಳು ಹೊರತು ಅಣ್ಣಪ್ಪಯ್ಯನವರ ಮೇಲೆ ಕೋಪಗೊಳ್ಳಲಿಲ್ಲ ಒಂದು ತಿಂಗಳ ವರೆಗೆ ಅದೇ ರೀತಿಯಲ್ಲಿ ಫಳಾರ ಮಾಡಿದಳು ಆಮೇಲೆ ಒಮ್ಮೆ ಅವಳಿಗೂ ಸಿಟ್ಟು ಬಂತು "ಊರವರು ಎಲ್ಲರು ಅವರನ್ನು ಜಿಪುಣರೆಂದು ಕರೆಯುತ್ತಿದ್ದರು—ಕರೆಯುತ್ತಾರೆ ನನ್ನ ಮಟ್ಟಿಗೆ ಅವರು ಔದಾರ್ಯ ತೋರಿಸುತ್ತಿದ್ದರು ಈಗ ನನ್ನ ಮೇಲೆಯೂ ಜಿಪುಣತನ ಪ್ರಯೋಗಿಸಿದರಲ್ಲ ತಡಿ, ಮಾಡುತ್ತೇನೆ ಉಪಾಯ" ಎಂದು ಮನಸ್ಸಿನಲ್ಲೇ ಹಲ್ಲು ಕಚ್ಚಿಕೊಂಡಳು

ಇಂತಿರಲು ಒಮ್ಮೆ ತಾನಾಗಿಯೇ ಕಾಂತಪ್ಪ ಅವಳ ಮನೆಗೆ ಹೋದ ಅವಳು ಚಾವಡಿಯಲ್ಲಿ ಇರಲಿಲ್ಲ ಅಷ್ಟೇ ಅಲ್ಲ, ಚಾವಡಿಯಲ್ಲಿ ಯಾರೂ ಇರಲಿಲ್ಲ ಅವಳ ಮುದುಕ ಅಪ್ಪನೂ ಕಾಣೆಯಾಗಿದ್ದ ಸಂಜೆಯ ಹೊತ್ತು ಅದು ಆಕೆ ಆ ಸಮಯದಲ್ಲಿ ಇರಬಹುದೆಂದು ಅವನು ಹೋಗಿದ್ದ ಅವಳ ಮನೆಯೊಳಗೆ ಪ್ರವೇಶ ಮಾಡಲು ಮನಸ್ಸು ಬರಲಿಲ್ಲ ಅವನಿಗೆ ಚಾವಡಿಯೊಳಗೆ ಹೋಗಿ, ಸ್ವಲ್ಪ ಹೊತ್ತು ಕೂತು, ಅತ್ತ ಇತ್ತ ನೋಡಿದ ಅವನ ಕಣ್ಣಿಗೆ ವಿಶೇಷ ಏನೂ ಕಾಣಿಸಲಿಲ್ಲ ಕಿವಿಗೆ ಏನೋ ಕೇಳಿಸಿತು ಯಾರದೋ ಸ್ವರ ಅದು ಅದರೊಡನೆ ತಿರ್ಮಾಲೆಯ ಧ್ವನಿಯೂ ಆಗಾಗ ಕೇಳಬರುತ್ತಿತ್ತು ಒಳಗೆ ಇರುವ ವ್ಯಕ್ತಿ ಯಾರೆಂಬುದು ಅವನಿಗೆ ಅಷ್ಟರಲ್ಲೇ ತಿಳಿಯಿತು

"ಇಂಥ ಹೊತ್ತಿಗೆ ನಾನೇಕೆ ಬಂದೆನಪ್ಪಾ!" ಎಂದು ಅವನಿಗೆ ಅಸಮಾಧಾನವೂ ಆಯಿತು. "ಇಂಥಲ್ಲಿ ಕೂಡುವುದು ಸರಿಯಲ್ಲ" ಎಂದು ಯೋಚಿಸಿ ಅಲ್ಲಿಂದ ಎದ್ದು ಮನೆಗೆ ನಡೆಯಲು ಸಿದ್ಧನಾದ ಅವನು ನಿಂತಿದ್ದ

ನಷ್ಟೆ ಆಗ ಒಮ್ಮೆಲೇ ಅಳುವ ಧ್ವನಿ ಕೇಳಿಸಿತು—ಅವನಿಗೆ ಅವನ ಕಣ್ಣೆದುರಿಗೆ ತಿರ್ಮಾಲೆ ತಲೆ ಬಿಚ್ಚಿ ಹಾಕಿಕೊಂಡು "ನನಗೆ ಗೊತ್ತಿಲ್ಲ! ನನಗೆ ಗೊತ್ತಿಲ್ಲ, ನಾನು ಬರುವುದಿಲ್ಲ " ಎಂದು ಹೊರಗೆ ಓಡಿ ಬಂದಳು ಅವನನ್ನು ನೋಡಿದೊಡನೆ ಅವಳ ದುಃಖ ನಿಂತಿತು. ಅವಳ ಹಿಂದಿನಿಂದ ಆ ಒಳಗೆ ಇರುವ ಮತ್ತೊಂದು ವ್ಯಕ್ತಿ ಹೊರಗೆ ಬರುವುದರಲ್ಲಿ ಇತ್ತು ಆದರೆ ಹೊರಗೆ ನಿಂತ ಕಾಂತಪ್ಪನನ್ನು ಕಂಡೊಡನೆ ಆ ವ್ಯಕ್ತಿ ಒಳಗೆ ಅಡಗಿ ಕೂತಿತು

ಕಾಂತಪ್ಪ ಆವಳ ಮನೆಗೆ ಹೋದ ಕೆಲಸ ಬೇರೆ ಆದರೆ ಅವನ ತಲೆಯಮೇಲೆ ಈಗ ಮತ್ತೊಂದು ಹೊಣೆ ಹೇರಲ್ಪಟ್ಟಿತು ತಿರ್ಮಾಲೆ ಹೊರಗೆ ಬರುವಾಗಲೇ, "ಹೂಂ ಕಾಂತಪ್ಪಣ್ಣಾ, ನೀನು ಸ್ವಲ್ಪ ತಿಳಿದವನಿದ್ದಿ ಇದಕ್ಕೆ ಏನಾದರೊಂದು ನ್ಯಾಯ ಹೇಳು " ಎಂದು ಹೇಳುತ್ತ ಬಂದಳು ಸ್ವಲ್ಪ ಹೊತ್ತು ಕಾಂತಪ್ಪ ಸುಮ್ಮನೆ ನಿಂತುಕೊಂಡ ಅಷ್ಟು ಹೊತ್ತು ಯೋಚನೆ ಮಾಡುತ್ತ ನಿಂತನೆನ್ನಬಹುದು ಆಮೇಲೆ ಕೇಳಿದ "ನ್ಯಾಯವಾದರೂ ಏನು ?" "ನಿನಗೆ ಗೊತ್ತಿರಲಿಕ್ಕಿಲ್ಲ, ಈಗ ಸುಮಾರು ಒಂದು ವರೆ ತಿಂಗಳಲಾಗಾಯ್ತು ನನ್ನ ಮೇಲೆ ಧನಿಗಳಿಗೆ ಕೋಪ ಬಂದ ಹಾಗಿದೆ ಇಷ್ಟು ವರುಷಗಳಿಂದ ಒಳ್ಳೆಯ ರೀತಿಯಿಂದ ಇದ್ದು, ಈಗ ಒಮ್ಮೆಲೇ ಹೀಗೆ ನನ್ನಮೇಲೆ ಸಿಟ್ಟಿಗೆದ್ದರೆ—ನಾನು ಎಲ್ಲಿಗೆ ಹೋಗಬೇಕು ? "

"ಸಿಟ್ಟಿಗೆದ್ದಿದ್ದಾರೆ ಅಂದರೆ ಅರ್ಥವೇನು ? ಬರೇ ಸಿಟ್ಟಿಗೆದ್ದಿದ್ದಾರೆ ಅಂದರೆ ಯಾಕೆ ಸಿಟ್ಟು ?"

"ಸಿಟ್ಟು ಅಲ್ಲ ನಾನೇ ಅವರಿಗೆ ಬೇಡಾಗಿದ್ದೇನೆ! ಅದಕ್ಕಾಗಿ ಹೀಗೆ ಮಾಡಹತ್ತಿದ್ದಾರೆ ಮೊದಲು ದಿವಸಾಗಲೂ ಬೆಳಗ್ಗೆ ಒಂದು ಪರಟೆ ತುಂಬ ಅವಲಕ್ಕಿ ಇಡುತ್ತಿದ್ದರು ಈಗ ಅದರ ಅರ್ಧವೂ ಇಡುವುದಿಲ್ಲ ಶಾಸ್ತ್ರಕ್ಕೆ ಮಾತ್ರ ಪರಟೆಯ ಬುಡದಲ್ಲಿ ಒಂದು ಮುಷ್ಟಿ ಅವಲಕ್ಕಿ ಇರುತ್ತದೆ "

"ಇಷ್ಟೆಯೋ! ನಿನಗೆ ಅವರ ಮನೆಯ ಅವಲಕ್ಕಿಯ ಮೇಲೆ ಅಷ್ಟೇಕೆ ಇಷ್ಟ! ಬೇಕಾದರೆ ನಿನ್ನ ಮನೆಯಲ್ಲೇ ಉಪ್ಕರಿ ಮಾಡಬಹುದಲ್ಲ ನಿನಗೆ ಉಪ್ಕರಿ ಮಾಡಲಿಕ್ಕೆ ಬರದಿದ್ದರೆ, ನನ್ನಂಥವನನ್ನು ಕೇಳಿದರೆ ಕಲಿಸಲಿಕ್ಕೆ ತಯಾರಿರುತ್ತಾರೆ ಇಷ್ಟು ಸಣ್ಣದಕ್ಕೆಲ್ಲ—ಹೀಗೆ ಮಾಡಿದರೆ ಆಯಿತು

ಕಡ್ಡಿ ಇದ್ದದ್ದನ್ನು ಗುಡ್ಡ ಮಾಡುವುದು ಹೆಂಗಸರ ಸ್ವಭಾವ "

"ನಿನಗೆ ಯಾವಾಗಲೂ ಹಿಡಿದದ್ದೇ ಇರುತ್ತದೆ—ಮಕ್ಕಳಾಟಿಕೆ ಯಾವ ಮಾತನ್ನೇ ಆಡಲಿ ಅದಕ್ಕೆ ನಿನ್ನದು ಕೊಂಕು ಇದ್ದೇ ಇರುತ್ತದೆ " ಎಂದು ಸ್ವಲ್ಪ ಸಮಾಧಾನದಿಂದ ಹೇಳುತ್ತಿದ್ದಳು

ಇದನ್ನೆಲ್ಲ ಒಳಗಿನಿಂದ ಆ ಮನುಷ್ಯ ಕಿವಿಗೊಟ್ಟು ಕೇಳುತ್ತಿದ್ದ "ಹೇಗಾದರೂ ನನಗೆ ಗೆಲಾಗುತ್ತದೆ" ಎಂದು ಆತ ಮನಸ್ಸಿನಲ್ಲೇ ಧೈರ್ಯ ತಾಳಿದ. ಇತ್ತ ಕಾಂತಪ್ಪ ಮನಸ್ಸಿನಲ್ಲಿ "ಇದೆಲ್ಲ ತನ್ನ ಒಳಸಂಚಿನ ಪರಿಣಾಮ" ಎಂದು ತಿಳಿದುಕೊಂಡಾಗಿತ್ತು ಆದರೆ ತಿಮ್ಮಾಲೆ, ಪರಿಸ್ಥಿತಿಯನ್ನು ಇಷ್ಟು ವಿಕೋಪಕ್ಕೆ ಮುಟ್ಟಿಸುತ್ತಾಳೆಂದು ಅವನು ಬಗೆದಿರಲಿಲ್ಲ ಈಗ ಅವನಿಗೂ ಅವರಿಬ್ಬರ ತಂಟೆ ತೀರಿಸುವುದು ಕಠಿಣವೆಂದು ಅನಿಸಿತು ಅದಕ್ಕಾಗಿ ಹಾಸ್ಯ ಮಾತಾಡಿ, ಅದನ್ನು ಅಲ್ಲಿಗೆ ಶಾಂತಗೊಳಿಸಲು ಪ್ರಯತ್ನಿಸಿದ ಅವನು ಅವಳ ಮನೆಗೆ ಬಂದದ್ದು ಅವಳ ಬಾಯಿಯಿಂದ ಅಣ್ಣಪ್ಪಯ್ಯನವರ ತ್ಯಗಳಿಕೆ ಕೇಳಬೇಕೆಂದೇ ಒಟ್ಟಿನಲ್ಲಿ ಅವಳನ್ನು ಹಳ್ಳಿಯಿಂದ ಓಡಿಸಬೇಕೆಂಬುದು ಕಾಂತಪ್ಪನ ಮುಖ್ಯ ಧ್ಯೇಯ ' ಅದಕ್ಕಾಗಿ ಅವನು ಮಾಡಿದ ಈಗಿನ ಪ್ರಯತ್ನದ ಫಲವು ಅಷ್ಟು ದೊಡ್ಡದಾದ್ದು ನೋಡಿ ಅವನಿಗೂ ಧೈರ್ಯ ಬಂತು "ಇವಳನ್ನು ಹೇಗಾದರೂ ಮಾಡಿ ಊರು ಬಿಟ್ಟು ಹೋಗುವಂತೆ ಮಾಡುತ್ತೇನೆ " ಎಂದು ಅವನು ನಿರ್ಧರಿಸಿದ ಕಾರಣ, "ನೀವು ನೀವು ಏನಾದರೂ ಮಾಡಿಕೊಳ್ಳಿ" ಎಂದು ಹೇಳಿ ಅವಳ ಮನೆಯಿಂದ ಬಂದ ಅವನು ಹಾಗೆ ಹೇಳಿ ಹೋದದ್ದನ್ನು ನೋಡಿ, ತಿಮ್ಮಾಲೆ "ಇವನೂ ಅವರ ಕಡೆಗೆ ಇದ್ದಂತೆ ಕಾಣುತ್ತದೆ " ಎಂದು ಎಣಿಸಿದಳು

ಕೆಲವು ದಿನಗಳ ಮೇಲೆ ಗದ್ದೆಯ ಹತ್ತಿರ ತೋಡು ಮಾಡುತ್ತಿರುವಾಗ ತಿಮ್ಮಾಲೆ ಅವನಿದ್ದಲ್ಲಿಗೆ ಏನೋ ನೆವ ಹೂಡಿ ಹೋದಳು ಅವನಾಗಿ ಅವಳನ್ನು ಮಾತಾಡಿಸಲಿಲ್ಲ ನೋಡಿದರೂ ನೋಡದಂತೆ ತಲೆ ಕೆಳಗೆ ಹಾಕಿ ಹಾರೆಯಿಂದ ತೋಡು ಮಾಡುತ್ತಲೇ ಇದ್ದ ಅವನ ಸಮೀಪಕ್ಕೆ ಬಂದು "ಹೀಗೆ ತೋಡು ಮಾಡಲಿಕ್ಕೆ ಹತ್ತಿದರೆ ಆಯಿತು ! " ಎಂದು ಹೇಳಿದಳು

"ಹೋ ! ತಿಮ್ಮಾಲಕ್ಕ !" ಎಂದ ಕಾಂತಪ್ಪ ಕೆಲಸ ಮಾಡುವುದನ್ನು ನಿಲ್ಲಿಸಿ ನೆಟ್ಟಗೆ ನಿಂತ

"ನಿನ್ನೆ ನೀನು ನಮ್ಮ ಮನೆಗೆ ಬಂದಿ ಏನು—ಹೋದಿ ಏನು ? ಸ್ವಲ್ಪ ಹೊತ್ತು ಕೂತು ಹೋಗಬಾರದಿತ್ತೆ ?"

"ನಿಮ್ಮ ಕೆಲಸಗಳನ್ನು ಯಾಕೆ ಕೆಡಿಸುವುದು ಎಂದು ಹಿಂದೆ ಬಂದೆ ನಿನಗೂ ಮನೆಯಲ್ಲಿ ಭಾರೀ ಕೆಲಸಗಳು ಇರುತ್ತವೆ"

"ಅದೆಲ್ಲ ಸಾಯಲಿ, ನೀನು ನಿನ್ನೆ ನಮ್ಮ ಮನೆಗೆ ಬಂದ ಕಾರಣವೇನು?"

"ಕಾರಣವಿಲ್ಲದೆ ನಿಮ್ಮ ಮನೆಗೆ ಯಾರೂ ಬರುವುದೇ ಇಲ್ಲವೋ ? ಅಲ್ಲಿ ಯಾರೂ ಬರಲೇ ಬಾರದು ಎಂದು ಕಾಯ್ದೆ ಮಾಡಿದ್ದಿಯೋ ?"

"ಅಲ್ಲ, ಎಂದೂ ಹಾಗೆ ಏನೂ ಕೆಲಸವಿಲ್ಲದೆ ಬರುವವನಲ್ಲ—ಯಾಕೆ ಆ ಹೊತ್ತಿನಲ್ಲಿ ಬಂದಿ ?"

"ಹೌದು ಮಹಾರಾಯಳೇ ನಾನು ಬಂದ ಹೊತ್ತು ಒಳ್ಳೆಯದಿರಲಿಲ್ಲ ! ಅದಕ್ಕಾಗಿಯೇ ಅಷ್ಟು ಬೇಗ ಹಿಂತಿರುಗಿದೆ"

"ನೀನೂ ಮಾತಿನಲ್ಲಿ ಪಕ್ಕಾ ಇದ್ದಿ ಒಳೊಗೊಳಗೆ ನಿನ್ನ ಮಾತಿನಲ್ಲಿ ಬೆಂಕಿಯೇ ಇರುತ್ತದೆ"

"ಹಾಗೆ ಮಾತಾಡಲಿಕ್ಕೆ ಬರುವುದರಿಂದ ನಾನು ಈ ಕರೆಯಲ್ಲಿ ಇಷ್ಟು ದಿನಗಳವರೆಗೆ ಬದುಕಿದೆ"

"ನೀನೊಬ್ಬನು ಹೇಗಾದರೂ ಬದುಕುತ್ತಿ ಬಿಡು ನಮ್ಮಂಥವರಿಗೆ ಮಾತ್ರ ಈ ಕರೆಯ ಜನ ಬದುಕಲಿಕ್ಕೆ ಬಿಡುವುದಿಲ್ಲ"

"ಯಾಕೆ ?"

"ನೀನು ನನ್ನನ್ನು ನಾಲ್ಕು ದಿನ ಬದುಕುವಂತೆ ಸಹಾಯ ಮಾಡುತ್ತೀನೆಂದರೆ ಹೇಳುತ್ತೇನೆ"

"ಹೇಳು"

"ನನಗೆ ಎಲ್ಲಾದರೂ ಒಂದು ಸಣ್ಣ ಆಸ್ತಿಯನ್ನು ಗೇಣಿಗೆ ತೆಗಿಸಿಕೊಡು. ಈ ಕರೆಯಲ್ಲಿ ನಾನಿನ್ನು ದಿನ ತೆಗೆಯುವುದು ಕಷ್ಟವಾಗಿದೆ ವಿಷ ಹಾಕಲಿಕ್ಕೂ ಹೆದರುವ ಜನ ಈ ಕರೆಯವರಲ್ಲ ಜೀವಂತ ಒಯ್ದು ಸುಡಲಿಕ್ಕೂ ಇಲ್ಲಿಯ ಜನರು ತಯಾರು !"

"ಇದೇನು ಹೇಳುತ್ತಿ ಮಹರಾಯಳೇ ನೀನು ! ನೀನು ಈ ಊರು ಬಿಡುವ ಯೋಚನೆಯಲ್ಲಿದ್ದಿಯೇ? ನೀನು ಇಲ್ಲಿಂದ ಹೋದರೆ ಮತ್ತೆ ನಮ್ಮ

ಧನಿಗಳ ಮನೆಗೆ ಕೆಲಸಕ್ಕೆ ಹೋಗುವವರು ಯಾರು ? ನೀನೊಬ್ಬಳು ಅವರು ಕರೆದಾಗ ಕೆಲಸಕ್ಕೆ ಹೋಗುವವಳು ನಾವೆಲ್ಲ ಅವರ ಮಾತನ್ನು ನಿನ್ನಷ್ಟು ಸೇವಕ ಬುದ್ಧಿಯಿಂದ ಕೇಳುವವರಲ್ಲ ಅಲ್ಲದೆ ಧನಿಯವರು ಅಂಥ ಅರ್ಜಂಟ ಕೆಲಸವಿತ್ತೆಂದರೆ ನಿನ್ನ ಮನೆಗೆ ಓಡಿ ಬರುತ್ತಾರೆ ಹೊತ್ತು ವೇಳೆ ಇಲ್ಲದೆಯೂ ಅವರು ನಿನ್ನ ಮನೆಗೆ ಬರುತ್ತಾರೆಂದು ನೀನೇ ಹೇಳುತ್ತಿ ಎಂದಮೇಲೆ ನೀನು ಅವರ ಜಾಗ ಬಿಟ್ಟು ಹೇಗೆ ಹೋಗಲಿಕ್ಕೆ ಆಗುತ್ತದೆ ? ನೀನು ಹೋದ ಮೇಲೆ ಅವರು ಹಾಗೆ ಅರ್ಜಂಟ ಕೆಲಸ ಬಿದ್ದಾಗ ಯಾರ ಮನೆಗೆ ಹೋಗಬೇಕು ? "

" ಅಂಥ ಅರ್ಜಂಟ ಕೆಲಸವಿದ್ದರೆ ನನ್ನ ಮನೆಗೆ ಬರುವುದು ಬೇಡವೆಂದು ಹೇಳುತ್ತೇನೆಯೇ ? ಬೇಕಾದರೆ, ನಾನು ಎಲ್ಲಿ ಇರುತ್ತೆನೋ ಅಲ್ಲಿಗೆ ಬರಲಿ "

" ಹಾಂ ! " ಎಂದು ಕಾಂತಪ್ಪ ಸೋಜಿಗದಿಂದ ಬಾಯ್ತೆರೆದ ಅವನ ಮನಸ್ಸಿನಲ್ಲಿ ಅವಳು ತನ್ನ ಕರೆಯಿಂದ ಹೋಗಬೇಕೆಂದು ಇತ್ತು ಹೊರಗೆ ಉಪಚಾರಕ್ಕೆಂದು ಅಷ್ಟು ಮಾತಾಡಿದ ಅವನು ಆಡಿದ ಮಾತುಗಳ ಒಳಗಿನ ಅರ್ಥ ಅವಳಿಗೂ ಹೊಳೆದಿತ್ತು ಅದಕ್ಕಾಗಿಯೇ ಆಕೆ ಹೆಮ್ಮೆಯಿಂದ ಆ ಮಾತನ್ನು ಆಡಿದಳು ಅವಳ ಆ ಸೊಕ್ಕಿನ ಸೊಲ್ಲನ್ನು ಕೇಳಿ ಅವನಿಗೆ ಅವಳ ಮೇಲೆ ದ್ವೇಷ ಹುಟ್ಟಿತು ಅವಳ ಸೊಕ್ಕನ್ನು ಇಳಸಬೇಕು ಎಂದು ಅವನು ದೃಢವಾದ ನಿರ್ಧಾರ ಮಾಡಿದ ತಾನು ಮಾಡಿದ ಪ್ರಯತ್ನಗಳು ಸಫಲವಾದವೆಂದು ಅವನಿಗೂ ಅವಳ ಬಾಯಿಯಿಂದ ಊರು ಬಿಡುವ ಸುದ್ದಿಯನ್ನು ಕೇಳಿ ಸಂತೋಷವಾಯಿತು

ಅವನೇ ಪುನಃ " ನಿನಗೆ ಯಾರು ಏನು ಮಾಡಿದರು ? " ಎಂದು ಕೇಳಿದ ಅವನಿಗೆ ಇವಳಿಗೆ ಮುನಿದವರಾರು ಎಂಬುದು ಗೊತ್ತಿಲ್ಲದೆ ಹೋಗಿತ್ತೇ ? ಆದರೂ ಅವನು ಹಾಗೆ ಕೇಳಿದ ಅದಕ್ಕೆ ಅವಳು " ಯಾರು ಎಂದು ಹೇಳುವುದು ಮಹರಾಯಾ ? ನನ್ನ ಮೇಲೆ ಈ ಕರೆಯ ಜನಗಳಿಗೇ ಕಣ್ಣು " ಎಂದಳು

" ನಿನಗೆ ಯಾರು ಏನು ಮಾಡಿದರೆಂದು ಹೇಳುತ್ತಿಯಾ ಅಥವಾ ಹೀಗೇ ಮಾತು ಬೆಳೆಸುತ್ತೀಯಾ ? "

" ಅದನ್ನೆಲ್ಲ ಏನು ಹೇಳವುದು ? "

" ಅಂದರೆ ಅದರ ಅರ್ಥವೇನು ? "

" ನಿನಗೆ ಗೊತ್ತಿದೆಯಲ್ಲ–ನಮ್ಮ ಧನಿಗಳು ನನಗೆ ದಿವಸಾಗಲೂ ಬೆಳಗ್ಗೆ ಒಂದೊಂದು ಚಿಪ್ಪು ತುಂಬ ಅವಲಕ್ಕಿಯ ಉಪ್ಕರಿಯನ್ನು ಕೊಡುತ್ತಿದ್ದದ್ದು "

" ಹೂಂ, ಹೌದು ನಾನೇನು ನೋಡಿಲ್ಲ ಆದರೆ ಊರಲ್ಲಿ ಎಷ್ಟೋ ಜನರು ಹೇಳುವುದನ್ನು ಕೇಳಿದ್ದೇನೆ ಮತ್ತು ನಿನ್ನೆ ನಿಮ್ಮ ಜಗಳ ನಡೆದುದನ್ನೂ ನೋಡಿದೆ ಅದಕ್ಕಾಗಿ ಅಲ್ಲವೋ ನೀವಿಬ್ಬರೂ ನಿನ್ನೆ ಹಾಗೆಲ್ಲ ಮಾತಾಡಿಕೊಳ್ಳುತ್ತಿದ್ದದ್ದು ? "

" ಏ, ಮಹಾರಾಯಾ ಅದನ್ನು ಬೇರೆ ಯಾರೊಡನೆಯೂ ಹೇಳಬೇಡ ನಿನ್ನ ಕಾಲು ಹಿಡಿಯುತ್ತೇನೆ, ದಮ್ಮಯ್ಯ ಹೇಳಬೇಡ "

" ಛೇ ಅವೆಲ್ಲ ಬೇರೆಯವರೊಡನೆ ಹೇಳುವ ಸುದ್ದಿಗಳೇ ? ಅದನ್ನು ಹೇಳಿದರೆ, ಹೇಳಿದವನ ಮೋರೆಗೆ ಜನ ಉಗುಳಿಯಾರು ! ನಾನು ಅದನ್ನೆಲ್ಲ ಈ ಊರಲ್ಲಿ ಡಂಗುರ ಸಾರಲಿಕ್ಕೆ ಹೋಗುವುದಿಲ್ಲ ನನಗೇನು ನಿಮ್ಮಿಬ್ಬರಲ್ಲಿ ಒಳ್ಳೆಯದಿದ್ದದ್ದು ಗೊತ್ತಿಲ್ಲವೇ ? ಅಥವಾ ನಾನಾಗಿ ಅದಕ್ಕೆ ಅಡ್ಡಬಂದಿದ್ದೆಯೇ ? ಏನೋ ಒಮ್ಮೆ ಹೀಗೇ ಕುಶಾಲಿಗೆ ಹೇಳಿದ್ದೆ—' ನೀನು ಅವರೊಡನೆ ಸಂಬಂಧ ಇಟ್ಟುಕೊಂಡದ್ದು ಪಾಪ ' ಎಂದು ಕಾಮಕ್ಕೆ ಎಲ್ಲಾದರೂ ಪಾಪ ಪುಣ್ಯ, ಜಾತಿ ಉಂಟೇ ?" ಎಂದು ನಯವಾಗಿ ಮಾತಾಡಿದ ಅವನ ಮಾತನ್ನು ಕೇಳಿ ತಿಮ್ಮಾಲೆಗೆ ಸಂತೋಷವಾಯಿತು ಅವನು ಅವುಗಳನ್ನು ಮನಃಪೂರ್ವಕ ಆಡುತ್ತಾನೆಂದೇ ಬಗೆದಳು

" ನಿನಗೆ ನಾನೂ ಆಗ ಏನೋ ನಾಲ್ಕು ಮಾತು ಸಿಟ್ಟಿನಿಂದ ಹೇಳಿದ್ದೆ ದಯಮಾಡಿ ಕ್ಷಮಿಸಬೇಕು ನೀನು ಇಷ್ಟು ಒಳ್ಳೆಯವನಿದ್ದಿಯೆಂದು ನನಗೆ ಗೊತ್ತಿರಲಿಲ್ಲ "

" ನಿನ್ನ ಸ್ವಭಾವ ನನಗೆ ಗೊತ್ತಿಲ್ಲದ್ದೇ ? ಹಾಗೆ ನೀನು ಹೇಳಿದ ಮಾತಿಗೆ ಸಿಟ್ಟು ಬಂದಿದ್ದರೆ ನಾನು ನಿನ್ನೆ ನಿನ್ನ ಮನೆಗೆ ಬರುತ್ತಿದ್ದೆನೇ? "

" ನೀನು ಒಳ್ಳೆಯವನೆಂದು ನನಗೂ ಗೊತ್ತಿರಲಿಲ್ಲ ! " ಎಂದು ಹೇಳಿ ಸಂತಸಪಟ್ಟು ತಿಮ್ಮಾಲೆ ಅಲ್ಲಿಂದ ಹೊರಡಲು ಅನುವಾದಳು ಆಗ ಅವನು " ನಾನು ಇಷ್ಟು ಮಾತಾಡಿದ್ದೇ ತಪ್ಪಾಯಿತು ! ಇವಳು ಎಲ್ಲವನ್ನೂ ಮರೆತಳಲ್ಲ ! ಎಲ್ಲವೂ ಬಿಸಿಬಿಸಿಯಲ್ಲೇ ಆಗಬೇಕು " ಎಂದು ಮನದಲ್ಲಿಯೇ

ನೆನೆದು, "ಏನು ಹೊರಟಿದ್ದು ? ಎಲ್ಲ ಸುದ್ದಿಯನ್ನು ಹೇಳಲೇ ಇಲ್ಲವಲ್ಲ ! ಮತ್ತು ನಿನಗೆ ಆಸ್ತಿ ಗೇಣಿಗೆ ಬೇಕೆಂದು ಹೇಳಿದಿಯಲ್ಲ ಅದನ್ನು ಮರೆತು ಹೊರಟೇ ಬಿಟ್ಟೆಯಲ್ಲ" ಎಂದು ಅವಳನ್ನು ಎಚ್ಚರಿಸಿದ

"ಎಲ್ಲಾದರೂ ಆದೀತು ಆದರೆ ಈ ಕರೆಯಿಂದ ಏನಿಲ್ಲವೆಂದರೂ ನಾಲ್ಕಾರು ಮೈಲುದಾರಿಯ ದೂರದಲ್ಲಿ ಆಸ್ತಿಯನ್ನು ಗೊತ್ತು ಮಾಡು"

"ಆಸ್ತಿಯ ವಿಷಯದಲ್ಲಿ ನೀನು ಚಿಂತೆ ಮಾಡಬೇಡ"

"ನಿನ್ನಂತಹವರು ಇದ್ದಾರೆಂದು ಮಾತ್ರ ಜಗತ್ತು ಬದುಕಿದೆ ಮಹ ರಾಯಾ ಇಲ್ಲದಿದ್ದರೆ - ನಮ್ಮಂತಹ ಬಡವರನ್ನು ಜೀವಂತ ಸುಡುತ್ತಿದ್ದರು!"

"ಅದೆಲ್ಲ ಹೋಗಲಿ ನನಗೆ ನಿನ್ನ ಹೊಗಳಿಕೆ ಸೇರುವುದಿಲ್ಲ ನೀನು ಆ ಅವಲಕ್ಕಿಯ ಸುದ್ದಿ ಏನೋ ಹೇಳಿದಿಯಲ್ಲ—ಅದೇನು ?"

"ಅದರಿಂದಲೇ ಈಗ ಇಷ್ಟೆಲ್ಲ ಪರಿಸ್ಥಿತಿ ವಿಕೋಪಕ್ಕೆ ಮುಟ್ಟಿದ್ದು"

"ಹೌದಾ !"

"ಮತ್ತೆ ! ನಾನು ಸುಮ್ಮಸುಮ್ಮನೇ ಧನಿಯರೊಡನೆ ಜಗಳವಾಡಿದೆ ಪಾಪ ಅವರು ಏನು ತಿಳಿದುಕೊಂಡರೋ ಗೊತ್ತಿಲ್ಲ"

"ಹಾಗೆಲ್ಲ ನಿನ್ನ ಸಣ್ಣಪುಟ್ಟ ಮಾತುಗಳಿಗೆ ಅವರು ತಪ್ಪು ತಿಳಿದು ಕೊಳ್ಳುವವರಲ್ಲ ನೀನೇನು ಹೆದರುವುದು ಬೇಡ ಅವರು ಎಲ್ಲಾದರೂ ನಿನ್ನ ಮೇಲೆ ಸಿಟ್ಟಿನಿಂದ ಇದ್ದಾರೆಂದು ತಿಳಿದು ಬಂದರೆ ನನಗೆ ತಿಳಿಸು ನಾನೆಲ್ಲ ಅವರನ್ನು ಸಮಾಧಾನ ಮಾಡುತ್ತೇನೆ"

"ನಾನು, ಅವರೇ ದಿವಸಾಗಲೂ ಅವಲಕ್ಕಿ ಕಡಿಮೆ ಕೊಟ್ಟು ನನ್ನನ್ನು ಓಡಿಸುವ ಮಾರ್ಗ ಹುಡುಕಿದರೆಂದು ತಿಳಿದಿದ್ದೆ ಆದರೆ ವಸ್ತುಸ್ಥಿತಿ ಹಾಗಿರ ಲಿಲ್ಲ ಅದೆಲ್ಲ ನನಗೆ ಇವತ್ತು ಬೆಳಿಗ್ಗೆ ಗೊತ್ತಾಯಿತು"

"ಬೇರೆ ಯಾರಾದರೂ ನಡುವೆ ಜಾರಿಸುತ್ತಿದ್ದರೋ ?"

"ಹೌದು ಇವತ್ತು ಬೆಳಿಗ್ಗೆ ನಾನು ಅವಲಕ್ಕಿಯ ಚಿಪ್ಪು ತೆಗೆದು ನೋಡಿದೆ ಅದರಲ್ಲಿ ತುಂಬ ಅವಲಕ್ಕಿ ಇತ್ತು ಎಂದಿಗಿಂತ ಹೆಚ್ಚೇ ಇತ್ತು ಚಿಪ್ಪಿನ ಭಾರವಾದರೂ ಬಹಳವಿತ್ತು ನಿನ್ನೆ ಹಾಗೆ ಹೇಳಿದ್ದಕ್ಕೆ ಇವತ್ತು ಹೀಗೆ ತುಂಬ ಅವಲಕ್ಕಿ ಹಾಕಿದ್ದಾರೆಂದು ಬಗೆದು, ಅಲ್ಲಿ ಕೂತು ತಿನ್ನತೊಡ ಗಿದೆ ಅಯ್ಯೋ ಮಹರಾಯಾ ! ಏನು ಹೇಳಲಿ ಆ ಅವಸ್ಥೆ ?"

"ಏನಾಯಿತು ?"

" ಬಾಯಿಯಲ್ಲಿ ಹೊಯಿಗೆಯೇ ತುಂಬಿತು ಮೈಯಲ್ಲಿ ಎಚ್ಚರವಿಲ್ಲದೆ ಚಿಪ್ಪಿನಲ್ಲಿ ಏನಿದೆಯೆಂದು ಲಕ್ಷಿಸದೆ, ಅವಲಕ್ಕಿಯನ್ನು ಕೈಯಿಂದ ಎತ್ತಿ ಬಾಯಿಗೆ ಹಾಕುತ್ತಿದ್ದೆ ಕೈಗೆ ಏನೋ ಬಿರುಸು ಬಿರುಸು—ದರಗು ದರಗು—ಹತ್ತಿತು ಬಹುಶಃ ಸಕ್ಕರೆ ಇರಬಹುದೆಂದು ಬಾಯಿಗೆ ಬಿಸಾಡಿದೆ ಬಾಯಿ ಅಲ್ಲಾಡಿಸ ಲಿಕ್ಕೆ ಸಾಧ್ಯವಾಗಲಿಲ್ಲ ಬಾಯಿ ತುಂಬ ಹೊಯಿಗೆ ಆಯಿತು! ಎಂಥ ಉಸುಕು ಅದೂ ಎಂದಿ? ಸಮುದ್ರದ ಬಿಳಿಯ ಹೊಯಿಗೆ! ಅದನ್ನು ಎಲ್ಲಿಂದ ಸಂಪಾದಿಸಿದ್ದರೋ ಗೊತ್ತಿಲ್ಲ ಪರಟೆಯ ಮುಕ್ಕಾಲು ಪಾಲು ಉಸುಕು—ಮೇಲಷ್ಟೆ ಅವಲಕ್ಕಿ ಇತ್ತು! ಅದನ್ನು ಹಾಗೆ ಯಾರು ಮಾಡಿ ದರು ಎಂದು ಯೋಚಿಸಿದೆ ಮೊದಲು ಅಣ್ಣಪ್ಪಯ್ಯನವರೆಂದೇ ತಿಳಿದು— ಅಳುತ್ತ ಅಲ್ಲಿಯೇ ಕೂತೆ ಆದರೆ ಅವರು ಅಲ್ಲಿಗೆ ಬಂದು ಅತ್ತಿತ್ತ ಹುಡುಕಾ ಡಿದಾಗ, ಅಲ್ಲಿಯೇ ಹೊರಗೆ ಯಾರೋ ಒಬ್ಬನು ಅವಲಕ್ಕಿಯ ಗಂಟು ಕಟ್ಟಿ ಇಟ್ಟಿದ್ದು ಕಂಡಿತು ಅದರಲ್ಲಿ ಈ ಪರಟೆಯೊಳಗಿನ ಅವಲಕ್ಕಿ ಇತ್ತು ಆದರೆ ಅದು ಯಾರ ಅರಿವೆಯೆಂದು ಗೊತ್ತಾಗಲಿಲ್ಲ ಆಗ ಹೇಳಿದರು ಧನಿಯರು, 'ಇದು ಯಾರೋ ಬೇಕೆಂದೇ ಮಾಡಿದ್ದು ದ್ವೇಷದಿಂದ ದಿವಸಾಗಲೂ ಅವನೇ ಯಾವನೋ ಒಬ್ಬವನು ಹೀಗೆ ಮಾಡಿರಬೇಕು ಇವತ್ತು ಈ ರೀತಿ ಮೋಸ ಮಾಡಿ ಹೋಗಿದ್ದಾನೆ' ಎಂದು ನನಗೂ ಅದು ನಿಜವೆಂದು ಅನಿಸಿತು ನಾನು ಅವರ ಮುಖವನ್ನು ದೀನಳಾಗಿ ನೋಡಿದೆ ನನ್ನದು ತಪ್ಪಾಯಿತು ಎಂದು ಮುಖ ಸಣ್ಣದು ಮಾಡಿಯೇ ತಿಳಿಸಿದೆ ಅವರ ಮಗ, ಅವರ ಮಗಳು ಎಲ್ಲರೂ ಬಂದು ನನ್ನನ್ನು ಸಮಾಧಾನ ಪಡಿಸಿದರು ಆಗ ನನಗೆ ಅಲ್ಲಿ ನಿಲ್ಲಲಿಕ್ಕೆ ನಾಚಿಕೆಯಾಯಿತು ಇಷ್ಟೇ ಅಲ್ಲ, ಈ ಊರಲ್ಲಿಯೇ ಇನ್ನು ಇರಬಾರದೆಂದು ಅನಿಸಿತು ಇವತ್ತು ಉಸುಕು ಹಾಕಿದರು ನಾಳೆ ಮನೆಗೆ ಉರಿ ಹಾಕಲಿಕ್ಕೂ ಹಿಂಜರಿಯುವ ಜನರಲ್ಲ—ಈ ಕರೆಯವರು" ಎಂದು ಶಿವರ್ಮಾಲೆ ಹೇಳುವಾಗ ಮನಸ್ಸಿನಲ್ಲೇ ಆನಂದಪಟ್ಟ ಕಾಂತಪ್ಪ

" ಹೀಗೋ ಹಾಗಾದರೆ, ನಾನೆಲ್ಲ ಅದಕ್ಕೆ ತಕ್ಕ ಉಪಾಯ ಮಾಡು ತ್ತೇನೆ ನೀನೇನು ಹೆದರುವುದು ಬೇಡ" ಎಂದು ಆತ ಅವಳಿಗೆ ಸಮಾಧಾನ ಹೇಳಿದ

"ಬಟ್ಟೆನಲ್ಲಿ ನನಗೊಂದು ಆಸ್ತಿ ನೋಡು "

"ಅದು ಅಂತೂ ಸೈಯೇ ಸೈ ಆದರೆ ನಿನಗೆ ಮುನಿದವರಿಗೆ ನಾನು ಬುದ್ಧಿ ಕಲಿಸದೆ ಇರಲಾರೆ "

" ನಾಯಿ ಕಚ್ಚಿತೆಂದು ಅದರ ಕಾಲಿಗೂ ನಾವು ಕಚ್ಚಬಾರದು ನಮಗೇ ಬುದ್ಧಿ ಇಲ್ಲ ಎಂದು ಆಗಬಾರದು "

" ನೀನೇನು ಹೆದರಬೇಡ ನಾನೆಲ್ಲ ನಿನ್ನ ಒಳ್ಳೆಯದಕ್ಕೇ ಮಾಡು ತ್ತೀನೆ ಅದೆಲ್ಲ ಹೋಗಲಿ ನಿನ್ನಲ್ಲಿ ಏನಾದರೂ 'ದೇವರ ಗಂಟು' ಉಂಟೋ ಹೇಳು ? "

" ಅಂದರೆ ? "

" ನಿನ್ನ ಕೈಯಲ್ಲಿ ಸ್ವಲ್ಪ ರೂಪಾಯಿಗಳು ಸಿಲ್ಕು ಇವೆಯೋ ಹೇಗೆ ? "

" ಯಾಕೆ ? "

" ಇದ್ದರೆ ಹೇಳು ನನ್ನ ಮೇಲೆ ನಂಬುಗೆ ಇಡು "

" ನಿನ್ನ ಮೇಲೆ ನನಗೆ ವಿಶ್ವಾಸ ಉಂಟು "

" ನಾನು ನಿನಗೆ ಮೋಸ ಮಾಡುವುದಕ್ಕೆ ಹೇಳುವುದಲ್ಲ ನೋಡು, ನಿನ್ನ ಪಾಡು ಮುಂದೇನಾಗುತ್ತದೆ ಎಂಬುದನ್ನು ನೀನು ಸ್ವಲ್ಪವಾದರೂ ಯೋಚಿಸಿದ್ದಿಯಾ? ಮನುಷ್ಯರಿಗೆ ವಜ್ರಾಯುಷ್ಯ ಇರುವುದಿಲ್ಲ ನೀನು ನೋಡಲಿಕ್ಕೆ ಚೆನ್ನಾಗಿ ಕಾಣುತ್ತಿ ನಿಜ ನೀನು ಅಷ್ಟು ಸುಖದಿಂದ ಬೆಳೆದಿ ರುವಿಯೆಂದು ನಿನಗೆ ಯಾವ ಜಡ್ಡು–ಜಾಪತ್ರೆಯಗಳು ಬಂದಿಲ್ಲ ಧನಿಗಳೂ ನಿನ್ನನ್ನು ಪ್ರೀತಿಯಿಂದ ಸಾಕುತ್ತ ಬಂದರು ಅವರಿಂದ ಆದ ಒಬ್ಬ ಮಗ ನನ್ನು ಬೇರೆ ಊರಿಗೆ ಕಳುಹಿಸಿದಿ ಅವನು ಈಗ ಏಳು ವರುಷದ ಹುಡುಗ ನಾಗಿರಬಹುದು ಅಲ್ಲವೋ ? "

"ಏಳು ಯಾಕೆ–ಇದು ಎಂಟು ನಡೆಯುತ್ತಾ ಇದೆ "

"ಆಗಲಿ ಅವನ ಸುಖದುಃಖವನ್ನು ನೀನು ಯೋಚಿಸಲೇ ಬೇಕು ನೀನು ಎಷ್ಟೆಂದರೂ ಪ್ರಾಯ ಆದವಳು ಅಂದರೆ ಮುದುಕಿಯಲ್ಲ ಬಿಡು ಒಂದೇ ಮಾತು ಹೇಳುವುದಾದರೆ, ನೀನು ಇಷ್ಟು ದಿನ ಬದುಕಿದ್ದಕ್ಕಿಂತ ಇನ್ನು ಬದುಕಬೇಕಾದ ದಿನಗಳು ಕಡಿಮೆ ದೇವರು ಯಾವಾಗ ಚೀಟಿ ಕಳುಹಿಸು ವಾನೆಂದು ಹೇಳಲಿಕ್ಕೆ ಬರುವುದಿಲ್ಲ ಆದ ಕಾರಣ ನೀನು ನಿನ್ನ ಮಗನಿಗೆ

ಏನಾದರೂ ಒಂದು ಜೀವನದ ದಾರಿ ತೋರಿಸಿ ಹೋಗಬೇಕು "

"ನೀನು ಹೇಳುವುದು ಎಲ್ಲ ಈಗ ಅರ್ಥವಾಯಿತು ಕಾಂತಪ್ಪಣ್ಣ ಆ ವಿಷಯದಲ್ಲಿ ನಿನ್ನಂಥವರು ಏನಾದರೂ ಸಹಾಯ ಮಾಡಿದರೆ ನನ್ನಂಥ ಹೆಣ್ಣು ಮಗಳು ಬದುಕಬಹುದು "

"ನೀನೇನು ಹೆದರಬೇಡ ನಿನ್ನಂಥವಳಿಗೆ ಸಹಾಯ ಮಾಡದಿದ್ದರೆ ಮತ್ತು ಯಾರಿಗೆ ಸಹಾಯ ಮಾಡಬೇಕು ? " ಎಂದು ಕಾಂತಪ್ಪ ಅಲ್ಲಿಯೇ ಗದ್ದೆಯ ಪುಣಿಯ ಮೇಲೆ ಹಾರೆ ಅಡ್ಡಹಾಕಿ, ಅದರ ಹಿಡಿಕೆಯ ಮೇಲೆ ಕುಳಿತುಕೊಂಡ ತಿರ್ಮಾಲೆಯೂ ಅವನ ಮುಂದೆ ಸ್ವಲ್ಪ ದೂರದಲ್ಲಿ ಕುಳಿತು ಕೊಂಡಳು ಪುನಃ ಕಾಂತಪ್ಪನೇ ಪ್ರಾರಂಭ ಮಾಡಿದ ಮಾತಿಗೆ

"ನಾನು ಹೇಳುವುದು ನಿನಗೆ ಅರ್ಥವಾಗಿರಲಿಕ್ಕಿಲ್ಲ ನೀನು ಒಂದು ಸಣ್ಣ ಆಸ್ತಿಯನ್ನು ಕ್ರಯಚೀಟು ಮಾಡಿಕೊಂಡು ಬಿಡು '

"ಆಸ್ತಿಯೇ ! ಅದಕ್ಕೆ ನನ್ನಲ್ಲಿ ಹಣವೆಲ್ಲಿಂದ ಬರಬೇಕು ? "

"ಹಣಕ್ಕೆ ನೀನು ಹೆದರಬೇಡ ಆಸ್ತಿ ಎಂದೊಡನೆ ಏನು ಊರನ್ನೇ ಕೊಳ್ಳುವುದೆಂದು ನಿನ್ನ ಅಭಿಪ್ರಾಯವೇ? ನೀನು ಈಗ ಗೇಣಿಗೆ ಹಿಡಿದ ಆಸ್ತಿಯಷ್ಟು ಸಣ್ಣ ಭೂಮಿಯನ್ನು ಖರೀದಿ ಮಾಡಲಿಕ್ಕೆ ಸಾವಿರಗಟ್ಟಲೆ ರೂಪಾಯಿ ಬೇಕೇ ? "

"ಏನಿಲ್ಲವೆಂದರೂ ಎಂಟು ನೂರು ರೂಪಾಯಿಗಳು ಬೇಕಾಗಬಹುದು "

"ಛೇ, ಅಷ್ಟೂ ಬೇಡ ಬರೇ ಐದು ನೂರಕ್ಕೆ ನಿನಗೆ ನಾನು ಎಂಟು ಮುಡಿ ಗೇಣಿ ಬರುವ ಒಳ್ಳೆಯ ಆಸ್ತಿಯನ್ನು ಕೊಡಿಸುತ್ತೇನೆ ಆಸ್ತಿಯೆಂದರೆ ಆಸ್ತಿ ಅದನ್ನು ಸಾಗುವಳಿ ಮಾಡಿದರೆ ಇಪ್ಪತ್ತು ಮುಡಿ ಅಕ್ಕಿಯನ್ನು ಒಂದೇ ಬೆಳೆಗೆ ತೆಗೆಯಬಹುದು "

"ಆ ಐನೂರು ರೂಪಾಯಿಗಳನ್ನಾದರೂ ನಾನು ಎಲ್ಲಿಂದ ತರಲಿ ? ಅಷ್ಟು ರೂಪಾಯಿಗಳನ್ನು ನಾನು ಕಣ್ಣಿನಿಂದ ನೋಡಿಲ್ಲ ಕೂಡ!"

"ಎಲ್ಲಿಂದ ಆದರೂ ಮಾಡಬೇಕು ಸಂಧಿ ಸಿಕ್ಕಾಗ ಬಿಡಬಾರದು. ನಿನ್ನಲ್ಲಿ ಸ್ವಲ್ಪವಾದರೂ 'ಗಂಟು' ಇರಬಹುದಲ್ಲ "

"ನಿನ್ನೊಡನೆ ಸುಳ್ಳು ಹೇಳಿ ಏನಾಗಬೇಕಾಗಿದೆ ? ನನ್ನ ಮಗನ ಆಣೆ

ಎಂದರೂ ನನ್ನಲ್ಲಿ ಮುನ್ನೂರ-ನಾಲ್ವತ್ತು ರೂಪಾಯಿಗಳು ಇವೆ ಅದೂ ನಾನು ಕೂಡಿಸಿಟ್ಟದ್ದು ಎಲ್ಲಾದರೂ ಅನಪತ್ಯಕ್ಕೆ ಬೇಕಾಗುತ್ತದೆಂದು ಇಷ್ಟನ್ನು ಬೇಕಾದರೆ ಕೊಡುತ್ತೇನೆ ಉಳಿದ ರೂಪಾಯಿಗಳಿಗೆ ಏನು ಗತಿ?"

"ಇದ್ದಾರಲ್ಲ ನಿನ್ನ ಧನಿಗಳು!"

"ಛೀ, ಅವರನ್ನು ಕೇಳುವುದು ತಪ್ಪು ಮತ್ತು ನನ್ನಿಂದ ಆ ಕೆಲಸ ಸಾಧ್ಯವಿಲ್ಲ ಅವರ ಉಪ್ಪು ನೀರು–ಅನ್ನ ಉಂಡು ಈಗ ಅವರ ಜಾಗಬಿಟ್ಟು ಹೋಗಲು–ಅವರೊಡನೆಯೇ ಹಣ ಕೇಳಲಿಕ್ಕೆ ನನಗೆ ಬಾಯಿ ಬರುವುದಿಲ್ಲ"

"ನೀನು 'ಹೂಂ' ಎಂದರೆ ನಾನು ಅದನ್ನೆಲ್ಲ ಕೈಗೂಡಿಸಿ ಕೊಡುತ್ತೇನೆ ಆಸ್ತಿಯು ನಿನ್ನ ವಶವಾಯಿತೆಂದೇ ತಿಳಿದುಕೋ ಆದರೆ ನೀನು ಒಪ್ಪಬೇಕು ನಾನು ಅಣ್ಣಪ್ಪಯ್ಯನವರ ಕೈಯಿಂದ ಉಳಿದ ಹಣ ಜಾರಿಸುತ್ತೇನೆ ಅವರನ್ನು ಒಪ್ಪಿಸುವುದು ನನ್ನ ಕೆಲಸ ಆದರೆ ನೀನು ಮಾತ್ರ ಯಾವ ಸುದ್ದಿಯನ್ನೂ ಹೇಳಬಾರದು–ಅವರಿಗೆ ನಾನು ಮತ್ತು ನೀನು ಇಬ್ಬರೂ ಕೂಡಿ ಕಾರ್ಕಳಕ್ಕೆ ಹೋಗಿ, ಆಪೀಸಿನಲ್ಲಿ ಆಸ್ತಿಯ ಕ್ರಯಚೀಟು ಮಾಡಿಕೊಂಡು ಬರುವ"

"ನೀನು ಇಷ್ಟು ಉಪಕಾರ ಮಾಡಿದರೆ ನಾನು ನಿನಗೆ ಖುಷಿಯಿಂದ ಇಪ್ಪತ್ತು ರೂಪಾಯಿ ಇನಾಂ ಕೊಡುತ್ತೇನೆ"

"ಇನಾಂ ಯಾವ ಮಣ್ಣಿಗೆ ನೀನು ಅಣ್ಣಪ್ಪಯ್ಯನವರಿಗೆ 'ಅಷ್ಟೇ ರೂಪಾಯಿಗೆ ಆಸ್ತಿ ಕ್ರಯಚೀಟು ಆಯಿತು' ಎಂದು ಹೇಳುವುದಿಲ್ಲ ಅಂತ ನನಗೆ ಆಣೆ ಭಾಷೆ ಮೊದಲು ಕೊಡು ಅಂದರೆ ಈ ಮಳೆಗಾಲದೊಳಗೆ ನಿನ್ನನ್ನು ಆ ನಿನ್ನ ಹಕ್ಕಿನ ಆಸ್ತಿಗೆ ಒಯ್ದು ತಲಪಿಸುತ್ತೇನೆ"

"ಆಣೆ ಭಾಷೆ ಬಿಟ್ಟು ಬೇಕಾದ್ದು ಕೊಡುತ್ತೇನೆ ಆದರೆ ಆಸ್ತಿ ಈ ಊರಿನಿಂದ ಕನಿಷ್ಟ ಪಕ್ಷಕ್ಕೆ ಮೂರು ನಾಲ್ಕು ಮೈಲುಗಳಷ್ಟಾದರೂ ದೂರ ಇರಬೇಕು"

"ಅದರ ಬಗ್ಗೆ ನೀನು ಆಲೋಚಿಸಬೇಕಾಗಿಲ್ಲ ಅದೇ ಆ ಎರ್ಮಾಲಿನಲ್ಲಿ ಪೇಟೆಗೂ ಹತ್ತಿರವಾಗುತ್ತದೆ ಆಸ್ತಿಗೆ ಒಳ್ಳೆಯ ನೀರಿನ ಆಶ್ರಯವಿದೆ"

"ಅಡ್ಡಿಯಿಲ್ಲ ಈ ಊರೇ ಬೇರೆ ಅಲ್ಲಿಯ ಜನರೂ ಒಳ್ಳೆಯವರು

ಬ್ಯಾರಿಗಳು ಸ್ವಲ್ಪ ಜಾಸ್ತಿ ಅಲ್ಲಿ ಅವರದೇನು ಹೆದರಿಕೆ ಇಲ್ಲ ನನಗೆ ”

“ ಬ್ಯಾರಿಗಳಾದರೇನಾಯಿತು ? ಅವರೊಡನೆ ನಾವೇನು ಕಾದಾಡ ಬೇಕಿಲ್ಲ. ನಾನು ಹೇಳಿದ ಆಸ್ತಿಯಾದರೂ ಬ್ಯಾರಿಯದ್ದೇ ಅವನು ನಿನ್ನೆ ನನಗೆ ಈ ಸುದ್ದಿ ಹೇಳಿದ ‘ ನನ್ನ ಆಸ್ತಿ ಮಾರುವುದಿದೆ, ಯಾರಿಗಾದರೂ ಬೇಕಾದರೆ ಹೇಳು ’ ಅಂತ ಹೇಳಿ ಹೋದ ಹೀಗೇ ಆಲೋಚನೆ ಮಾಡಿದೆ ನಿನ್ನ ನೆನಪು ಬಂತು ಅದಕ್ಕೆಂದೇ ನಾನು ನಿನ್ನೆ ನಿನ್ನ ಮನೆಗೆ ಬಂದದ್ದು ”

“ ನಿನಗೂ ಕರುಣೆಯುಂಟು ಮಹರಾಯಾ ನೀನು ಅದನ್ನು ಹೇಗಾದರೂ ಮಾಡಿ ನನಗೆ ತೆಗಿಸಿಕೊಡು ನಿನಗೆ ಪುಣ್ಯ ಬರುತ್ತದೆ ಏನೇ ಆಗಲಿ, ನನಗೆ ಒಮ್ಮೆ ಈ ಊರು ಬಿಟ್ಟು ಎಲ್ಲಿಯಾದರೂ ಹೋಗಬೇಕಾಗಿದೆ ”

“ ಅಲ್ಲಿಗೆ ಅಣ್ಣಪ್ಪಯ್ಯನವರಿಗೂ ಬಂದು ಹೋಗಲಿಕ್ಕೆ ಅನುಕೂಲವಾಗುತ್ತದೆ ಹೇಗಾದರೂ ಶನಿವಾರಕ್ಕೊಮ್ಮೆ ಎವರ್ಗಾಲ ಪೇಟೆಯಲ್ಲಿ ಸಂತೆ ಆಗುತ್ತದೆ ಕಾರಣ, ಸಂತೆಗೆ ಹೋದ ನೆವದಿಂದ ನಿನ್ನ ಮನೆಗೂ ಭೇಟಿ ಕೊಟ್ಟು ಬಂದ ಹಾಗೂ ಆಗುತ್ತದೆ ” ಎಂದು ಕಾಂತಪ್ಪ ನಗುತ್ತ ಹೇಳಿದ

“ ನೀನು ಎಷ್ಟು ಗಂಭೀರ ವಿಷಯಗಳನ್ನು ಮಾತಾಡುತ್ತ ಇದ್ದರೂ ನಿನ್ನ ಈ ಕುಶಾಲು ಮಾಡುವ ಸ್ವಭಾವ ಬಿಡುವುದಿಲ್ಲ ”

“ ಹಾಗಾದರೆ ನಾನು ಆ ಬ್ಯಾರಿಯೊಡನೆ ಮಾತಾಡಲೇ ?”

“ ನೀನು ನನಗಾಗಿ ಅಷ್ಟುಮಾಡು ಧನಿಗಳೊಡನೆಯೂ ಮಾತಾಡು ”

“ ಆ ಸುದ್ದಿ ಬಿಡು ನೀನು ನನಗೆ ‘ಭಾಷೆ’ ಕೊಡಲೇ ಇಲ್ಲವಲ್ಲ ”

“ ನನ್ನ ಮಗನ ಆಣೆ, ನನ್ನ ಕೊರಳ ಆಣೆ, ನನ್ನ ಅಪ್ಪನ ಆಣೆ, ದೇವರ ಆಣೆ—ಎಂದರೂ ನಾನು ಈ ಸುದ್ದಿಯನ್ನು ಯಾರೊಡನೆಯೂ ಹೇಳುವುದಿಲ್ಲ ” ಎಂದು ಅವನ ಕೈಮೇಲೆ ಕೈ ಇಟ್ಟು ಆಣೆ ಹಾಕಿ, ತಿಮ್ಮಾಲೆ ಹೇಳಿದಳು ಆಮೇಲೆ ಅವರು ಅಲ್ಲಿಂದ ಹೋದರು ಕಾಂತಪ್ಪನೂ ಹಿಗ್ಗಿನಿಂದ ಹೊರಟ ತಿಮ್ಮಾಲೆಯೂ ಸಂತೋಷದಿಂದ ನಡೆದಳು

ಮುಂದೆ ಒಂದೆರಡು ತಿಂಗಳು ಸತತವಾಗಿ ಪ್ರಯತ್ನಪಟ್ಟು ಕಾಂತಪ್ಪ ಆ ಎವರ್ಗಾಲದಲ್ಲಿಯ ಆಸ್ತಿಯನ್ನು ತಿಮ್ಮಾಲೆಯ ಹೆಸರಿನಿಂದ ಕ್ರಯಚೀಟು ಮಾಡಿಸಿದ ಈ ವ್ಯಾಪಾರದಿಂದ ಕಾಂತಪ್ಪನಿಗೆ ಸಾಕಷ್ಟು ಲಾಭವಾಗಿತ್ತು

ಆ ಲಾಭದಿಂದ ಅವನೂ ಒಂದು ಅಷ್ಟೇ ದೊಡ್ಡ ಆಸ್ತಿಯನ್ನು ಬೇಕಾದರೆ ಖರೀದಿ ಮಾಡಬಹುದಾಗಿತ್ತು ಆಸ್ತಿಯ ಕ್ರಯಚೀಟು ಆದದ್ದು ಮುನ್ನೂ ರಕ್ಕೆ ! ಅಣ್ಣಪ್ಪಯ್ಯನವರಿಂದ ಅದಕ್ಕಾಗಿ ಕೊಂಡ ರೂಪಾಯಿಗಳು ಮುನ್ನೂರು ! ತಿಮ್ಮಾಲೆ ಅವನಿಗೆ 'ಇನಾಂ' ಎಂದು ಕೊಟ್ಟ ರೂಪಾಯಿ ಗಳು ಮೂವತ್ತು ಕಾರ್ಕಳಕ್ಕೆ ಅವಳನ್ನು ಕ್ರಯ ಚೀಟು ಬರೆಯಿಸಿ ಕೊಳ್ಳಲು ಕರೆದುಕೊಂಡು ಹೋಗಿ, ಪುನಃ ಸುರಕ್ಷಿತವಾಗಿ ಎಡಹಿತ್ತಲಿಗೆ ಮುಟ್ಟಿಸುವುದರೊಳಗೆ ನಾಲ್ವತ್ತು-ಐವತ್ತು ರೂಪಾಯಿಗಳು ಕಾಂತಪ್ಪನ ಖಜಾನೆಗೆ ಗುಪ್ತವಾಗಿ ಸೇರಿದ್ದವು

ಇತ್ತ ರಾಮದಾಸ ಕೂಡಾ " ಅವಳನ್ನು ಹೇಗಾದರೂ ಊರಿನಿಂದ ಅಟ್ಟಿದಿ " ಎಂದು ಆನಂದಪಟ್ಟು ಇಪ್ಪತ್ತು ರೂಪಾಯಿಗಳನ್ನು ಖುಷಿಯೆಂದು ಅವನಿಗೆ ಕೊಟ್ಟಿದ್ದ ಅಣ್ಣಪ್ಪಯ್ಯನವರಿಗೂ ಕಾಂತಪ್ಪನ ಕುಶಾಗ್ರ ಬುದ್ಧಿ ಯನ್ನು ನೋಡಿ ಆನಂದವಾಗಿತ್ತು ಅಲ್ಲದೆ, ತಿಮ್ಮಾಲೆಗೆ ಒಂದು ಆಸ್ತಿ ಕೊಡಿಸಿದೆನೆಂದು ಹಿಗ್ಗಿದ್ದರು ಅಂತೇ ಅಷ್ಟೆಲ್ಲ ಕೆಲಸಗಳನ್ನು ಸಾಧಿಸಿದ ಕಾಂತಪ್ಪನ ಮೇಲೆ ಅವರಿಗೆ ಒಳ್ಳೆಯ ಮಮತೆ ಹುಟ್ಟಿತು ಅದಕ್ಕಾಗಿ ಅವ ನಿಗೆ, " ತಕೋ ನಿನಗೆ ನಾಲ್ಕಾಣೆ ಕಳ್ಳು ಕುಡಿಯಲಿಕ್ಕೆ " ಎಂದು ನಾಲ್ಕಾಣೆ ಕೊಟ್ಟು, ತಮ್ಮ ಪಟ್ಟೆಯ ಶಾಲನ್ನು ' ಇನಾಂ ' ಕೊಟ್ಟಿದ್ದರು ಒಟ್ಟಿನಲ್ಲಿ ಕಾಂತಪ್ಪ ಈ ಸುಸಂಧಿಯಲ್ಲಿ ಜಾಣತನದಿಂದ ಪಾರಾದ

ಮಳೆಗಾಲ ಪ್ರಾರಂಭವಾದೊಡನೆ ತಿಮ್ಮಾಲೆಯ ಬೇಸಾಯ ಎಮ್ಮಾಲಿ ನಲ್ಲಿ ಭರದಿಂದ ಸಾಗಿತು ಒಮ್ಮೊಮ್ಮೆ ಎಮ್ಮಾಲಿನ ವರೆಗೆ ಕಾಂತಪ್ಪ ಹೋಗಿ, ಅವಳಿಗೆ ಬೇಸಾಯದ ಹದವನ್ನೂ ಹೇಳಿ ಬರುತ್ತಿದ್ದ ತಿಮ್ಮಾಲೆ ಅವನ ಮೇಲೆ ಅಪಾರವಾದ ವಿಶ್ವಾಸವಿಟ್ಟಳು " ನಿನ್ನ ಉಪಕಾರವನ್ನು ಹೇಗೆ ಮರೆಯಲಿ ಮಹಾರಾಯ " ಎಂದು ಒಮ್ಮೆ ಅವಳು ಪ್ರಾಮಾಣಿಕತನ ದಿಂದ ಹೇಳಿದಳು ಮತ್ತೊಮ್ಮೆ " ನೀನು ಮಾಡಿದ ಉಪಕಾರವನ್ನು ಸತ್ತರೂ ಮರೆಯುವ ಹಾಗಿಲ್ಲ ಇಲ್ಲಿ ನಾನು ಬಹಳ ಸುಖವಾಗಿ ಇದ್ದೇನೆ " ಎಂದೂ ಹೇಳಿದ್ದಳು.

ಅಣ್ಣಪ್ಪಯ್ಯನವರಾದರೂ ಕಾಂತಪ್ಪನ ಈ ಹೊಸ ವ್ಯವಸ್ಥೆಯಿಂದ ಪ್ರಫುಲ್ಲರಾದರು. ಅವರ ಒಂದು ಕಾರ್ಯಕ್ರಮದಲ್ಲಿ ಮಾತ್ರ ದೊಡ್ಡ ಬದ

ಲಾವಣಿಯಾಯಿತು ಅವರು ಪ್ರತಿ ಸೋಮವಾರ ಸಂಪಿಗೆಗೆ ಸಂತೆಗೆಂದು ಹೋಗುತ್ತಿದ್ದರಷ್ಟೆ ಈಗ ಅಲ್ಲಿಗೆ ಹೋಗುವುದಿಲ್ಲ ಶಿವರ್ಗಾಲಿ ಎಡ ಹಿತ್ತಲು ಬಿಟ್ಟ ಮೇಲೆ, ಅವರು ಎವರ್ಗಾಲ ಸಂತೆಗೆ ಶನಿವಾರ ದಿವಸ ಹೋಗ ಲಿಕ್ಕೆ ಪ್ರಾರಂಭಿಸಿದರು ಎಷ್ಟೋ ಜನರು "ಎವರ್ಗಾಲ್ ಶಿವರ್ಗಾಲಿ" ಎಂದು ಶಿವರ್ಗಾಲಿಯ ಹೆಸರಿನ ಹಿಂದೆ ಒಂದು ಅಡ್ಡ 'ಹೆಸರನ್ನೂ ಹಚ್ಚಿ ಅವಳ ಬಗ್ಗೆ ಚರ್ಚೆ ನಡೆಸಿದ್ದರು—ಎಡಹಿತ್ತಲು ಮೊದಲಾದ ಕರೆಗಳಲ್ಲಿ

ಇದನ್ನೆಲ್ಲ ಅಣ್ಣಪ್ಪಯ್ಯ ಕಿವಿಗೆ ಒಯ್ಯುತ್ತಿದ್ದಿಲ್ಲ ಅವರು ಸಂತೆಗೆ ಹೋಗುವುದನ್ನೂ ಬಿಡಲಿಲ್ಲ ಅವರೊಡನೆ ಕಾಂತಪ್ಪನೂ ಎವರ್ಗಾಲ ಸಂತೆಗೆ ಹೋಗುತ್ತಿದ್ದ ಆದರೆ ಬರುವಾಗ ಕಾಂತಪ್ಪ ಬೇಗ ಒಬ್ಬನೇ ಬರು ತ್ತಿದ್ದ ಅವರು ಸ್ವಲ್ಪ ತಡಮಾಡಬೇಕಾಗುತ್ತಿತ್ತು ಹೀಗೆ ದಿನಗಳಂತು ಕಳೆಯುತ್ತಿದ್ದವು

ಒಮ್ಮೆ ಮಳೆಗಾಲದ ಒಂದು ದಿನ ಶನಿವಾರ ಸಂತೆಗೆ ಕಾಂತಪ್ಪನೊ ಬ್ಬನೇ ಹೋಗಿದ್ದ ಅವನೊಡನೆ ಅಣ್ಣಪ್ಪಯ್ಯ ಹೋಗಲು, ಅವರಿಗೆ ಕಾಲಿಗೆ ಒಂದು ಮುಳ್ಳು ತಾಗಿದುದರಿಂದ ನಡೆಯಲಿಕ್ಕೆ ಸಾಧ್ಯವಿರಲಿಲ್ಲ ಕಾರಣ, ಅವನ ಕೈಯಲ್ಲಿ ಹತ್ತಾಣೆ ಕೊಟ್ಟು, "ಎರಡು ಸೂಡಿ ಎಲೆ-ನಮ್ಮ ಮನೆಗೆ ತಾ ಉಳಿದ ಆರಾಣೆಯ ಸಾಮಾನುಗಳನ್ನು ಅವಳ ಮನೆಗೆ ಕೊಟ್ಟು ಬಾ ಹೂಂ, ಸಾಮಾನುಗಳು ಅಂದರೆ ಗೊತ್ತಿದೆಯಲ್ಲ–ಒಂದು ಸೇರು ಉಪ್ಪು ಒಂದು ಸೇರು ಮೆಣಸು ಮತ್ತು ಬೆಲ್ಲಗಿಲ್ಲ 'ಬೇಕೋ' ಎಂದು ಕೇಳಿ-ಬೇಕಾ ದರೆ ಒಂದೆರಡು ಸೇರು ಬೆಲ್ಲವನ್ನೂ ತೆಗೆಸಿ ಕೊಟ್ಟು ಬಾ" ಎಂದು ಹೇಳಿದ್ದರು

"ಅದೀತು" ಎಂದು ಕಾಂತಪ್ಪ ಎವರ್ಗಾಲ ಸಂತೆಗೆ ಹೋದ ಮೊದಲು ಸೀದಾ ಶಿವರ್ಗಾಲಿಯ ಮನೆಗೆ ಹೋಗಿ ಅವಳಿಗೆ ಏನೇನು ಸಾಮಾ ನುಗಳು ಬೇಕೆಂಬುದನ್ನು ಕೇಳಿಕೊಂಡನು ಆ ಮೇಲೆ ಸಂತೆ ನಡೆಯುವ ಜಾಗಕ್ಕೆ ಹೋಗಿ, ತನಗೆ ಬೇಕಾದ ಎಲ್ಲ ಸಾಮಾನುಗಳನ್ನು ಖರೀದಿ ಮಾಡಿ ಕೊಂಡ ಆಗ ಅವನಿಗೆ ಅವನ ಒಂದೆರಡು ಗೆಳೆಯರ ಭೇಟಿಯಾಯಿತು ಅವರೊಡನೆ ಕೋಳಿಗಳ ಸುದ್ದಿ ಮಾತಾಡುತ್ತ ಹೊಟೇಲಿನಲ್ಲಿ ಕೂತ ಕಾಂತ ಪ್ಪನಿಗೆ ಕತ್ತಲಾಗುತ್ತ ಬಂದದ್ದು ಅರಿವಿಗೆ ಬರಲೇ ಇಲ್ಲ

ಅವರೇ "ಹೊ! ಹೊತ್ತು ಮುಳುಗಿತು" ಎಂದು ಅವನಿಗೆ ಕಾಫಿ

ಕುಡಿಸಿ, ಮನೆಗೆ ಕಳುಹಿಸಬೇಕಾಯಿತು

ಎರ್ಮಾಲ ಸಂತೆಯಿಂದ ತಿರ್ಮಾಲೆಯ ಮನೆಗೆ ಮುಟ್ಟುವಾಗ ಕತ್ತ ಲಾಗಿ, ಚೆನ್ನಾಗಿ ದಾರಿ ಕಾಣುತ್ತಿರಲಿಲ್ಲ ಕಾರಣ ಅವಳ ಮನೆಯಿಂದ ಒಂದು ಸೂಟೆ ಕಟ್ಟಿಕೊಂಡು ಬೆಂಕಿ ಹಚ್ಚಿ ಒಯ್ಯಬೇಕೆಂದು ಯೋಚಿಸಿದ ಅವಳಿಗೆ ಸಲ್ಲತಕ್ಕ ಎಲ್ಲ ಸಾಮಾನುಗಳನ್ನು ಕೊಟ್ಟ ಅವಳು ಅವುಗಳನ್ನು ಒಳಗೆ ಇಟ್ಟಳು

ಪುನಃ ಹೊರಗೆ ಬಂದು " ಧನಿಗಳಿಗೆ ಏನಾಗಿದೆ ?" ಎಂದು ಕೇಳಿದಳು ಅವರಿಗೆ ಕಾಲಿಗೆ ಮುಳ್ಳುತಾಗಿ ನಡೆಯಲಿಕ್ಕೆ ಆಗುವುದಿಲ್ಲ ಎಂಬ ಉತ್ತರ ವನ್ನು ಅವಳಿಗೆ ಕೊಟ್ಟು ಕಾಂತಪ್ಪ ಹೊರಡಲು ಅಣಿಯಾದ "ಕತ್ತಲಾಗಿದ, ಈಗ ಎಲ್ಲಿ ಹೋಗುವುದು ?" ಎಂದು ಕೇಳಿದಳು ಆಕೆ

"ಬೆಳಕಿಗೆ ಸೂಟೆ ಒಯ್ಯುತ್ತೇನೆ"

"ನಮ್ಮ ಸುಬ್ಬನೂ ಇವತ್ತು ಮನೆಯಲ್ಲಿ ಇಲ್ಲ ನಿನ್ನ ಬ್ಯಾಟ್ರಿ ತರ ಲಿಲ್ಲವೊ ?"

"ಬ್ಯಾಟ್ರಿ ಮರೆತು ಬಂದೆ ಪೇಟೆಯಲ್ಲಿ ಮಾತಾಡುತ್ತ ಕೂತಾಗ ಕತ್ತ ಲಾದದ್ದು ತಿಳಿಯಲೇ ಇಲ್ಲ"

"ಇವತ್ತು ಅಮವಾಸ್ಯೆ ಭಾರೀ ಕತ್ತಲು ರಾತ್ರಿ ಇಲ್ಲಿಯೇ ಮಲಗಿ ನಾಳೆ ಬೆಳಗ್ಗೆ ಬೇಗ ಹೋಗು ನನ್ನ ಮನೆಯಲ್ಲಿ ಊಟ ಮಾಡಬಾರದೆಂ ದಿಯೇ ?"

"ಇವತ್ತು ರಾತ್ರಿ ಇಲ್ಲಿ ಮಲಗಿದರೆ, ನಾಳೆ ನನ್ನ ಹೆಂಡತಿ ಸೊಂಟ ಮುರಿ ದಾಳು" ಎನ್ನುತ್ತ ಕಾಂತಪ್ಪ ತನ್ನ ಮನೆಯತ್ತ ನಡೆದೇಬಿಟ್ಟ

೫

ಸಾವಿತ್ರಿ ಹೇಳಿದಂತೆ ಸಾವಿರಾರು ಜಾತಕಗಳು ಸುಬ್ಬಿಯ ಮನೆಗೆ ಬಂದವು ನಿಜ ಆದರೆ ಶಂಕರನ ಮಾತುಗಳನ್ನು, ಯೋಜನೆಗಳನ್ನು ಮತ್ತು ಕ್ರಿಯೆಗಳನು ಕಿವಿಯಾರೆ ಕೇಳಿದವರು, ' ಜಾತಕ ಕೊಟ್ಟು ಮೋಸದಲ್ಲಿ

ಬಿದ್ದಿವಲ್ಲ ' ಎಂದು ಹೇಳುವಂತಾಯಿತು ಯಾಕಂದರೆ ಅವರು ಅವನಲ್ಲಿ ಏನಿಲ್ಲವೆಂದರೂ ಕಾಲು ಲಕ್ಷಕ್ಕೆ ಕಡಿಮೆ ಇಲ್ಲದಷ್ಟು ರೂಪಾಯಿಗಳು ಇರಲಿಕ್ಕೇ ಬೇಕು ಎಂದು ಹಾರಿಕೆ ಸುದ್ದಿಯಿಂದ ಮಾತ್ರ ಮೋಹಿಸಲ್ಪಟ್ಟಿದ್ದರು ಶಂಕರನ ಮನೆಗೆ ಬಂದು ನೋಡಿದೊಡನೆ " ಥೂತ್ ಆ ಮಂಗನ ತಲೆ ನೆಟ್ಟಗಿಲ್ಲ " ಎಂದು ಹೇಳಿ ಹೋಗಿದ್ದರು

ಅವನು ಕಟ್ಟುತ್ತಿರುವ ಬಂಗಲೆ ಏನೋ ದೊಡ್ಡದು ಅದು ನೋಡ ಲಿಕ್ಕೂ ಚಂದವಾಗಿತ್ತು ಆದರ ವ್ಯವಸ್ಥೆ ಆವರಣಗಳೆಲ್ಲವೂ ಅವರಿಗ ಚೆನ್ನಾಗಿ ಕಂಡವು ಆದರ ಉದ್ದೇಶವನ್ನು ಕೇಳಿ, ಅವರೆಲ್ಲ ' ಇಂಥವನಿಗೆ ಹೆಣ್ಣು ಕೊಡುವುದಕ್ಕಿಂತ ಬಾವಿಗೆ ದೂಡಿದರೆ ಲೇಸು ' ಎಂದು ಮನಸ್ಸಿನಲ್ಲಿ ನೆನೆದು ಕೊಂಡರು ಅವನ ತಾಯಿಗೂ ಸಹ ಮಗನ ಕೆಲಸಗಳೆಲ್ಲ ಹುಚ್ಚರ ಆಟ ದಂತೆ ಕಂಡವು ಅದಕ್ಕಾಗಿ ಅವಳು ಕೊರಗಿದಳು ಹೊನ್ನಪ್ಪಯ್ಯನವರಿಂದ ಮಗನಿಗೆ ಬುದ್ಧಿ ಹೇಳಿಸಿದಳು ಸಾವಿತ್ರಿಗೂ ಹಾಗೆ ಮಾಡಲು ತಿಳಿಸಿ ಯಾಗಿತ್ತು

ಎಡಹಿತ್ತಲು ಅಣ್ಣಪ್ಪಯ್ಯನವರು ಕೂಡಾ ಒಮ್ಮೆ ಶಂಕರನಿಗೆ ಬುದ್ಧಿ ಹೇಳಲು ಬರಬೇಕಾಯಿತು—ಸುಬ್ಬಿಯ ಹಟಕ್ಕೆ ಅವರು ಆ ಬಂಗಲೆಯನ್ನು ಮೊದಲು ನೋಡಿರಲಿಲ್ಲ ಅದೇ ಮೊದಲು ನೋಡಿದೊಡನೆ ಅವರ ಎದೆಯಲ್ಲಿ ಸಂಕಟವಾಯಿತು. ತಲೆ ತಿರುಗಿದಂತೆಯೂ ಆಯಿತಂತೆ

"ಹುಡುಗ ಎಷ್ಟೆಲ್ಲ ಹಣ ಇಷ್ಟಕ್ಕೆ ಹಾಳು ಮಾಡಿರಬಹುದು ಸುಬ್ಬಿ! ಒಟ್ಟಾರೆ ಇದೇನೋ ಕೆಡುವ ಕಾಲ 'ವಿನಾಶ ಕಾಲೇ ವಿಪರೀತ ಬುದ್ಧಿಃ' ಅನ್ನುತ್ತಾರಲ್ಲ ಹಾಗೆ " ಎಂದು ಸುಬ್ಬಿಗೆ ಹೇಳಿದರು ಅಲ್ಲಿ ಆ ಬಂಗಲೆ ಯನ್ನು ನೋಡುತ್ತ ಬಹಳ ಹೊತ್ತು ನಿಲ್ಲಲಿಕ್ಕೂ ಅವರಿಗೆ ಸಾಧ್ಯವಾಗಲಿಲ್ಲ ಅಲ್ಲಿಂದ ಅಣ್ಣನ ಮನೆಗೆ ಹೋದರು ಹೊನ್ನಪ್ಪಯ್ಯ ಮತ್ತು ಸಾವಿತ್ರಿ ಚಾವಡಿಯಲ್ಲೇ ಇದ್ದರು ಆಗ ಅಣ್ಣಪ್ಪಯ್ಯ ಮತ್ತು ಸುಬ್ಬಿ ಚಾವಡಿ ಹತ್ತಿದರು "ಬನ್ನಿ" ಎಂದು ಸಾವಿತ್ರಿ ಸ್ವಾಗತಿಸಿದಳು

ಅಣ್ಣಪ್ಪಯ್ಯ ಬಂದವರೇ ಚಾವಡಿಯ ಸಿಮೆಂಟಿನ ತಣ್ಣಗಾದ ನೆಲದ ಮೇಲೆ ' ರಾಮ್, ರಾಮ ರಾಮಾ ' ಎನ್ನುತ್ತ ತಟ್ಟನೆ ಅಂಗಾತ ಬಿದ್ದರು. ಮತ್ತೂ ಒಮ್ಮೆ ' ರಾಮ ರಾಮಾ ' ಎಂದರು. ' ಉಸ್ ' ಎಂದು ತಮ್ಮ

ಎಲೆವಸ್ತ್ರದಿಂದ ಗಾಳಿ ಹಾಕಿಕೊಂಡರು ಆಗ ಸುಬ್ಬಿ "ಇಲ್ಲಿಗೆ ಶಂಕರ ಬಂದಿದ್ದಾನೆಯೇ ?" ಎಂದಳು

ಶಂಕರ ಅಂದು ಬೆಳಗ್ಗೆ ಬೇಗ ಎದ್ದು ಸಂಪಿಗೆಗೆ ಹೋಗಿದ್ದ ಮಧ್ಯಾಹ್ನ ಹೊತ್ತು ಮೀರಿತ್ತು ಅವಳಿಗ ಅವನು ಎಲ್ಲಿಗೆ ಹೋಗಿದ್ದಾನೆಂಬುದು ಗೊತ್ತಾಗಿರಲಿಲ್ಲ ಅದಕ್ಕಾಗಿ ಹಾಗೆ ಕೇಳಿದಳು ಅದಕ್ಕೆ ಸಾವಿತ್ರಿ "ಅವನು ಸಂಪಿಗೆಗೆ ಹೋಗಿರಬಹುದು" ಎಂದು ಹೇಳಿ, ಅಲ್ಲಿಗೆ ಹೋದ ಕಾರ್ಯವನ್ನು ತಿಳಿಸಿದಳು ಹೀಗೆ ಸಾವಿತ್ರಿ ಮತ್ತು ಸುಬ್ಬಿ ಮಾತಾಡುತ್ತ ಕುಳಿತಾಗ ಅಣ್ಣಪ್ಪಯ್ಯ "ನನ್ನ ಹೊಟ್ಟೆಯಲ್ಲಿ ಉರಿ ಏನು ಉರಿಯಪ್ಪಾ! ಛೇ ತಡೆಯಲಿಕ್ಕೆ ಸಾಧ್ಯವಿಲ್ಲ ಸಾವಿತ್ರಿ ಬೇಗ ಒಂದು ತಂಬಿಗೆ ನೀರು ತಾ" ಎಂದು ಸ್ವಲ್ಪ ಗಾಬರಿಯಿಂದ ಹೇಳಿದರು ಸಾವಿತ್ರಿ ಒಳಗೆ ಹೋಗಿ ಒಂದು ದೊಡ್ಡ ತಂಬಿಗೆಯಲ್ಲಿ ನೀರು ಮತ್ತು ಒಂದು ಅಚ್ಚು ಬೆಲ್ಲವನ್ನೂ ತಂದು ಅವರ ಮುಂದೆ ಇರಿಸಿದಳು ಆ ಬೆಲ್ಲವನ್ನು ಕಚ್ಚಿ ತಿಂದು, ತಂಬಿಗೆಯ ನೀರನ್ನೆಲ್ಲ ಬರಿದು ಮಾಡಿ, "ಹರೇ ರಾಮಾ!" ಎಂದು ರಾಮನ ಹಿಂದೆ ಹರಿಯ ಹೆಸರನ್ನು ಜಪಿಸಿ, "ಅಯ್ಯಬ್ಬ" ಎನ್ನುತ್ತ ಎಲೆಅಡಿಕೆಯ ಪೆಟ್ಟಿಗೆಯ ಹತ್ತಿರ ಆಸನ ಹಾಕಿದರು ಎಲೆಅಡಿಕೆ ತಿನ್ನುತ್ತ ಮಾತಿಗೆ ಪ್ರಾರಂಭಿಸಿಯೇ ಬಿಟ್ಟರು

"ಅಲ್ಲಿ ಹೇಗೋ ಮಾಡಿ ಹಣ ಗಂಟುಕಟ್ಟಿಕೊಂಡು ತಂದ ಅದನ್ನೆಲ್ಲ ಇಲ್ಲಿ ಹಾಕಿಯೂ ಆಯಿತಲ್ಲ! ಇನ್ನೇನು ಉಳಿಯಿತು ? ಕೇವಲ ಎಂಟೇ ತಿಂಗಳಲ್ಲಿ ಅಷ್ಟು ದೊಡ್ಡ ಬಂಡಸಾಲೆ ತಯಾರಾಯಿತೇ ?" ಎಂದರು ಅಣ್ಣಪ್ಪಯ್ಯ

"ಹಣವಿದ್ದರೆ ಎಲ್ಲವೂ ಆಗುತ್ತದೆ" ಎಂದು ಹೊನ್ನಪ್ಪಯ್ಯ ಉತ್ತರಿಸಿದರು

"ಹಣವಿದೆಯೆಂದು ಹೀಗೆಲ್ಲ ಮಾಡುವುದೇ ? ಅದರಲ್ಲಿ ಏನೋ ಸಾಲೆಯೋ-ಧರ್ಮಸಾಲೆಯೋ ನಡೆಯುತ್ತದಂತಲ್ಲ ?"

"ಹೌದಂತೆ ಅಲ್ಲಿ ಮುಂದೆ ಗೇಟಿನಹತ್ತಿರ ಬರೆದ ಬೋರ್ಡು ಓದ ಲಿಲ್ಲವೋ ನೀನು ? 'ಕಲಾನಿಕೇತನ' ಎಂದು ಬರೆದಿದೆಯಲ್ಲ ?"

"ಹೌದು, ಓದಿದೆ 'ಕಲಾನಿಕೇತನ' ಅಂದರೆ ಅಲ್ಲಿ ಎಲ್ಲ ಬಡವರೂ ಬಂದು ಧರ್ಮಾರ್ಥ ವಿದ್ಯೆ, ಊಟ, ವಸತಿಗಳನ್ನು ಪಡೆಯುವುದೋ ?"

" ಶಂಕರನ ವಿಚಾರವೇನೋ ಹಾಗಿದೆ ನಾನೆಷ್ಟು ಹೇಳಿದೆ ಅವನಿಗೆ! ಅವನೇನು ಕೇಳಲಿಲ್ಲ ಇಷ್ಟರಲ್ಲೇ ಎರಡು ಮೂರು ಸಾವಿರ ರೂಪಾಯಿ ಪುಡಿಮಾಡಿ ಆಯಿತು "

" ಅಬ್ಬಾ ! ಓಮ್ ನಮೋ ಶಿವಾಯ ಎರಡು ಸಾವಿರ ರೂಪಾಯಿ ! ಅಷ್ಟೆಲ್ಲ ರೂಪಾಯಿಗಳನ್ನು ಹೇಗೆ ಕೂಡಿಸಿದನಪ್ಪಾ ! ಅಷ್ಟು ರೂಪಾಯಿ ಅದಕ್ಕೆ ಖರ್ಚಾಗಿರಬಹುದು ಬಿಡು ಎಲ್ಲ ಕಲ್ಲಿನದ್ದೇ ಕಟ್ಟಡ ಸುತ್ತೆಲ್ಲ ಕಂಪೌಂಡು ಕಟ್ಟಿಸಿದ್ದಾನೆ ನೋಡಲಿಕ್ಕ ಎಲ್ಲ ಗಿಲೀಟಾಗಿ ಕಾಣು ತ್ತದೆ ಒಳಗೆ ಎಲ್ಲ ವ್ಯವಸ್ಥೆಯೂ ಸಜ್ಜಾಗಿದೆ ಅವನ ವಯಸ್ಸ ನೋಡಿದರೆ ಅವನ ತಲೆಗೆ ಅಷ್ಟೆಲ್ಲ ವಿಚಾರ ಹೇಗೆ ಹೊಳೆಯಿತೆಂದು ತಿಳಿಯುವುದೇ ಆಶ್ಚರ್ಯವಾದೀತು ನಮ್ಮ ದೇಶದಲ್ಲಿಯೇ ಶಂಕರ ಕಟ್ಟಿಸಿದ ಆ ' ಕಲಾ ನಿಕೇತನ ' ಮೊದಲನೆಯದೆಂದು ಕಾಣುತ್ತದೆ ಇವನಂಥ ತಲೆ ಬೇರೆ ಯಾರಿಗೆ ಬಂದೀತು ? "

" ಶಂಕರನ ತಲೆ ಎಲ್ಲ ಚುರುಕು ಇದೆ ಅವನ ವಿಚಾರಗಳೂ ಸರಿ ಯೆಂದು ಅನಿಸಬಹದು ಆದರೆ ಈ ಊರಿನ ಶ್ರೀಮಂತರ ಹೊಟ್ಟೆಕಿಚ್ಚಿ ನಿಂದ ಅವನು ಉರಿಯದೆ ಉಳಿದರೆ ನಮ್ಮ ಪುಣ್ಯ ಅವನು ಕಟ್ಟಿಸಿದಂತಹ ಆಶ್ರಮಗಳು ನಮ್ಮ ಹಿಂದುಸ್ಥಾನದಲ್ಲೇ ಬಹಳ ಕಡಿಮೆ ಇಂಥ ಸಾಲೆ ಗಳನ್ನ ಕಟ್ಟಿಲು ಶಂಕರ ಮೊದಲಿಗನಲ್ಲ ನೀನು ಆ ರವೀಂದ್ರನಾಥ ಟಾಗೋರರ ಪಾಠ ಓದಲಿಲ್ಲವೋ ? "

" ಹೋ ! ಹೌದು ನಮ್ಮ ನಾಲ್ಕನೆಯ ಕ್ಲಾಸಿನ ಪುಸ್ತಕದಲ್ಲಿ ಇತ್ತಲ್ಲ? ಈಗ .. ನೆನಪಿಗೆ ಬಂತು ನೋಡು ಅವರೇನೋ ' ಶಾಂತಿನಿಕೇತನ ' ಅಂತ ಒಂದು ಆದರ್ಶ ಸಾಲೆಯನ್ನು ಕಟ್ಟಿಸಿದ್ದರಂತಲ್ಲ ? "

" ಹೌದು ಅದೇ ರೀತಿಯಲ್ಲಿ ನಮ್ಮ ಶಂಕರನು ಇಲ್ಲಿ ಒಂದು ಅಂಥಾ ವಿದ್ಯಾಲಯವನ್ನು ಕಟ್ಟಿದ್ದಾನೆ ಅದರಿಂದ ದೇಶದ ಸೇವೆ ಮಾಡಬೇಕೆಂಬುದು ಅವನ ಆಸೆ "

" ಅದೆಲ್ಲ ಸರಿ ಆದರೆ ಅಂಥ ಆಶ್ರಮಗಳನ್ನು ಇಂಥ ಹಳ್ಳಿಗಳಲ್ಲಿ ತೆರೆಯಬಾರದು ಪಟ್ಟಣಗಳಾದ ಮಂಗಳೂರೋ, ಮೈಸೂರೋ, ಮೊದಲಾದ ಕಡೆಗಳಲ್ಲಿ ತೆರೆದರೆ—ಶಂಕರನ ಹೆಸರು ಉಳಿದೀತು ಇಲ್ಲಿಯ ಜನರಿಗೆ ಇಂಥ

ಧರ್ಮಗಳು ಬೇಕಾಗಿಲ್ಲ ”

“ ಶಂಕರನ ಧ್ಯೇಯಗಳೇ ಬೇರೆ ಅವನಿಗೆ ಹೆಸರು ಗಳಿಸುವ ಸ್ವಾರ್ಥ ಇಲ್ಲ ಅವನ ವಿಚಾರಗಳನ್ನು ತಿಳಿದುಕೊಳ್ಳುವುದಕ್ಕೆ ನನಗೇ ಒಂದೆರಡು ತಿಂಗಳು ಹಿಡಿಯಿತು ಅವನ ಪ್ರಕಾರ ನೋಡಿದರೆ ಅವನು ಹೇಳುವುದು ಸರಿಯೆಂದು ಅನಿಸುತ್ತದೆ ”

“ ಆದರೆ ಅದಕ್ಕೆಲ್ಲ ಹಣ ಬೇಕಲ್ಲ ಅದಕ್ಕೇನು ಗತಿ ? ಈಗ ಒಂದೆರಡು ವರುಷ ಅವನ ಕೈಯಲ್ಲಿರುವ ಹಣ ಸಾಕಾಗಬಹುದು ಆ ಮೇಲೆ ಏನು ಮಾಡುತ್ತಾನೆ ”

“ ಅದೇ ವಿಷಯದಲ್ಲಿ ನನಗೂ ಅವನಿಗೂ ವಾಗ್ವಾದ ಆಯಿತು ಅವನು ಹೇಳುತ್ತಾನೆ, ‘ ದೇವರಿದ್ದಾನೆ ನೋಡುವ ’ ಎಂದು ಅದಕ್ಕೆ ನಾನು ಹೇಳಿದೆ ‘ ದೇವರು ನಿನ್ನ ಆಸ್ತಿಯನ್ನು ಮಾರುವುದಕ್ಕೂ ಹಿಂಜರಿಯುವುದಿಲ್ಲ ’ ಎಂದು ”

“ ನನಗಾದರೂ ಹಾಗೆಯೇ ಅನಿಸಿದೆ ಅವನಿಗೆ ಇರುವುದೇ ಅಂಗೈ ಅಗಲದ ಆಸ್ತಿ ಅದರಲ್ಲೇ ಇಂಥ ಆಶ್ರಮ ಒಂದು ಎದ್ದಿದೆ ಉಳಿದ ಆಸ್ತಿಯಿಂದ ಇವನಿಗೆ ಎಷ್ಟು ಬೆಳೆ ಬರುತ್ತದೋ ನನಗೆ ತಿಳಿಯದು ಅವನು ಏನಾದರೂ ಮಾಡಿಕೊಳ್ಳಲಿ ಆದರೆ ಈ ಸುಬ್ಬಿಯನ್ನು ದಾರಿಯಲ್ಲಿ ಹಾಕಿ ಹೋಗಬಾರದಲ್ಲ ಅವಳ ಪಾಡಿಗೆ ಏನಾದದರೂ ಒಂದು ದಾರಿ ತೋರಿಸಿದರೆ ಒಳ್ಳೇಯದು ಅವಳು ಹೀಗೇ ಆದರೆ ಬಹಳ ವರುಷ ಬದುಕುವುದಿಲ್ಲ. ಮಗ ಊರು ಬಿಟ್ಟವನು ಬಂದೊಡನೆ ಹತ್ತಾರು ದಿನಗಳ ಪರ್ಯಂತ ಉಲ್ಲಾಸದಿಂದ ಇದ್ದಳು ಈಗ ಪುನಃ ಸೊರಗಿದ್ದಾಳೆ ಅವಳಿಗೂ ಚಿಂತೆ ಹಿಡಿಯಿತು ಸರಿ, ನಾನಾದರೂ ಏನು ಮಾಡಲಿಕ್ಕೆ ಸಾಧ್ಯವಿದೆ ? ನೀನು ಹೇಳುವುದನ್ನೆಲ್ಲ ಹೇಳಿ ಮುಗಿಸಿದಿಯೆಂದ ಮೇಲೆ ನನ್ನಿಂದ ಇನ್ನೂ ಹೆಚ್ಚು ಅವನಿಗೆ ಬುದ್ಧಿ ಹೇಳಲು ಸಾಧ್ಯವಿಲ್ಲ ಏನೇನೆಲ್ಲ ಆಗುವುದಿದೆ ಆಗಲಿ ”

ಅವರಿಬ್ಬರ ಮಾತುಗಳನ್ನು ಕೇಳುತ್ತ ಕುಳಿತ ಸುಬ್ಬಿಗೆ, ಅಣ್ಣಪ್ಪಯ್ಯನವರಿಂದಲೂ ಮಗನಿಗೆ ಬುದ್ಧಿ ಕಲಿಸಲು ಸಾಧ್ಯವಿಲ್ಲವೆಂಬುದು ಗೊತ್ತಾಯಿತು. ‘ ತನ್ನ ಮನೆತನಕ್ಕೆ ಶಂಕರನೇ ಕೊನೆಯಾಗುತ್ತಾನಲ್ಲ ’ ಎಂದು ಅವಳ ಎದೆಯು ಮೊರೆ ಇಡುತ್ತಿತ್ತು ಮಗ ಏನು ಬೇಕಾದರೂ ಮಾಡಲಿ, ಮದುವೆ [redacted]ಕೊಂಡು ಸುಖವಾಗಿ ಸಂಸಾರ ಸಾಗಿಸುವುದನ್ನು ಕಣ್ಣಾತುಂಬ ನಾಲ್ಕು

ದಿನ ನೋಡಿ ಸಾಯಬೇಕೆಂಬ ತನ್ನ ಆಸೆಯನ್ನು ಅವಳು ಅವರ ಮುಂದೆ ಬಿಚ್ಚಿ ಹೇಳಿದಳು ಆದರೆ ಶಂಕರ ಮದುವೆ ಎಂದರೆ ಹಿಂಜರಿಯುತ್ತಿದ್ದ ತನ್ನ ಧ್ಯೇಯಗಳೆಲ್ಲ ಒಂದು ದಾರಿಗೆ ಬಂದು ತೀರುವವರೆಗೆ ಮದುವೆಯ ಸುದ್ದಿ ಎತ್ತಬಾರದೆಂದು ತಾಯಿಗೆ ಆತ ಈ ಮೊದಲೇ ತಿಳಿಸಿಯಾಗಿತ್ತು ಹೊನ್ನಪ್ಪಯ್ಯನವರೂ ಆ ವಿಷಯವನ್ನು ಅವನೊಡನೆ ಚರ್ಚೆ ಮಾಡಿ ಪರಾಜಯ ಹೊಂದಿಯಾಗಿತ್ತು ಶಂಕರ ಹಿಡಿದ ಹಟವನ್ನು ಬಿಡುವವನಲ್ಲ ಎಂದು ಅವರೆಲ್ಲ ನಿರ್ಧಾರಕ್ಕೆ ಬಂದಾಗಿತ್ತು

ಇಂದು ಅಣ್ಣಪ್ಪಯ್ಯ ಆ ಪ್ರಸ್ತಾಪವನ್ನು ಶಂಕರನೊಡನೆ ಎತ್ತುವುದಕ್ಕಾಗಿ ಅಲ್ಲಿಗೆ ಆಮಂತ್ರಿಸಲ್ಪಟ್ಟಿದ್ದರಷ್ಟೆ ಸುಬ್ಬಿ ದಿವಸಾಗಲೂ ಎಡಹಿತ್ತಲಿಗೆ ಹೋಗಿ, “ಎಲ್ಲರೂ ಹೇಳಿ ಹೇಳಿ ಬೇಸತ್ತರು ನೀವಾದರೂ ಒಂದಿಷ್ಟು ಹೇಳಿ ನೋಡಿದ್ದರೆ ಆಗುತ್ತಿತ್ತು” ಎಂದು ಅಣ್ಣಪ್ಪಯನವರೊಡನೆ ಬಿನ್ನವಿಸಿಕೊಳ್ಳುತ್ತಿದ್ದಳು ಇವತ್ತು ಅವರಾಗಿಯೇ ಮೂಡುಮನೆಯತ್ತ ಬಂದರು ಇಲ್ಲಿಯ ವರೆಗೆ ಅವರು ಶಂಕರನ ಸುದ್ದಿ, ಅವನ ಆಶ್ರಮದ ವಿಷಯ ಮುಂತಾದವುಗಳನ್ನೆಲ್ಲ ಪರರ ಬಾಯಿಯಿಂದ ಕೇಳಿದ್ದರು ಆದರೆ ಇಂದು ಅಲ್ಲಿಯ ಕಟ್ಟಡವನ್ನು ನೋಡಿ ಅವರಿಗೆ ದಂಗು ಬಡೆಯಿತು ಅಷ್ಟು ದೊಡ್ಡ ಸಾಹಸ ಮಾಡಲಿಕ್ಕೆ ಸಾಧಾರಣದವನ ತಲೆ ಸಾಲದೆಂದು ಅವರಿಗೂ ಅನಿಸಿತು ಅಷ್ಟೇ ಅಲ್ಲ, ಅಂಥ ದೊಡ್ಡ ವ್ಯಕ್ತಿಗೆ ತಾನು ವಯಸ್ಸಿನಲ್ಲಿ ಮುದುಕನಾದರೂ ಬುದ್ಧಿ ಹೇಳುವುದು ಸರಿ ಎನಿಸುವು ಸ್ವಲ್ಪ ಕಷ್ಟವೆಂದೂ ಅವರ ಮನಸ್ಸು ಹಿಂಜರಿಯಿತು.

ಅವನು ತನ್ನ ಉಪದೇಶವನ್ನು ಕೇಳುವುದಿಲ್ಲವೆಂದು ಅವರ ಮನಸ್ಸು ಕೊನೆಯ ನಿರ್ಣಯವನ್ನು ಕೊಡದಿರಲಿಲ್ಲ ಆದರೂ ಸುಬ್ಬಿಯ ಆಗ್ರಹಕ್ಕೆ ಶಂಕರ ಅಲ್ಲಿಗೆ ಬರುವತನಕ ಕಾದು ಕುಳಿತರು ಹಾಗೆ ಅವರು ಬಹಳ ಹೊತ್ತು ಅಲ್ಲಿ ಕೂಡುವ ಶ್ರಮವನ್ನು ತಪ್ಪಿಸಲು ಶಂಕರ ಬಂದೇ ಬಿಟ್ಟ

ಶಂಕರ ಎಲ್ಲಿಗೇ ಹೋಗಲಿ, ಬರುವಾಗ ಮೂಡುಮನೆಗೆ ಹೋಗಿ ಬರುವುದು ರೂಢಿ ಅದಕ್ಕೆ ಆ ಮನೆ ಅವನ ದಾರಿಯ ಪಕ್ಕದಲ್ಲೇ ಇರುವುದು ಒಂದು ಕಾರಣವಾಗಿರಬಹುದು ಇವತ್ತು ಆದರೂ ಅವನು ಮೂಡುಮನೆಯತ್ತ ನಡೆದ ಅಲ್ಲಿ ಅಪರೂಪದ ವ್ಯಕ್ತಿ ಅಣ್ಣಪ್ಪಯ್ಯನವರನ್ನು ಕಾಣ

ಬೇಕಾಯಿತು ಮನೆಯ ಮೆಟ್ಟಿಲು ಹತ್ತುವುದರೊಳಗೆ ಅಣ್ಣಪ್ಪಯ್ಯನವರೆ ಅವನಿಗೆ ಸ್ವಾಗತಿಸಿದರು. "ಬಾ ಮಹಾರಾಯಾ" ಎಂದು ಅವರ ವಿಶಿಷ್ಟವಾದ ನಗುವನ್ನು ಬೀರಿ, ಮಾತಿಗೆ ಪೀಠಿಕೆಯನ್ನು ಹಾಕಿ ಆಯಿತು

"ಹೋ! ಅಣ್ಣಮಾಮನವರೇ, ಬನ್ನಿ ಹೋಗೋಣ--ನಮ್ಮ 'ಕಲಾನಿಕೇತನ'ವನ್ನು ಒಂದಿಷ್ಟು ನೋಡಿಕೊಂಡು ಬರೋಣ" ಎಂದು ಅಣ್ಣಪ್ಪಯ್ಯನವರಿಗೆ ತಾನು ಕಟ್ಟಿಸಿದ ಸಾಲೆಯನ್ನು ತೋರಿಸಲು ಶಂಕರ ಉತ್ಸಾಹಪಟ್ಟ

"ನಾನೆಲ್ಲ ನೋಡಿ ಬಂದೆಯಪ್ಪ ನಿನ್ನ ವಯಸ್ಸು ಚಿಕ್ಕದಾದರೂ ನಿನ್ನ ಬುದ್ಧಿ ಬೆಳೆದಿದೆ ನಾನು ನಿನ್ನ ಸಾಲೆಯನ್ನು ನೋಡಿ ತುಂಬ ಆನಂದ ಪಟ್ಟೆ"

"ಈಗಲೇ ಅಷ್ಟು ಆನಂದ ಪಡಬೇಕಾಗಿಲ್ಲ ಇನ್ನು ಅದರಲ್ಲಿ ಊರಿನ ಬಡವರ ಮಕ್ಕಳು ಆದರ್ಶ ಶಿಕ್ಷಣವನ್ನು ಪಡೆಯುವಾಗ ಅವರ ಪ್ರಗತಿಯನ್ನು ಕಂಡು ನೀವು ಆನಂದಿತರಾಗಬೇಕು ಇನ್ನೂ ಅದು ಮೊಳಕೆ ಒಡೆಯುತ್ತಿರುವ ಬೀಜ ಅದಕ್ಕೆ ನಿಮ್ಮಂತವರ ಉದಾರ ಕೊಡುಗೆ—ನೆರವು ಅಗತ್ಯವಾಗಿ ಬೇಕು" ಎಂದು ಶಂಕರ ಹೇಳುವಾಗ ಅಣ್ಣಪ್ಪಯ್ಯನವರಿಗೆ ತಲೆಯ ಮೇಲೆ ಕಲ್ಲು ಹೊತ್ತು ಹಾಕಿದಷ್ಟು ವೇದನೆ—ಗಾಬರಿ ಆಯಿತು

"ನಾನು ಇವನಿಗೆ ಬುದ್ಧಿ ಹೇಳಲು ಬಂದೆ ಆದರೆ ನನಗೇ ಇವನು ಬುದ್ಧಿ ಕಲಿಸಲು ಬಂದನಲ್ಲ, ನನ್ನೊಡನೆಯೂ ಫಂಡು (Fund) ಕೇಳಿದರೆ ಏನು ಗತಿ? ಹಾದಿ ಹಿಡಿದು ಹೋಗುವ ಮಾರಿಯನ್ನು ಆಮಂತ್ರಿಸಿ ಮನೆಗೆ ಕರೆತಂದ ಹಾಗಾಯಿತು" ಎಂದು ಬಗೆದು ಅಣ್ಣಪ್ಪಯ್ಯ ಬಳಸಿ ಬಳಸಿ "ಈ ಊರಿನ ಜನಗಳು ಸಹಾಯ ನೆರವು ಗಿರವು ಕೊಡುವುದನ್ನು ಕಲಿತೇ ಇಲ್ಲ ಬೇರೆಯವರು ಸಹಾಯ ಮಾಡುವವರಿದ್ದರೂ ಅವರಿಗೆ ಅಡ್ಡ ಬರುವ ವ್ಯಕ್ತಿಗಳು ಬಹಳ ಇಲ್ಲಿ ಸಹಾಯ ಬಿಟ್ಟು, ನಾಲ್ಕು ರೂಪಾಯಿ ಸಾಲ ಬೇಕೆಂದು ನಾಲಗೆ ಕೊಯ್ದುಕೊಂಡು ಬೊಬ್ಬಿಟ್ಟರೂ ಕೊಡುವವರು ಇಲ್ಲ ಮೊನ್ನೆ ಮೊನ್ನೆ ನನಗೆ ಆ ಎಮರ್ಾಲಿನ ಆಸ್ತಿ ಕೊಳ್ಳಲಿಕ್ಕೆ ಇನ್ನೂರು ರೂಪಾಯಿಯಷ್ಟು ಸಾಲ ಬೇಕಾಗಿತ್ತು ಒಬ್ಬನೂ ಕೊಡಲಿಲ್ಲ ಇಂಥಲ್ಲಿ ನೀನು ಈ ಧರ್ಮಜ್ಞಾನ ಮಾಡಲು ಮುಂದೆ ಬರುವುದು—ಬಂದದ್ದು–ನನಗೆ ಯಾಕೋ ಸರಿ

ಯೆಂದು ತೋರುವುದಿಲ್ಲ ” ಎಂದು ತಮ್ಮ ಮೇಲೆ 'ವಂತಿಗೆ' ಯ ಭಾರ ಬೀಳ ದಂತೆ ಜಾಗ್ರತೆ ವಹಿಸಿದರು

“ ಇಲ್ಲಿಯ ಜನರ ಔದಾರ್ಯ ಎಷ್ಟಿದೆಯೆಂಬುದು ನನಗೂ ಗೊತ್ತಿದೆ ನಿಮಗೂ ಗೊತ್ತಿದೆ ಆದರೆ ಕಷ್ಟ ಕಾಲದಲ್ಲಿ ಏನಾದರೂ ಒಂದಿಷ್ಟು ಸಹಾಯ ಮಾಡಲು ನೀವು ಮರೆಯಬಾರದು ನನ್ನಿಂದ ವ್ಯಕ್ತಿಶಃ ನಿಮಗೆ ಏನಾದರೂ ಉಪಕಾರ ಆಗದಿದ್ದರೂ ನಿಮ್ಮ ಊರಿಗೆ ಸ್ವಲ್ಪವಾದರೂ ಪ್ರಯೋಜನ ವಾದೀತೆಂಬ ಆತ್ಮವಿಶ್ವಾಸ ನನಗೆ ಇರುವುದರಿಂದಲೇ ನಾನು ಈ ಸಾಹಸಕ್ಕೆ ಕೈ ಹಾಕಿದ್ದೇನೆ ಆದರೆ ನಾನು ಈ ಊರಿನ ಜನರಲ್ಲಿ ಇಷ್ಟೇ ಒಂದು ವಿನಂತಿ ಮಾಡಿಕೊಳ್ಳುತ್ತೇನೆ ಅಂದರೆ—ನನಗೆ ಅವರಿಂದ ಯಾವ ಸಹಾಯವಾಗ ದಿದ್ದರೂ ಚಿಂತಿಲ್ಲ ನನ್ನ ಕೆಲಸಕ್ಕೆ ಅವರು ಕಲ್ಲು ಹಾಕುವ ದುಷ್ಕೃತ್ಯ ವನ್ನು ಮಾಡದಿರಲಿ ಎಂಬುದೇ ನನ್ನ ನಮ್ರ ವಿನಂತಿ ”

“ ಹಾಗೆ ಮಾಡದಿದ್ದರೆ ನೀನು ಗೆದ್ದಂತೆ ನಾನಂತು ಅಂಥ ಕೆಲಸಕ್ಕೆ ಹೋಗುವವನಲ್ಲ ನನಗೆ ಅಂಥವರನ್ನು ನೋಡಿದರೂ ಆಗುವುದಿಲ್ಲ ನಾನಾ ದರೂ ದೇವರೊಡನೆ ' ನಿನಗೆ ಒಳ್ಳೆಯದಾಗಲಿ ' ಎಂದೇ ಬೇಡಿಕೊಳ್ಳುತ್ತೇನೆ ”

“ ಹಾಗೆ ಎಲ್ಲರೂ ಎದುರಿಗೆ ಬೆಲ್ಲದಂತೆ ಮಾತನಾಡಿ ದೇವರೊಡನೆ ನನಗೆ ಆಶೀರ್ವಾದವನ್ನು ದಯಪಾಲಿಸಲಿಕ್ಕೆ ಮರೆತಿಲ್ಲ ಆದರೆ ಅಂಥವರೇ ಹಿಂದಿನಿಂದ ನನ್ನ ಗೋಳು ನೋಡಲು ಹಂಬಲಿಸುವವರೆಂಬ ತಿಳುವಳಿಕೆ ನನಗಾಗಿದೆ ” ಎಂದು ಶಂಕರ ಹೇಳುವಾಗ ಅಣ್ಣಪ್ಪಯ್ಯನವರ ಮುಖ ಸಪ್ಪಗಾಯಿತು ಅದು ತನಗೇ ಹೊಡೆದ ಮಾತೆಂದು ಅವರ ಅರಿವಿಗೆ ಬಂದಿತು ಯಾಕೆಂದರೆ, ಈಗ ಹತ್ತಾರು ದಿನಗಳ ಹಿಂದೆ ಅವರೇ ಎವರ್ಾಲ ಸಂತೆಯಲ್ಲಿ ಶಂಕರನ ಅಪಪ್ರಚಾರ ನಡೆಸಿದ್ದರು “ ನಮ್ಮೂರಲ್ಲಿ ಧರ್ಮಸಾಲೆ ತಯಾರಾಗಹತ್ತಿದೆ ಬೇಕಾದವರು ಅಲ್ಲಿ ಬಂದು ವಿದ್ಯೆ, ಬುದ್ಧಿ, ಬುತ್ತಿ, ಬಟ್ಟೆಗಳನ್ನು ಧರ್ಮಕ್ಕೆ ಪಡೆಯಬಹುದು ” ಎಂದು ಸಂತೆಯ ನಿರುದ್ಯೋಗಿ ಸಭೆಯಲ್ಲಿ ಭಾಷಣ ಮಾಡಿದ್ದಾರೆಂದರೂ ತಪ್ಪಾಗದು ಅಂತೇ ಈಗ ಶಂಕರನ ಮಾತುಗಳನ್ನು ಕೇಳಿ ಅವರಿಗೆ ಕೆನ್ನೆಗೆ ಕೊಟ್ಟ ಹಾಗಾಯಿತು ಇನ್ನು ಅವನ ಬಗ್ಗೆ ಮಾತಾಡುವುದು ಸ್ವಲ್ಪ ತ್ರಾಸುದಾಯಕವೆಂದು ಅವರಿಗೂ ಹೊಳೆ ಯಿತು ಆದರೂ ಆದ ಮುಖಭಂಗವನ್ನು ಮರೆಯಿಸಲು ಅವರು ಅವನಿಗೆ

ಬುದ್ಧಿ ಹೇಳಲು ಸಿದ್ಧರಾಗಲೇ ಬೇಕಾಯಿತು

"ನಾನೆಂದೂ ನಿನ್ನ ಬಗ್ಗೆ ಎರಡು ಬಗೆದವನಲ್ಲ ನೀನು ಕಟ್ಟಿಸಿದ ಸಾಲೆಯಿಂದ ನಿನಗೆ ಬರುವ ಕೀರ್ತಿಗಿಂತ ನಮ್ಮ ಊರಿಗೆ ಬರುವ ಕೀರ್ತಿ ಹೆಚ್ಚಿನದ್ದು ಆದಕ್ಕಾಗಿ ನಾವೆಲ್ಲ ಸಂತೋಷ ಪಡುವವರೇ ಆ ರವೀಂದ್ರ ನಾಥ ಟಾಗೋರರ ಹೆಸರು ಈಗ ದೇಶ ವಿದೇಶಗಳಲ್ಲೂ ಕಲ್ಲಿನಲ್ಲಿ ಕೊರಿದ ಶಾಸನದಂತೆ ಚಿರಸ್ಥಾಯಿಯಾಗಿದೆ ಹಾಗೇ ನಿನ್ನ ಹೆಸರು ಪರದೇಶಗಳಲ್ಲೂ ಪ್ರಚಾರಕ್ಕೆ ಬರಲಿ ಎಂಬುದು ನನ್ನ ಆಸೆ"

"ಆ ಪುಣ್ಯಾತ್ಮ ಟಾಗೋರರ 'ಶಾಂತಿನಿಕೇತನ' ಎಲ್ಲಿ? ನನ್ನ 'ಕಲಾನಿಕೇತನ' ಎಲ್ಲಿ? ಅವರಿಗೂ ನನಗೂ ಆಕಾಶ ಭೂಮಿಗೆ ಇರುವಷ್ಟು ಅಂತರ ನಾನೀಗ ಕೈಕೊಂಡ ಕಾರ್ಯದಲ್ಲಿ ಇನ್ನೂ ಒಂದು ಕಾಲು ಭಾಗ ವಾದರೂ ಪೂರ್ತಿಯಾಗಿಲ್ಲ ಇಷ್ಟರಲ್ಲೇ ನಾನು ಈ ಊರವರ ಬಾಯಿ ಯಿಂದ ಬೇಕಾದ ಹಾಗೆ ಮಂಗಳಾರತಿ ಮಾಡಿಸಿಕೊಂಡಾಯಿತು ಇನ್ನೂ ಎಷ್ಟೋ ಜನ ಟೀಕಿಸುತ್ತ ಇದ್ದಾರಂತೆ"

"ಅಂಥ ನಿರ್ದಯಿಗಳು ನಮ್ಮೂರಲ್ಲಿ ಬಹಳ ಜನ ಇದ್ದಾರೆಂದು ನಾನು ನಿನಗೆ ಈ ಮೊದಲೇ ಹೇಳಲಿಲ್ಲವೋ?"

"ಅಂಥವರಿಗೆಲ್ಲ ನಾನು ಹೆದರಿದ್ದರೆ ಇಷ್ಟು ಬೇಗ ಕಟ್ಟಡವನ್ನು ಮುಗಿ ಸುತ್ತಿರಲಿಲ್ಲ ಆದರೆ ಅಂಥ ನಿರ್ದಯಿಗಳ ಜೊತೆಯಲ್ಲಿ ಡಾ| ಕೃಷ್ಣರಾಯರು, ವೀಣೆ ವೆಂಕಟರಾಯರು ಮೊದಲಾದ ಉದಾರ ಪುರುಷರೂ ಇದ್ದಾರೆ ಎಂಬು ದನ್ನು ಮರೆತಿಲ್ಲ ಅಂಥವರ ಪ್ರೋತ್ಸಾಹವಲ್ಲದಿದ್ದರೆ ನನಗೆ ಈ ಊರಲ್ಲಿ ಹೆಜ್ಜೆ ಇಡಲಿಕ್ಕೂ ಧೈರ್ಯ ಬರುತ್ತಿದ್ದಿಲ್ಲ"

"ನಾನು ಬಂದದ್ದು ಶಂಕರಾ, ನಿನಗೆ ಗೊತ್ತಿರಬಹುದು ನೀನು ನಾನು ಹೇಳಿದ ಮಾತನ್ನು ಎಷ್ಟರ ಮಟ್ಟಿಗೆ ಕೇಳುತ್ತಿ ಎಂಬುದು ನನಗೆ ಗೊತ್ತಿದೆ ಆದರೂ ನಿನ್ನ ತಾಯಿ ಪ್ರತಿದಿನವೂ ಬಂದು ನನಗೆ ಹೇಳಿಕೊಂಡದ್ದ ರಿಂದ ನಾನು ಇಲ್ಲಿಗೆ ನಿನ್ನನ್ನು ಹುಡುಕಿಕೊಂಡು ಬಂದೆ ನಾನೊಂದು ಮಾತು ಹೇಳುತ್ತೇನೆ ಅದಕ್ಕೆ ನೀನು ಒಪ್ಪಬೇಕು"

"ಮದುವೆಯ ವಿಷಯವೇ?"

"ಹೌದು ನೀನು ಇದೆಲ್ಲಕ್ಕಿಂತ ಮೊದಲು ಮದುವೆ ಮಾಡಿಕೊಳ್ಳ

ಬೇಕು ಆಮೇಲೆ ಬೇಕಾದರೆ ಈ ಆಶ್ರಮದ ಕೆಲಸಗಳಲ್ಲಿ ಭಾಗವಹಿಸು ನಿನ್ನ ತಾಯಿಯ ಇಚ್ಛೆ ಅದು ಅವಳಿಗೀಗ ವಯಸ್ಸು ಮೀರಿ ಹೋಗಿದೆ ಇವತ್ತು ಸಾಯುತ್ತಾಳೋ ನಾಳೆಯೋ ಎಂದು ಹೇಳುವುದು ಕಷ್ಟ ಹಿರಿಯ ರಾದವರ ಮಾತನ್ನು ಕಿರಿಯರು ಕೇಳುವುದು ಲೋಕದ ರೂಢಿ ನೀವು ಹಿರಿಯರ ಮನಸ್ಸನ್ನು ನೋಯಿಸಬಾರದು ಹಾಗೆ ಅವರ ಮನಸ್ಸಿಗೆ ನೋವು ಉಂಟುಮಾಡಿ ನೀವು ಎಷ್ಟು ದೇಶಸೇವೆ ಮಾಡಿದರೂ ಅದರ ಪ್ರಯೋಜನ ವಿಲ್ಲ ಆದರಿಂದ ನಿಮಗೆ ದೊರಕಬೇಕಾದ ಫಲವೇನೂ ಇಲ್ಲ ಇವಿಷ್ಟು ಮಾತುಗಳನ್ನು ಹೇಳಬೇಕೆಂದು ನನ್ನ ಮನಸ್ಸಿನಲ್ಲಿ ಇತ್ತು ಅದನ್ನು ಹೇಳಿ ಆಯಿತು ಇನ್ನು ನಿನ್ನ ಖುಷಿ ಇದಕ್ಕೂ ಹೆಚ್ಚಿಗೆ ಹೇಳಲು ನನ್ನಿಂದ ಸಾಧ್ಯವಿಲ್ಲ ” ಎಂದು ಅಣ್ಣಪ್ಪಯ್ಯ ತಮ್ಮ ಉಪದೇಶದ ಮಾತುಗಳನ್ನು ಹೇಳಿದರು

ಶಂಕರನ ಉತ್ತರವನ್ನು ಕೇಳಲು ಎಲ್ಲರೂ ಕುತೂಹಲದಿಂದ ಕೂಡಿ ದ್ದರು ಸುಬ್ಬಿಯು ಮಗನ ಬಾಯಿಯಿಂದ ಏನು ಹೊರಬೀಳುತ್ತದೆಂಬು ದನ್ನು ಕಣ್ಣು ತೆರೆದು, ಹೃದಯ ತೆರೆದು, ಒಂದೇ ಮನಸ್ಸಿನಿಂದ ಅವನತ್ತ ನೋಡುತ್ತಿದ್ದಳು ಅತ್ತ ಅಲ್ಲಿ ಒಳಗಿನಿಂದ ಸ ಮತಿಯಾದರೂ ಅಣ್ಣಪ್ಪಯ್ಯ ನವರ ಮಾತುಗಳನ್ನು ಕೇಳಿದ್ದಳು ಶಂಕರ ಮುಂದೇನು ಮಾತಾಡುತ್ತಾ ನೆಂಬುದನ್ನು ಅವಳೂ ಕಿವಿಗೊಟ್ಟು ಕೇಳುತ್ತಿದ್ದಳು ಅವಳ ಹೃದಯದ ಮಿಡಿತ ಕ್ಷಣಕ್ಷಣಕ್ಕೂ ಅಧಿಕವಾಗುತ್ತ ನಡೆದಿತ್ತು ಆಗ ಶಂಕರನ ಮಾತು ಗಳು ಪ್ರಾರಂಭವಾದವು ಅವುಗಳನ್ನು ಕೇಳುವಾಗ ಅವಳಿಗೆ ಆದ ಆನಂದ ಅಷ್ಟಿಷ್ಟಲ್ಲ

“ ಆ ಒಂದು ಚಿಕ್ಕ ವಿಷಯಕ್ಕೆ ನಾನು ನಿಮ್ಮಂಥ ಹಿರಿಯರ ಬಾಯಿ ಯಿಂದ ಉಪದೇಶವನ್ನು ಕೇಳಿಸಿಕೊಳ್ಳುವುದು ಸರಿಯಲ್ಲವೆಂಬುದು ನಿಜ ನಾನೇನು ಮದುವೆಯಾಗದೆ ಸನ್ಯಾಸಿಯಾಗಿ ಉಳಿಯುವುದಿಲ್ಲ ಆದರೆ ‘ ಇಂದೇ ಮದುವೆಯಾಗು ’ ‘ ನಾಳೆಯೇ ಆಗು ’ ಅಂದರೆ ನನ್ನಿಂದ ಆಗದ ಮಾತು ನಾನು ಮದುವೆಯಾಗಿ ಸಂಸಾರ ಹೂಡಿ ಜೀವನ ಸಾಗಿಸುತ್ತೇ ನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ ಅದಕ್ಕೆಲ್ಲ ಯೋಗ್ಯ ಸಮಯ ಒದಗಿ ಬರಬೇಕು ಅಲ್ಲವೆ ನಾನೇನು ಈಗ ಮುದುಕನಾಗಿಲ್ಲ ನನಗೆ

ಬೇಕಾದ ಹೆಣ್ಣು ಇಲ್ಲಿ ದೊರಕುವುದು ಕಷ್ಟ ಅವಳಿಗೆ ನನ್ನ ವಿಚಾರಗಳೆಲ್ಲ ಸರಿ ಹೊಂದುವುದೂ ಪ್ರಯಾಸದ ಸಂಗತಿ ಹಾಗೆ, ಯಾವಳೊ ಒಬ್ಬಳ ಳೊಡನೆ ಮದುವೆಮಾಡಿಕೊಂಡು ಜೀವವವನ್ನು ಹಾಳು ಮಾಡಲಿಕ್ಕೆ ನಾನು ಒಪ್ಪುವುದಿಲ್ಲ ಎಲ್ಲಕ್ಕೂ ಮೊದಲು ನಾನು ಈಗ ಕೈಕೊಂಡ ಕೆಲಸ ಒಂದು ಮಟ್ಟಕ್ಕೆ ಬಂದು ನಿಲ್ಲಬೇಕು ನಾನು ನನ್ನ ಅಮ್ಮನಿಗೂ ಇದೇ ಮಾತನ್ನು ಹೇಳಿದ್ದೇನ ಅವಳು ನಾನು ಮದುವೆಯೇ ಆಗುವುದಿಲ್ಲ, ನನ್ನಿಂದಲೇ ಅವಳ ವಂಶ ಕೊನೆಗಾಣುತ್ತದೆಂದು ತೀನ ಹಾಗಿದೆ ಆದರೆ ಅದು ಮಾತ್ರ ಸುಳ್ಳು ನನಗೂ ಈ ಜೀವನದಲ್ಲಿ ಏನೇನು ಮಾಡಲಿಕ್ಕೆ ಸಾಧ್ಯವಿದೆಯೋ ಅದನ್ನೆಲ್ಲ ಮಾಡಿ, ಜೀವನವನ್ನು ಪರಿಪೂರ್ಣವಾಗಿ ಉಪಭೋಗಿಸಬೇಕೆಂಬ ಉತ್ಕಟವಾದ ಆಸೆ ಇದೆ ಕಾರಣ ನೀವು ಯಾರೂ ನನ್ನ ಬಗ್ಗೆ ಚಿಂತಿಸುವ ಅಗತ್ಯವಿಲ್ಲ ಮತ್ತು ನಾನು ಮದುವೆಯಾಗುವುದಾದರೂ ನನಗೆ ಖುಷಿ ಬಂದ ಹೆಣ್ಣನ್ನೇ ಅದನ್ನೆಲ್ಲ ಈಗ ಹೇಳಿ ಏನು ಪ್ರಯೋಜನ ? ಆದ್ದ ರಿಂದ ದಯಮಾಡಿ ನೀವು ಯಾರೂ ನನ್ನ ಕಿವಿಗೆ ಆ ' ಮದುವೆ ' ಎಂಬ ಶಬ್ದವನ್ನು ಮುಟ್ಟುವಂತೆ ಮಾಡಬಾರದೆಂದು ಕೇಳಿಕೊಳ್ಳುತ್ತೇನೆ " ಎಂದು ಶಂಕರ ತನ್ನ ಉದ್ದೇಶವನ್ನೆಲ್ಲ ಹೇಳಿಬಿಟ್ಟ ಅಣ್ಣಪ್ಪಯ್ಯ ತಮ್ಮ ಮನೆಯ ದಾರಿ ಹಿಡಿದರು ಅಂದಿನಿಂದ ಸುಬ್ಬಿಯೂ ಮಗನ ವಿರುದ್ಧ ನಡೆಯಲಿಲ್ಲ

ಅಣ್ಣಪ್ಪಯ್ಯ ಹೋದೊಡನೆ ಶಂಕರ " ಒಂದಿಷ್ಟು ನೀರು ಬೇಕು ಸುಮತೀ " ಎಂದು ಒಳಗೆ ನೋಡಿದ " ಸುಮತೀ ನೀರು ಬೇಕಂತೆ " ಎಂದು ಸಾವಿತ್ರಿಯೂ ಹೇಳಿದಳು ಆಗ ಸುಮತಿ ಬೆಲ್ಲ ನೀರು ಹಿಡಿದು ಕೊಂಡು ಹೊರಗೆ ಬಂದಳು " ಇಷ್ಟು ಹೊತ್ತಿನ ವರೆಗೆ ಬಾಯಾರಿಕೆ ಕಟ್ಟಿ ಕೊಂಡು ಅದು ಹೇಗೆ ಕೂತೆಯಪ್ಪ ! " ಎಂದು ನಗುತ್ತ ಹೇಳಿ ಸುಮತಿ ಆವನ ಮುಂದೆ ಬೆಲ್ಲದ ತಟ್ಟೆಯನ್ನೂ ನೀರಿನ ತಂಬಿಗೆಯನ್ನೂ ಇರಿಸಿ ದೂರ ಹೋಗಿ ನಿಂತಳು " ನೀವೆಲ್ಲ ನನ್ನನ್ನು ಬಂದೊಡನೆ ಮದುವೆಯ ಗಲಾಟೆ ಯಲ್ಲಿ ಹಾಕಿ ಬಿಟ್ಟಿರಿ ನೀನಂತು ನಾಚಿಕೊಂಡು ಒಳಗೇ ಕುಳಿತಿದ್ದೀ " ಎಂದು ಹೇಳುತ್ತ ಶಂಕರ ಬೆಲ್ಲ ನೀರು ಕುಡಿದ ಆಮೇಲೆ, "ಅಂತೂ ಒಂದು ಹೆಜ್ಜೆಯನ್ನು ಹೇಗಾದರೂ ಕಿತ್ತು ಮುಂದೆ ಇಟ್ಟೆನೆಂದು ಹೇಳಬಹುದು " ಎಂದು ಹೊನ್ನಪ್ಪಯ್ಯನವರನ್ನು ನೋಡುತ್ತ ಹೇಳಿದ

" ಹೋದ ಕೆಲಸ ಗಂಡೋ, ಹೆಣ್ಣೋ ?" ಎಂದು ಹೊನ್ನಪ್ಪಯ್ಯ ಹುರುಪಿನಿಂದ ಕೇಳಿದರು

"ಗಂಡೇ ಆಯಿತು ಆದರೆ ಇನ್ನು ಹತ್ತಾರು ದಿನಗಳ ಮಟ್ಟಿಗೆ ಹಗಲೂ ರಾತ್ರಿ ದುಡಿಯಬೇಕಾಗುತ್ತದೆ "

" ಕೃಷ್ಣರಾಯರು ಇಂಥ ಕೆಲಸಗಳಿಗೆಲ್ಲ ಎಲ್ಲರಿಗಿಂತ ಮೊದಲು ಟೊಂಕ ಕಟ್ಟಿ ನಿಲ್ಲುವವರು ಅವರನ್ನು ನೋಡಿದೊಡನೆ ಅವರ ಗಂಭೀರ ವ್ಯಕ್ತಿತ್ವವೇ ಅದನ್ನು ಸಾರುತ್ತದೆ ಹಾಗಾದರ ಅವರು ಅತಿಥಿಗಳಾಗಲಿಕ್ಕೆ ಒಪ್ಪಿದರು ಅಲ್ಲವೋ ? "

" ನಾನು ಹೇಳಲಿಕ್ಕೆ ಪುರಸೊತ್ತಿಲ್ಲದೆ ಒಪ್ಪಿದರು ಅಲ್ಲದೆ ತನ್ನಿಂದ ಬೇರೆ ಯಾವ ಸಹಾಯ ಬೇಕಿದ್ದರೂ ಸಂಕೋಚ ಪಡದೆ ಕೇಳಬೇಕೆಂದು ನನಗೆ ಆಜ್ಞೆ ವಿಧಿಸಿಯೂ ಆಯಿತು ಸಾಲೆಯ ಪ್ರಾರಂಭೋತ್ಸವವು ಇಂದಿನಿಂದ ಹದಿನೈದು ದಿನಗಳಲ್ಲೇ ಆಗುತ್ತದೆ ಅಂದರೆ, ಇವತ್ತು ಶುಕ್ರವಾರ ಅಲ್ಲವೋ ? ಮುಂದಿನ ಶುಕ್ರವಾರ ಅಲ್ಲ, ಅದರ ಮುಂದಿನ ಶುಕ್ರವಾರ ಎಂದು ನಿರ್ಣಯಿಸಿಯೂ ಆಯಿತು—ಅಲ್ಲಿಯೇ ಅವರೂ 'ಶುಭಸ್ಯ ಶೀಘ್ರಂ' ಎಂದು ಹರಸಿ ಕಳುಹಿಸಿದರು "

" ಹೊಂ, ಹಾಗಾದರೆ ಇನ್ನುಳಿದ ಚಿಕ್ಕಪುಟ್ಟ ಕೆಲಸಗಳನ್ನು ಬೇಗನೆ ಮುಗಿಸಬೇಕು 'ನಾಳೆ' 'ನಾಳೆ' ಎಂದು ಕುಳಿತುಕೊಳ್ಳಬಾರದು ನಾನೂ ನನ್ನಿಂದ ಆದಷ್ಟು ಸಹಾಯ ಮಾಡುತ್ತೇನೆ ನನ್ನ ಒಕ್ಕಲುಗಳನ್ನೂ ಕೆಲಸಕ್ಕೆ ಹೆಗಲು ಕೊಡಲು ಹೇಳುತ್ತೇನೆ "

" ಆಳುಗಳ ಮಟ್ಟಿಗೆ ಹೆದರುವುದು ಬೇಡವೆಂದು ಎಡಹಿತ್ಲಲು ಕಾಂತಪ್ಪ ಹೇಳಿದ್ದಾನೆ ಅವನಂಥವರ ಸಹಾಯವಿಲ್ಲದಿದ್ದರೆ ನಾನಿಷ್ಟು ಬೇಗ ಕಟ್ಟಡವನ್ನು ಮುಗಿಸುವುದು ಕಷ್ಟವಿತ್ತು "

ಹೊನ್ನಪ್ಪಯ್ಯ ಅಲ್ಲಿಂದ ಎದ್ದು, ಕಣ್ಣಿಗೆ ಕನ್ನಡಕ ಹಾಕಿಕೊಂಡು, ಪಂಚಾಂಗ ಕೈಯಲ್ಲಿ ಬಿಡಿಸಿ, ತಿಥಿ, ವಾರ, ನಕ್ಷತ್ರಗಳ ಲೆಕ್ಕ ಹಾಕುತ್ತ " ಶುಕ್ರವಾರ ಬೆಳಗ್ಗೆಯೋ ಸಾಯಂಕಾಲವೋ ಸಾಲೆಯನ್ನು ಪ್ರಾರಂಭಿಸುವುದು ?" ಎಂದು ಕೇಳಿದರು " ಸಾಯಂಕಾಲ ಅವತ್ತು ರಾತ್ರಿ ಕೂಡಾ ಸಾಲೆಯಲ್ಲಿ ತುಂಬ ಕಾರ್ಯಕ್ರಮಗಳು ಜರುಗಲಿವೆ" ಎಂದು ಶಂಕರ ಉತ್ತರಿಸಿದ

"ಹಾಗಾದರೆ ಅಡ್ಡಿ ಇಲ್ಲ ಯಾಕಂದರೆ ಬೆಳಿಗ್ಗೆ ಹತ್ತು ಗಂಟೆಯವರೆಗೆ 'ಭರಣಿ ಕೃತ್ತಿಕೆ' ಇದೆ ಆ ಹೊತ್ತು ಒಳ್ಳೆಯದಲ್ಲ, ಸಾಯಂಕಾಲ ಬಹಳ ಒಳ್ಳೆಯ ಸಮಯ" ಎಂದು ಹೊನ್ನಪ್ಪಯ್ಯ ಹೇಳಿದರು ಅದಕ್ಕೆ ಶಂಕರ ಹೆಚ್ಚಿನ ಲಕ್ಷ್ಯ ಕೊಡಲಿಲ್ಲ

"ಅದೆಲ್ಲ ಹೌದು, ಆದರೆ ನೀನು ಸಾಲೆಗೆ ಹುಡುಗರನ್ನು ಎಲ್ಲಿಂದ ತರುತ್ತಿ ? ಹುಡುಗರೇ ಇಲ್ಲದಿದ್ದರೆ ಸಾಲೆಯನ್ನು ಹೇಗೆ ಪ್ರಾರಂಭಿಸುವುದು? ಪಾಠ ಯಾರಿಗೆ ಕಲಿಸುವುದು ?" ಎಂದು ಹೊನ್ನಪ್ಪಯ್ಯ ಮುಂದಿನ ಆಲೋಚನೆಯನ್ನೂ ಕೇಳಿದರು

"ಹುಡುಗರೇ ಯಾಕೆ—ಹುಡುಗಿಯರನ್ನೂ ಗೊತ್ತು ಮಾಡಿದ್ದೇನೆ ಒಟ್ಟಿಗೆ ಎಂಟು ಹುಡುಗರೂ ಎರಡು ಬಾಲಕಿಯರೂ ಈ 'ಕಲಾನಿಕೇತನ' ದ ವಿದ್ಯಾರ್ಥಿಗಳಾಗುತ್ತಾರೆ ಅದನ್ನೆಲ್ಲ ನಾನು ಈ ಮೊದಲೇ ಅವರವರ ಪಾಲಕರನ್ನು ಕೇಳಿಕೊಂಡು ಗಟ್ಟಿ ಮಾಡಿಯಾಗಿದೆ"

"ನೀನು ಅಷ್ಟು ಹುಶಾರಿ ಇದ್ದದ್ದರಿಂದಲೇ ಇಷ್ಟು ಬೇಗ ಸಾಲೆ ಕಟ್ಟಿಸಿದಿ ಬಿಡು ಆ ಹುಡುಗರು ಯಾವ ಊರಿನವರು ?"

"ಐದು ಹುಡುಗರು ಬಾಣಂಗಡಿಯವರು ಉಳಿದ ಐದು ಜನರಲ್ಲಿ ಇಬ್ಬರು ಕಿನ್ನಿಗೋಳಿಯವರು ಮತ್ತು ಮೂವರು ಸಂಪಿಗೆಯವರು ಈ ಸಂಪಿಗೆಯಲ್ಲಿ ಒಬ್ಬ ಬಾಲಕನನ್ನು ಮತ್ತು ಇಬ್ಬರು ಬಾಲಕಿಯರನ್ನು ನಮ್ಮ ಕೃಷ್ಣರಾಯರೇ ಗೊತ್ತು ಮಾಡಿ ಕೊಟ್ಟಿದ್ದಾರೆ ಎಲ್ಲ ಹುಡುಗರ ವಯಸ್ಸು ಹತ್ತರ ಒಳಗೇ ಇರಬೇಕೆಂಬ ಒಂದು ನಿಯಮವನ್ನೂ ಮಾಡಿದ್ದೇವೆ ಅದನ್ನೆಲ್ಲ ಮುದ್ರಣಕ್ಕೆ ಕೊಟ್ಟಿದ್ದೇನೆ ಮೂಡುಬಿದ್ರೆಯಲ್ಲಿ ಒಟ್ಟಾರೆ ಕೆಲಸಗಳು ತುಂಬ ಇವೆ" ಎಂದು ಶಂಕರ ಅವರ ಮನೆಗೆ ನಡೆದ ಅವನ ಹಿಂದೆಯೇ ಸುಬ್ಬಿಯೂ ನಡೆದಳು ಸುಬ್ಬಿಯು ಮಗನ ಮಾತುಗಳನ್ನು ಕೇಳಿ, ತನ್ನ ಮನಸ್ಸಿಗೆ ಧೈರ್ಯ ತಂದುಕೊಂಡಿದ್ದಳು

ಅಂದಿನ ಮಧ್ಯಾಹ್ನದ ಊಟವನ್ನು ಕೂಡಾ ಶಂಕರ ಚೆನ್ನಾಗಿ ಮಾಡಲಿಲ್ಲ ಹೇಗೋ ಊಟ ಮುಗಿಯಿತು ಸುಬ್ಬಿಯೂ ಮಗನ ಊಟವಾದ ಮೇಲೆ ಉಂಡಳು ಹೊರಗೆ ಬಂದು ನೋಡುವಾಗ ಶಂಕರ ಸುಮ್ಮನೆ

ಕೂತದ್ದು ಅವಳ ಕಣ್ಣಿಗೆ ಕಂಡಿತು ಅವನ ಕಣ್ಣುಗಳಲ್ಲಿ ' ನಾನು ನಿನ್ನ ವಿರುದ್ಧ ಹೋಗುತ್ತಿದ್ದೇನೆ ' ಎಂದು ಕ್ಷಮೆ ಕೇಳುವ ದೀನತೆ ಇತ್ತು ಆದರೆ ಬಾಯಿ ಅದನ್ನು ಆಡುವಷ್ಟು ಶಕ್ತಿಯುತವಾಗಿರಲಿಲ್ಲ ಮಗ ಹಾಗೆ ಕುಳಿತ ದ್ದನ್ನು ನೋಡಿ ಸುಬ್ಬಿಗೂ ಕೆಡಕೆನಿಸಿರಬೇಕು ಅವಳಿಗೂ ದಿಗಿಲು ಬಡೆ ದಂತಾಯಿತು "ಶಂಕರ ನೀನೇಕೆ ಹಾಗೆ ಗುರುಗಮ್ಮಗೆ ಕೂತಿದ್ದಿ ?" ಎಂದು ಕೇಳಿ ಬಿಟ್ಟಳು

ಶಂಕರ ಕೊಂಚ ಹೊತ್ತು ಅವಳ ಮುಖವನ್ನು ನೋಡಿ, ಪುನಃ ದೃಷ್ಟಿಯನ್ನು ಕೆಳಗೆ ಬಿಟ್ಟ ಅವನ ಕಣ್ಣುಗಳಲ್ಲಿ ನೀರು ತುಂಬಿತ್ತು ಕಾರಣ ಬಾಯಿಯಿಂದ ಮಾತು ಹೊರಡಲಿಲ್ಲ ಅವನು ಮೌನವಾಗಿಯೇ ಇದ್ದುದ್ದ ರಿಂದ ಸುಬ್ಬಿಗೆ ಮತ್ತೂ ಸಂಕಟವಾಯಿತು "ಏನಾಯಿತು ಹೇಳಬಾರದೇ ಮಗೂ ? ನನ್ನೊಡನೆ ಹೇಳದಿದ್ದರೆ ಮತ್ತಾರೊಡನೆ ನೀನು ಹೇಳಬೇಕು ಯಾರು ಏನು ಹೇಳಿದರು ಹೇಳು " ಎನ್ನುತ್ತ ಸುಬ್ಬಿ ಶಂಕರನ ಸಮೀಪಕ್ಕೆ ಬಂದು ಕುಳಿತಳು ಅವಳ ಕಣ್ಣುಗಳಲ್ಲಿ ನೀರು ಊರಿತು ಸೀರೆಯಿಂದ ಕಣ್ಣುಗಳನ್ನು ಒರೆಸುತ್ತ ಅವಳು ಅವನ ತಲೆಯನ್ನು ಹಿಡಿದು ಪ್ರೀತಿಯಿಂದ ಮೇಲೆತ್ತಲು ಪ್ರಯತ್ನಿಸಿದಳು "ಏನಾಯಿತು ಹೇಳು ?" ಎಂದು ಮೇಲಿಂದ ಮೇಲೆ ಪ್ರಶ್ನಿಸಿದಳು

"ಏನಿಲ್ಲ ಏನಿಲ್ಲ" ಎಂದು ಶಂಕರ ದುಃಖವನ್ನು ತಡೆಗಟ್ಟಲುಪ್ರಯತ್ನ ಪಟ್ಟ ಆದರೆ ಸುಬ್ಬಿ ಸುಮ್ಮನೆ ಕೂಡಲಿಲ್ಲ "ಆಗ ಅಷ್ಟು ಜೋರಿನಿಂದ ಮಾತಾಡಿದವನು ಈಗ ಹೀಗೆ ಚಿಂತಿಸುತ್ತ ಕುಳಿತೆಯಲ್ಲ ! ಇದೇನು ಕತೆ?" ಎಂದು ಅವಳು ಮಗನಿಗೆ ಕೇಳಿದಳು ಆಗ ಶಂಕರ ಪ್ರಯಾಸಪಡುತ್ತ "ಏನಿಲ್ಲ, ತಾಯಂದಿರಿಗೆ ಮಕ್ಕಳ ಮೇಲೆ ಇಷ್ಟೊಂದು ಪ್ರೇಮವಿರಬಾರದು" ಎಂದನು

"ಮಕ್ಕಳನ್ನು ತಾಯಂದಿರು ಪ್ರೀತಿಸದೆ ಮತ್ತಾರನ್ನು ಪ್ರೀತಿಸಬೇಕು?"

"ಪ್ರೀತಿಸಬೇಕು ನಿಜ ಆದರೆ ನಿನ್ನಂತೆ !"

"ಅಂದರೆ ನಿನ್ನ ಮಾತಿನ ಅರ್ಥವೇನು ಮಗೂ ? ನಿನ್ನ ಸುಖವೇ ನನ್ನ ಸುಖ ನಿನಗೆ ಸರಿಯಲ್ಲದುದನ್ನು ನಾನೆಂದೂ ಮಾಡುವದಿಲ್ಲ "

"ಹಾಗಾದರೆ ನೀನು ಅವರೊಡನೆ ಯಾಕೆ ನನ್ನ ಮದುವೆಯ ಸುದ್ದಿ

ತೆಗೆದದ್ದು ? ”

“ ಇಷ್ಟೇಯೋ ? ಅದಕ್ಕೆ ಯಾಕೆ ನೀನು ಇಷ್ಟು ಚಿಂತಿಸುವುದು ? ಅವರೇನು ಬೇರೆಯವರೋ ? ಹುಡುಗರಿಗೆ ಯಾವಾಗಲೂ ‘ ಮದುವೆ ’ ಎಂದರೆ ನಾಚಿಕೆ ಹೆಚ್ಚು ಅದೂ ತಾಯಿಯೊಡನೆ ಆ ವಿಚಾರ ಮಕ್ಕಳು ಹೇಳಲಿಕ್ಕೆ ಬಹಳ ನಾಚುತ್ತವೆ ಆದಕ್ಕಾಗಿ ನಾನು ನಾಲ್ಕು ಮಂದಿ ಹಿರಿಯರಿಂದ ಹೇಳಿಸೋಣವೆಂದು ಹೀಗೆ ಮಾಡಿದೆ ”

“ ನೀನು ಹಾಗೆ ಮಾಡಿದ್ದು ಸರಿಯಲ್ಲವೆಂದು ನನಗೆ ಯಾಕೋ ದುಃಖ ಬಂತು ನೀನು ಹೇಳಿದ ಮಾತುಗಳಿಗೆ ಕೊಡುವಷ್ಟು ಗೌರವ ನಾನು ಅವರಂಥವರ ಮಾತುಗಳಿಗೆ ಕೊಡುತ್ತೇನೆಯೇ ? ನಾನು ಆ ಒಂದು ವಿಷಯದಲ್ಲಿ ನಿನ್ನ ವಿರುದ್ಧ ಹೋಗುತ್ತಿದ್ದೇನೆ ಅದು ನನಗೆ ಸರಿ ಎಂದು ನನ್ನ ಅಂತರಾತ್ಮ ಹೇಳುತ್ತಿದ್ದಾನೆ ಆದಕ್ಕಾಗಿ ನಾನು ನಿನ್ನೊಡನೆ ಕ್ಷಮೆ ಕೇಳಬೇಕು ”

“ ಹೋಗಲಿ ಬಿಡು ಮಗೂ, ಮದುವೆಯಲ್ಲವೋ ? ನಿನಗೆ ಯಾವಾಗ ಬೇಕೊ ಆವಾಗ ಮಾಡಿಕೋ ಆದರೆ ನೀನು ಸಂತೋಷದಿಂದ ಇದ್ದರೆ ನನಗೆ ತೃಪ್ತಿ ”

“ ಅವರು ಏನು ಸಾಮಾನ್ಯದವರೆಂದು ನೀನು ತಿಳಿದೆಯಾ ? ಅವರಿಗೆ ಈಗ ಒಳಗಿಂದೊಳಗೆ ಉರಿ ಬಿದ್ದಿದೆ ನನ್ನ ಬಗ್ಗೆ ಎಷ್ಟೆಲ್ಲ ಅಪಪ್ರಚಾರ ನಡೆ ಸುತ್ತ ಬಂದಿದ್ದಾರೆ ಗೊತ್ತಿದೆಯೇ ನಿನಗೆ ? ಅಂಥವರ ಬಾಯಿಯಿಂದ ನೀನು ನನಗೆ ಬುದ್ಧಿ ಹೇಳಲು ಹೇಳಿದೆಯಲ್ಲ .. . ಆದಕ್ಕೇ ನನ್ನ ಮನಸ್ಸಿಗೆ ಅಸ ಮಾಧಾನವಾಯಿತು

“ ಆವರು ನಿನ್ನ ಮೇಲೆಯೂ ಅಪಪ್ರಚಾರ ನಡೆಸಿದರೇ ! ನನಗೇನು ಗೊತ್ತು ಮಗೂ ಅದೆಲ್ಲ ? ನಾನು ಸತ್ಯಕ್ಕೆ ಸರಿಯಾಗಿ ನಡೆಯುವವಳು ಏನೋ ವಯಸ್ಸಿನಿಂದ ಹಿರಿಯವರು ಎಂದು ಅವರೊಡನೆ ಹೇಳಿಕೊಂಡೆ ಆದರೂ ದೇವರು ಇದ್ದಾನೆ ನಾನು ಸಾಯುವುದರೊಳಗೆ ನಿನ್ನ ಮದುವೆ ಯನ್ನು ನೋಡುತ್ತೇನೆ. ನಿನ್ನ ಮನಸ್ಸಿಗೆ ಯಾವಾಗ ಬೇಡವೆಂದು ಅನಿ ಸಿತೋ ಅಂದಮೇಲೆ ನಾನೇಕೆ ಆಗ್ರಹ ಪಡಿಸಬೇಕು ಮದುವೆ ಮಾಡು ವುದು ನಿನ್ನ ಸುಖಕ್ಕಾಗಿ. ಆದರೂ ಹಿರಿಯಳಾದ ನನ್ನದೊಂದು ಆಸೆ

ದೇವರು ಅದನ್ನು ಈಡೇರಿಸದೆ ಬಿಡಲಾರ "

" ನೀನು ಯಾಕೆ ಹೆದರುತ್ತಿ ? ನನ್ನ ಮದುವೆಯನ್ನು ನೋಡದೆ ನಿನ್ನನ್ನು ಮುಟ್ಟಲಿಕ್ಕೂ ಅವನಿಗೆ ಸಾಧ್ಯವಿಲ್ಲ "

" ಅದೇ ನನ್ನ ಆಸೆ ಮಗೂ " ಎಂದು ಸುಬ್ಬಿ ಪುನಃ ಕಣ್ಣೀರು ಒರಸಿ ಕೊಂಡಳು ಅಷ್ಟರಲ್ಲಿ ಕಾಂತಪ್ಪ ಬಂದು ಶಂಕರನನ್ನು ಕೂಗಿದ ಶಂಕರ ಸಾಲೆಯ ಕಟ್ಟಡದತ್ತ ನಡೆದ

ಮುಂದಿನಿಂದ ಕಾಂತಪ್ಪ ನಡೆಯುತ್ತಿದ್ದ ಶಂಕರ ಅವನನ್ನು ಹಿಂಬಾಲಿಸಿದ್ದ ಶಂಕರನ ತಲೆಯಲ್ಲಿ ಆಗ ನಡೆದ ಘಟನೆಯ ದೃಶ್ಯ ಇನ್ನೂ ಮಾಯವಾಗಿರಲಿಲ್ಲ ತನ್ನ ಮೃದುಮನಸ್ಸು ಅಷ್ಟು ಸಣ್ಣ ವಿಷಯಕ್ಕೆ ಕಲುಕಿ ಹೋಯಿತಲ್ಲ—ಎಂದು ಅವನು ವಿಚಾರಿಸುತ್ತಿದ್ದ ದೊಡ್ಡ ದೊಡ್ಡ ಧೋರಣೆಗಳನ್ನು ಮುಂದಿಟ್ಟು ಹೊರಟವನಿಗೆ ಮನೆತನದ ಒಂದು ಚಿಕ್ಕ ವಿಚಾರ ಕಣ್ಣಲ್ಲಿ ನೀರು ತರುವಷ್ಟು ಬಲವಂತ ಮಾಡಿತು ನನ್ನ ಮನಸ್ಸು ಇಷ್ಟು ಕ್ಷುಲ್ಲಕವಾಗಿದೆಯೇ ? ಈ ಮನಸ್ಸನ್ನು ಹಿಡಿದುಕೊಂಡು ತಾನು ಮುಂದೆ ಹೇಗೆ ಎಲ್ಲ ಎಡರುತೊಡರುಗಳನ್ನು ಎದುರಿಸುವುದು ? ಅದು ತನ್ನಿಂದ ಸಾಧ್ಯವಾಗುತ್ತದೋ ಇಲ್ಲವೋ ! ಎಂದು ಮುಂತಾಗಿ ಅವನು ತರ್ಕ ಮಾಡಿಕೊಂಡ

ಮಾನವನ ಹೃದಯ ಮಾತೆಗೆ ಮಮತೆಯನ್ನು ತೋರಿಸುವಾಗ ಆ ರೀತಿ ಮೃದುವಾಗುತ್ತದೆಂಬ ಅರಿವೂ ಅವನಿಗೆ ಕೊನೆಯಲ್ಲಿ ಬಂತು ಹಾಗೆ ಆಗದ ಹೃದಯ ಮನುಷ್ಯನದಲ್ಲ—ಎಂಬುದೂ ಅವನಿಗೆ ಗೋಚರವಾಯಿತು ಅವಳಿಗೆ ಗೌರವ ತೋರಿಸುವುದು ತನ್ನ ಕರ್ತವ್ಯವಾದರೂ ಅವಳಂತೆ ನಡೆದರೆ ತನ್ನ ಮುಂದಿನ ಕಾರ್ಯಗಳಿಗೆ ವಿಘ್ನ ಬರುವುದು ಖಂಡಿತವಾದುದರಿಂದ ತಾನು ಆ ಒಂದು ವಿಷಯದಲ್ಲಿ ಅವಳ ಮಾತನ್ನು ಮೀರುವುದೆಂದು ನಿರ್ಧರಿಸಿದ ಆದಕ್ಕೆ ಅವಳು ಮನವಾರೆ ಒಪ್ಪಿರುವುದರಿಂದ ಶಂಕರನಿಗೆ ಸಂತಸವಾಯಿತು ಮುಂದಿನ ಕೆಲಸಗಳನ್ನು ನೆರವೇರಿಸಲು ಉತ್ಸಾಹವೂ ಬಂತು

ಶಂಕರನ ಮುಳಿಹುಲ್ಲಿನ ಮನೆಯ ಹಿಂದೆ ಸುಮಾರು ಅರ್ಧ ಮೈಲು ದೂರದಲ್ಲಿ ' ಕಲಾನಿಕೇತನ ' ಸ್ಥಾಪಿಸಲ್ಪಟ್ಟಿತ್ತು ಅಲ್ಲಿಯ ತಾವು ಅಂಥ ಸಂಸ್ಥೆಗಳನ್ನು ಕಟ್ಟಲು ಹೇಳಿ ಮಾಡಿಸಿದಂತೆ ರಮ್ಯವಾಗಿತ್ತು ಅರ್ಧ ಮೈಲು

ವಿಸ್ತೀರ್ಣದ ವಿಶಾಲವಾದ ಭೂಮಿಯು ಅಲ್ಲಿ ಬರಡು ಬಯಲಿನಂತೆ ನಿರುಪಯೋಗವಾಗಿ ಬಿದ್ದಿತ್ತು–ಹಲವಾರು ವರುಷಗಳಿಂದ ಅದರ ಹಕ್ಕು ಶಂಕರನಿಗೆ ಇತ್ತು ಆದ್ದರಿಂದ ಅವನಿಗೆ ಜಾಗ ಖರೀದಿಗೆ ಕೊಳ್ಳುವ ಪ್ರಯಾಸ ತಪ್ಪಿತೆನ್ನಬಹುದು ಆ ವಿಶಾಲವಾದ ಬಯಲಿನ ಹಿಂದೆ ಮೇರೆಯಾಗಿ ಗುಡ್ಡಗಳು ಒಂದಕ್ಕೊಂದು ಅಡ್ಡವಾಗಿ ಮೇಲೇರಿ ನಿಂತಿದ್ದವು ಅಲ್ಲಿಯ ಕಾಡು ಪ್ರಾಣಿಗಳು ತಮ್ಮ ದುಷ್ಟತನವನ್ನು ಬಿಟ್ಟುಕೊಟ್ಟಿರಲಿಲ್ಲ ಆದರೆ ಅಂಥ ಅಪಾಯಕರ ಅಡವಿಗೂ ಶಂಕರ ಕಟ್ಟಿಸಿದ ಸಾಲೆಗೂ ಸಾಕಷ್ಟು ಸುರಕ್ಷತೆಯ ಅಂತರವಿತ್ತು ಹಾಗೆಂದು ಅಲ್ಲೇನು ಸಿಂಹ, ಆನೆಗಳು ಮನೆಮಾಡಿಕೊಂಡಿರಲಿಲ್ಲ ಅವುಗಳಿಗೆಲ್ಲ ಲೆಕ್ಕಿಸುವ ಸ್ವಭಾವ ಶಂಕರನದಲ್ಲ ಆತನು ಚಿಕ್ಕವನಿರುವಾಗ ಅಲ್ಲಿಯ ಅಡವಿಗಳ ಅಣುಗನಾಗಿ ದಿನ ಕಳೆದಿದ್ದ ಅಲ್ಲಿ ಎಲ್ಲೆಲ್ಲಿ ಏನೇನಿದೆ ಎಂಬುದು ಅವನಿಗೆ ಇನ್ನೂ ನೆನಪಿದೆ ಅಲ್ಲಿರುವ ಹುಲಿಯ ಗವಿಗಳೂ ಅವನ ಪರಿಚಯದವುಗಳೇ

'ಕಲಾನಿಕೇತನ'ಕ್ಕೆ ಬಹುದೂರದಲ್ಲಿ ಪೇಟೆಗಳು ಇರಲಿಲ್ಲ ಮೂಡು ಮನೆಯಿಂದ ಅಶ್ವತ್ಥಪುರಕ್ಕೆ ಇರುವುದು ಬಹಳವಾದರೆ ಮೂರು ಫರ್ಲಾಂಗು ಆದರೆ ಶಂಕರನಿಗೆ ಅಶ್ವತ್ಥಪುರ ಪೇಟೆಗಿಂತ ಸಂಪಿಗೆಗೂ ಅಶ್ವತ್ಥಪುರಕ್ಕೂ ನಡುವೆ ಚಾಚಿದ ಮಾರ್ಗಕ್ಕೆ ತನ್ನ 'ಕಲಾನಿಕೇತನ'ದ ರಸ್ತೆಯನ್ನು ತಂದು ಕೂಡಿಸುವುದು ಬೇಕಾಗಿತ್ತು ಉಳಿದೆಲ್ಲ ಕೆಲಸಗಳು ಇಷ್ಟರಲ್ಲೇ ಮುಗಿದಿದ್ದವೆನ್ನಬಹುದು ಈ ರಸ್ತೆಯ ಕೆಲಸವನ್ನು ನಾಳೆಯಿಂದ ಪ್ರಾರಂಭ ಮಾಡಬೇಕೆಂಬುದನ್ನು ಅವನು ನಿರ್ಧರಿಸಿದ್ದ. ಅದನ್ನು ನಾಲ್ಕಾರು ಅನುಭವಸ್ಥರೊಡನೆ ಕೇಳಿಯೂ ಆಗಿತ್ತು

'ಕಲಾನಿಕೇತನ' ದಿಂದ ಸಂಪಿಗೆಯ ರಸ್ತೆಗೆ ತೀರ ಸಮೀಪದಿಂದ 'ಮಾರ್ಗ' ಮಾಡಬೇಕೆಂದರೆ ಕನಿಷ್ಟ ಪಕ್ಷಕ್ಕೆ ಒಂದು ಮೈಲು ದೂರದ ಅಂತರವನ್ನು ಪರಿಗಣಿಸಬೇಕು. 'ಮಾರ್ಗ' ಎಂದರೆ, ರಾಜರಸ್ತೆಯನ್ನು ಕಡೆಯಬೇಕೆಂದಲ್ಲ ಸಾಲೆಯ ಪ್ರಾರಂಭೋತ್ಸವದ ದಿವಸ ಹತ್ತಾರು ಗಣ್ಯ ವ್ಯಕ್ತಿಗಳು ಕಾರಿನಲ್ಲಿ ಬರುವುದಂತು ಖಂಡಿತ. ಅಂಥವರನ್ನು ಒಂದು ಮೈಲು ನಡೆಸಿ, ವ್ಯಾಯಾಮ ಮಾಡಿಸಿ ಕರೆದು ತರುವುದು ಅಷ್ಟೇನು ಸಮಂಜಸವೆಂದು ಶಂಕರನಿಗೆ ಅನಿಸಿರಲಿಕ್ಕಿಲ್ಲ ಅಲ್ಲದೆ, ಸಾಲೆಗೂ ಪೇಟೆಯ ರಸ್ತೆಗೂ

ನಡುವೆ ಯೋಗ್ಯವಾದ ದಾರಿಯೊಂದು ಬೇಕಿತ್ತು ಈಗ ಇದ್ದ ದಾರಿಯ ನಡಿಗೆಯೇ ಬೇರೆ ಆದರಿಂದ ನಡೆದು ಹೋದರೆ, ಎರಡು ಮೂರು ಮೈಲು ಸುಮ್ಮನೆ ವಿಹರಿಸಬೇಕಾದೀತು ಆದ್ದರಿಂದ ಆ ರಸ್ತೆಗಾಗಿ ಸ್ವಲ್ಪ ಹಣ ವೆಚ್ಚವಾದರೂ ಅಡ್ಡಿ ಇಲ್ಲವೆಂದು ಶಂಕರನ ಮತ್ತು ಅವನ ಸಲಹೆಗಾರರ ಮತವಿತ್ತು

ತಮ್ಮ ಹಳ್ಳಿಯಲ್ಲಿ ಒಂದು ರಸ್ತೆ ಹಾದು ಹೋಗುತ್ತದೆಂದು ಕೇಳಿ, ಎಲ್ಲ ವರ್ಗದಾರರೂ ತಮ್ಮ ತಮ್ಮ ಹೊಲಗಳ ಮಧ್ಯದಿಂದ ರಸ್ತೆ ಮಾಡಲು ಅನುಮತಿ ಕೊಟ್ಟರು ಎಷ್ಟೋ ಧನಿಗಳು ಆ ರಸ್ತೆ ತಮ್ಮ ಹೊಲಗಳ ಹತ್ತಿರ ದಿಂದ ಹೋದರೆ ಒಳ್ಳೆಯದಾಗುತ್ತಿತ್ತೆಂದು, ಆ ಬಗ್ಗೆ ಶಂಕರನೊಡನೆ ಕೇಳಿದ್ದೂ ಉಂಟು ಅಷ್ಟೇ ಅಲ್ಲ, ಅದಕ್ಕಾಗಿ ಸ್ವಲ್ಪ ಸಹಾಯವನ್ನೂ ತಾವು ಮಾಡಬಹುದೆಂದು ಹೇಳಿದ್ದರು ದುರ್ದೈವದಿಂದ ಅಂಥ ಉಮೇದವಾರರ ಗದ್ದೆಗಳಿಂದ ರಸ್ತೆ ಹೋಗುವ ಸಂಭವವಿರಲಿಲ್ಲ.

ಎಡಹಿತ್ತಲು ಅಣ್ಣಪ್ಪಯ್ಯನವರು ಒಬ್ಬರು ಆ ವಿಷಯದಲ್ಲಿ ತೋರಿಸ ತಕ್ಕಂಥ ಔದಾರ್ಯ ಮುಖ್ಯವಾಗಿತ್ತು ಅವರೊಬ್ಬರು ತಮ್ಮ ಗದ್ದೆಯ ಮಧ್ಯ ದಿಂದ ಹತ್ತು ಮಾರು ಜಾಗವನ್ನು ಬಿಟ್ಟುಕೊಡದಿದ್ದರೆ, ಶಂಕರ ರಸ್ತೆ ಮಾಡಿಸುವುದು ತ್ರಾಸುದಾಯಕವಾಗುತ್ತಿತ್ತು ಕಾರಣ ಅವರೊಡನೆ ಅವನು ಆ ಜಾಗದ ದೇಣಿಗೆಯ ಬಗ್ಗೆ ಕೇಳಿಕೊಂಡ ಅವರು ಒಪ್ಪಿಕೊಂಡರೇನೋ ನಿಜ ಆದರೆ ಅವರು ನಡುವೆ ಒಂದು ಕುಂಟು ಪಂಕ್ತಿಯನ್ನು ಸೇರಿಸಿದರು

ಶಂಕರ ಅವರಲ್ಲಿಗೆ ಹೋಗಿ, ಅವರ ಹಕ್ಕಿನ ಬೆಟ್ಟು ಗದ್ದೆಯ ಜಾಗನ್ನು ಕೇಳಿದ. ಅದರ ಉದ್ದೇಶವನ್ನು ಅವರಿಗೆ ತಿಳಿಸಿ ಹೇಳಿದ ಆಗ ಅವರು, "ಅಲ್ಲಿ—ಆ ಗದ್ದೆಯಿಂದ ನನಗೇನು ಪ್ರಯೋಜನವಿಲ್ಲ ಅದರಲ್ಲಿ ಬೆಳೆ ಬರುವು ದಿಲ್ಲ, ನಾವು ಬಿತ್ತುವುದೂ ಇಲ್ಲ—ನಿಜ ಆದರೆ ಅದು ನನ್ನ ಪಿತ್ರಾರ್ಜಿತ ಆಸ್ತಿ. ಅದನ್ನು ಹಾಗೆಲ್ಲ ಒಮ್ಮೆಲೆ ನಾನು ದೊಡ್ಡಸ್ತಿಕೆಯಿಂದ ದಾನ ಮಾಡು ವುದು ನನಗೆ ಯಾಕೋ ಅಷ್ಟು ಸಮಂಜಸವೆಂದು ಅನಿಸಲಾರದಲ್ಲ ಶಂಕರಾ?" ಎಂದು ಪ್ರಶ್ನಿಸಿದರು

ಅವರು ಏನೇನು ಅಡ್ಡಿ–ಆತಂಕ ತೆಗೆಯುತ್ತಾರೆಂಬುದನ್ನು ಮೊದಲೇ ಊಹಿಸಿಕೊಂಡು, ಅವಕ್ಕೆ ತಕ್ಕ ಉತ್ತರಗಳನ್ನು ತಯಾರು ಮಾಡಿಕೊಂಡು

ಹೋದ ಶಂಕರನಿಗೆ ಬಹಳ ಹೊತ್ತು ಅವರೊಡನೆ ಮಾತಾಡುವ ಆವಶ್ಯಕತೆ ಬೀಳಲಿಲ್ಲ

"ನೋಡಿ, ನಿಮ್ಮ ಖುಷಿ ಹೇಳಲಿಕ್ಕೆ ಒಂದು ರಸ್ತೆ ಎಂಬ ಸಣ್ಣ ಶಬ್ದವಾದರೂ ಅದರಿಂದ ನಾಲ್ಕು ಮಂದಿ ಬರುವ–ಹೋಗುವವರಿಗೂ ಮತ್ತಿ ತರರಿಗೂ ಎಷ್ಟು ಪ್ರಯೋಜನವಿದೆಯೆಂದು ನಾನೇನು ನಿಮಗೆ ಹೇಳಬೇಕಾ ಗಿಲ್ಲ ನೀವು ಅಲ್ಲಿಯ ಜಾಗವನ್ನು ಉಪಯೋಗಿಸಲು ಅನುಮತಿ ಕೊಡು ತ್ತೀರೆಂಬ ಧೈರ್ಯದಿಂದ ನಾನು ಇಲ್ಲಿಯವರೆಗೆ ಬಂದಿದ್ದೇನೆ ಎಷ್ಟೋ ಜನರು 'ನಮ್ಮ ಗದ್ದೆಯ ಹತ್ತಿರದಿಂದ ರಸ್ತೆ ಮಾಡಿಸಿರಿ' ಎಂದು ನನ್ನನ್ನು ಬೆನ್ನು ಹತ್ತಿದ್ದಾರೆ ಹಾಗೆ ಎಲ್ಲರ ಹೊಲಗಳ ಹತ್ತಿರದಿಂದ ರಸ್ತೆ ಮಾಡು ವುದು ನನ್ನಿಂದ ಸಾಧ್ಯವಾಗದ ಮಾತು ನಿಮ್ಮಂಥ ತಿಳಿದವರು ಅಷ್ಟನ್ನು ಅನುಗ್ರಹ ಮಾಡಿದರೆ ಎಷ್ಟೋ ಉಪಕಾರವಾದೀತು ನಿಮಗೂ ಅದರಿಂದ ಏನಾದರೂ ಉಪಯೋಗ ಬೀಳದೆ ಹೋಗದೆಂದು ಭಾವಿಸಿದ್ದೇನೆ" ಎಂದು ಶಂಕರ ಹೇಳಿದ

"ಒಂದು ಮಾರ್ಗ ಮಾಡಿಸುವುದರಿಂದ ಎಷ್ಟೋ ಉಪಕಾರವಾಗುತ್ತ ದೆಂಬುದು ನನಗೂ ಗೊತ್ತಿದೆ ಗಾದೆಯೇ ಇದೆಯಲ್ಲ, 'ಬ್ರಾಹ್ಮಣ ಸುಟ್ಟರೂ ಅವನ ಜನಿವಾರ ಸುಡುವುದಿಲ್ಲ' ಅಂತ ಹೇಳಿ ಇಡಿ ಗುಡ್ಡ ಕಾಳ್ಗಿಚ್ಚಿನಲ್ಲಿ ಉರಿಯುತ್ತಿದ್ದರೂ ಅದರ ಮೇಲೆ ಬಿದ್ದಿರುವ ಜನಿವಾರದಂಥ ದಾರಿ ಹಾಗೇ ಉಳಿಯುತ್ತದೆಂದು ನಮ್ಮ ಪೂರ್ವಜರಿಗೆ ಗೊತ್ತಿರಬೇಕು. ಅದಕ್ಕಾಗಿ ಆ ಗಾದೆ ಮಾಡಿದರು"

"ನೀವು ದಯವಿಟ್ಟು ಸುಮ್ಮನೆ ವೇಳೆ ಕಳೆಯಬೇಡಿ, ಅಂಥ ಗಾದೆ ಗಳನ್ನು ನೀವು ನನಗೆ ಹಿಂದಕ್ಕೆ ಎಷ್ಟೋ ಹೇಳಿದ್ದಿರಿ ಮೊದಲು, ನೀವು ಅಲ್ಲಿಯ ಜಾಗವನ್ನು ದಾನ ಮಾಡುತ್ತಿರೋ ಇಲ್ಲವೋ ತಿಳಿಸಿರಿ"

"ಅದಕ್ಕೇನು ಅಡ್ಡಿಯಿಲ್ಲ. ಆದರೆ ಹಾಗೇ ಜಾಗ ಕೊಡುವುದು ನಮ್ಮ ಗುರುಹಿರಿಯರ ಮನಸ್ಸಿಗೆ ಸರಿಹೋಗುತ್ತದೋ ಇಲ್ಲವೋ ?"

"ನಿಮ್ಮ ಹೆಸರನ್ನೂ ನಿಮ್ಮ ಹಿರಿಯರ ಹೆಸರನ್ನೂ ದಿವಸಾಗಲೂ ಅದರ ಮೇಲೆ ನಡೆಯುವ ಜನರು ಸಾವಿರಾರು ಸಲ ನೆನೆಸುತ್ತಾರೆ 'ಇದು ಇಂಥ ವರ ಜಾಗ—ಧರ್ಮಾರ್ಥ ಕೊಟ್ಟಿದಂತೆ' ಎಂದು ಜನ ಅಡಿಕೊಳ್ಳದೆ ಬಿಡು

ತ್ತಾರೆಯೇ ? ”

“ ಹಾಗೆಲ್ಲ ಒಬ್ಬರನ್ನು ನೆನೆಸುವ ಜನ ಈ ಊರಿನದಲ್ಲ ನಿನಗೆ ಇನ್ನೂ ಈ ಕರೆಯ ಜನರ ಗುಟ್ಟು ಗೊತ್ತಾಗಿಲ್ಲ ನೀನು ನನ್ನ ಜಾಗದಿಂದ ರಸ್ತೆ ಒಯ್ದರೆ, ಜನರು ‘ ಬೇಕೆಂವೇ ಹಣ ಕೊಟ್ಟು ತನ್ನ ಗದ್ದೆಯ ಹತ್ತಿರದಿಂದ ರಸ್ತೆ ಕಡೆಸಿದ ’ ಎಂದು ಹೇಳುವವರು ”

“ ಹಾಗಾದರೆ ನೀವು ಏನು ಮಾಡಬೇಕು ಅನ್ನುತ್ತೀರಿ ? ನಿಮ್ಮ ಹೆಸರು ಒಂದು ಮುಂದೆ ಬರಬೇಕು ಹೌದೋ ಅಲ್ಲವೋ ? ”

“ ಹಾಗೇನು ಅಲ್ಲ ಮತ್ತು ನೀನು ಆ ನಿಕೇತನದ ಗೋಡೆಯ ಮೇಲೆ ಕಲ್ಲಿನಲ್ಲಿ ಯಾರಾರದೋ ಹೆಸರು ಕೆತ್ತಿಸಿ ಹಾಕುತ್ತೀಯೋ ಇಲ್ಲ ? ಅಂದರೆ ನಿನ್ನ ಸಾಲೆಗೆ ಧನ ಸಹಾಯ ಮಾಡಿದವರದ್ದು, ಹೀಗೆ ಜಾಗ ದಾನ ಮಾಡಿದವರದ್ದು ”

“ ಅಷ್ಟು ದೊಡ್ಡ ಸ್ವಾರ್ಥಿಗಳು ಯಾರೂ ನನಗೆ ಸಹಾಯ ಮಾಡಿಲ್ಲ ನನಗೆ ಹಣ ಸಹಾಯ ಮಾಡಿದ್ದಾರೆ—ಬಹಳ ಜನರು ಆದರೆ ಅವರಲ್ಲಿ ಒಬ್ಬನಾದರೂ ತನ್ನ ಹೆಸರು ಮುಂದೆ ಬರಬೇಕು, ಅದರ ಪ್ರಚಾರ ಸಾವಿರಾರು ಜನರ ಮುಂದೆ ಆಗಬೇಕು—ಎಂಬ ಹಂಬಲವುಳ್ಳವನು ಇಲ್ಲ ಅವರೆಲ್ಲ ಹಣಕೊಡುವಾಗ ‘ ನನ್ನ ಹೆಸರು ಹೇಳಬೇಡ ’ ಎಂದೇ ಕೊಟ್ಟಿದ್ದಾರೆ ಆದರೆ ಕೆಲವರ ಹೆಸರುಗಳನ್ನು ನಾನು ಪ್ರಾರಂಭೋತ್ಸವದ ದಿನ ಸಭೆಯಲ್ಲಿ ಓದಿ ಹೇಳಿ, ಅವರಿಗೆ ಉಪಕಾರ ಸ್ಮರಣೆಯನ್ನು ಸಲ್ಲಿಸಬೇಕೆಂದಿದ್ದೇನೆ ”

“ಅಂಥ ವೇಳೆಯಲ್ಲಿ ನನ್ನ ಹೆಸರನ್ನು ಅದರಲ್ಲಿ ಸೂಚಿಸಲಿಕ್ಕೆ ಮರೆಯಬೇಡ ಈ ಊರಿನ ಜನಗಳಿಗೂ ತಿಳಿಯಲಿ—ನಾನಾಗಿ ಅಲ್ಲಿಯ ಜಾಗವನ್ನು ನಿನಗೆ ಕೊಟ್ಟೆ—ಎಂದು ”

“ಆದೀತು, ಅದಕ್ಕೇನು ? ನಿಮ್ಮ ಹೆಸರನ್ನು ಮೊಟ್ಟಮೊದಲು ಸ್ವಲ್ಪ ಗಟ್ಟಿಯಾಗಿ ಎಲ್ಲರಿಗೂ ಕೇಳಿಸುವಂತೆ ಹೇಳುತ್ತೇನೆ ಆ ಬಗ್ಗೆ ನೀವೇನು ಕಾಳಜಿ ಮಾಡುವುದು ಬೇಡ ”

“ಒಳ್ಳೇದು ನೀನು ಅಲ್ಲಿಯ ಜಾಗದಲ್ಲಿ ರಸ್ತೆ ಮಾಡಿಸು ನನ್ನದೇನು ತಕರಾರು ಇಲ್ಲ ” ಎಂದು ಹೇಳಿ ಅಣ್ಣಪ್ಪಯ್ಯ ಶಂಕರನನ್ನು ಅವರ ಮನೆಯಿಂದ ಹತ್ತಾರು ಹೆಜ್ಜೆಗಳ ವರೆಗೆ, ಬೆನ್ನಿನ ಮೇಲೆ ಕೈಯಿಟ್ಟು ಕಳುಹಿಸಿ

ಬಂದಿದ್ದರು

'ಕಲಾನಿಕೇತನ' ಎಂದು ಹೆಸರು ಇರಿಸಿದ್ದರೂ ಅದನ್ನು ಆದರ್ಶ ವಿದ್ಯಾರ್ಥಿ ನಿಲಯವನ್ನಾಗಿ ಮಾಡಬೇಕೆಂದು ಶಂಕರ ಪ್ರಯತ್ನಿಸುತ್ತಿದ್ದ ಆ ಕಟ್ಟಡದ ನಿರ್ಮಾಣವು ಅವನ ಯೋಜನೆಗೆ ತಕ್ಕಂತೆ ಆಗಿತ್ತು ಆದರೆ ಅದ ರಲ್ಲಿ ಇನ್ನೂ ಜೀವಶಕ್ತಿ ಪ್ರವೇಶಿಸಿರಲಿಲ್ಲ ಅದು ಕೇವಲ ಬ್ರಹ್ಮ ನಿರ್ಮಿಸಿದ ಪುಟ್ಟ ಶಿಶುವಿನ ಆದರ್ಶ ಆಕೃತಿಯಾಗಿತ್ತು ಇನ್ನು ಅದರೊಳಗೆ ಆತ್ಮನನ್ನು ಕಳುಹಿಸುವ ಕಾರ್ಯ ಒಂದು ಬಾಕಿ ಉಳಿದಿತ್ತು

ಇಲ್ಲಿಯವರೆಗೆ ಶಂಕರನಿಗೆ ಅವನ ಕಾರ್ಯದಲ್ಲಿ ಯಾವುದೂ ಅಪಾರ ವಾದ ಎಡರು ಬಂದು ಒದಗಿರಲಿಲ್ಲ ಮುಂದೆ ಬರುವ ವಿಘ್ನಗಳಿಗಾಗಿ ಚಿಂತಿಸಿ ಕೊಡುವ ಹವ್ಯಾಸ ಅವನಿಗಿಲ್ಲ ಅವುಗಳನ್ನು ಆತ ಎಣಿಸಿರಲೂ ಇಲ್ಲ ಕೈ-ಯಲ್ಲಿ ಇರುವ ಹಣವನ್ನೆಲ್ಲ ಕಟ್ಟಡಕ್ಕಾಗಿ ವಿನಿಯೋಗಿಸಿದ ಮೈಮೇಲಿನ ಚಿನ್ನದ ಆಭರಣಗಳನ್ನು ಮಾರಬೇಕಾಯಿತು ಅದಕ್ಕಾಗಿ ಅವನಿಗೆ ಯಾವ ಪಶ್ಚಾತ್ತಾಪವೆನಿಸಲಿಲ್ಲ ಅಲ್ಲದೆ ಎಷ್ಟೋ ಜನ ಮಿತ್ರರು ಅವನಿಗೆ ಸಹಾಯ ಮಾಡುತ್ತೇವೆಂದು ವಾಗ್ದಾನ ಮಾಡಿದ್ದರು ಮತ್ತು ಸಾಲೆಯ ಪ್ರಾರಂಭೋ ತ್ಸವದ ದಿನ ಸ್ವಲ್ಪವಾದರೂ ನಿಧಿ ಸಂಗ್ರಹವಾದೀತು ಎಂಬ ಭರವಸೆಯೂ ಅವನಿಗಿತ್ತು ಪರವೂರಿನ ಎಷ್ಟೋ ಜನ ಅವನ ಗೆಳೆಯರು ದೊಡ್ಡ ದೊಡ್ಡ ನೌಕರಿಗಳನ್ನು ದೊರಕಿಸಿಕೊಂಡವರು, ತಮ್ಮಿಂದ ಆದಷ್ಟು ಹಣ ಕೊಡುತ್ತೇ ವೆಂದು ಹೇಳಿದ್ದರು ಈ ಎಲ್ಲ ಹಿಂದಿನ ಪ್ರೋತ್ಸಾಹನೆಯ ಬಲದ ಮೇಲೆ ಶಂಕರ ಮುಂದಿನ ವಿಷಯ ಯೋಚಿಸದೆ ಸತತವಾಗಿ ಸಾಲೆಯ ಪ್ರಾರಂಭೋ ತ್ಸವ ಮಾಡಲು ಹವಣಿಸಿದ

" ಒಮ್ಮೆ ಈ ನಿರ್ಜೀವ ಬೊಂಬೆಗೆ ಜೀವ ಕೊಟ್ಟು ಬಿಟ್ಟರೆ ಅವೇಳೆ ಅದನ್ನು ಹೇಗಾದರೂ ಪೋಷಿಸಬಹುದು " ಎಂದು ನೆರೆನಂಬಿ ಶಂಕರ ' ಕಲಾ ನಿಕೇತನ ' ದ ಕೆಲಸಗಳಲ್ಲಿ ಮಗ್ನನಾಗಿದ್ದನಷ್ಟೆ ಅವನ ಮಾತುಗಳನ್ನು ಕೇಳಿ ಅವನಂತೆ ನಡೆಯುವ ಅವನ ಒಂದೆರಡು ಆತ್ಮೀಯ ಗೆಳೆಯರೂ ಮುಂದಿನ ಚಿಂತೆಯನ್ನು ಮಾಡಲಿಲ್ಲ ಅವರೂ ಇವನೊಡನೆ ಆಸ್ಥೆ ವಹಿಸಿ ದುಡಿಯ ತೊಡಗಿದರು ಸುರೇಶ ಅನ್ನುವ ಒಬ್ಬನಂತೂ " ನಾನೂ ನಿನ್ನಂತೆ ಈ ಸಾಲೆ ಯಲ್ಲಿ ತನ್ನ ಸೇವೆ ಸಲ್ಲಿಸುತ್ತೇನೆ " ಎಂದು ಶಂಕರನ ಬೆನ್ನು ಹಿಡಿದ ಅವನು

ಮ್ಯಾಟ್ರಿಕ್ ಪಾಸಾಗಿದ್ದ ಶಂಕರನಿಗೆ ಅವನ ಉಪಯೋಗವಿತ್ತು ತಾನು ಅವನಷ್ಟು ಕಲಿಯದಿದ್ದರೂ, ಅರ್ಥಾತ್ ಮ್ಯಾಟ್ರಿಕ್ ಫೈಲಾಗಿದ್ದರೂ ಅವನಿಗಿಂತ ಹೆಚ್ಚಿನ ವಿದ್ಯೆ ತನಗೆ ಬರುತ್ತಿದ್ದರೂ ಶಂಕರ ಅವನನ್ನು ತನ್ನ ಸಂಗಡ ಕೂಡಿಸಿಕೊಂಡ

ಇನ್ನು ಕಾಂತಪ್ಪ, ತುಕ್ರ, ತನಿಯ, ಮೋಂಟ, ಮೋನಪ್ಪ ಮೊದಲಾದ ಆಳುಗಳು ಶಂಕರ ಹೇಳಿದುದಕ್ಕಿಂತ ಹೆಚ್ಚು ಕೆಲಸ ಮಾಡುತ್ತ ಅವನಿಗೆ ಸಹಾಯ ಮಾಡಿದುದರಿಂದ ಕಲಾನಿಕೇತನದ ಕಟ್ಟಡ ಅಷ್ಟು ತೀವ್ರದಲ್ಲಿ ತಯಾರಾಯಿತು

ಒಳ್ಳೆಯ ಕೆಲಸ ಮಾಡಲು ಹೊರಟವನಿಗೆ ದೈವೀ ಬೆಂಬಲವೂ ಇರುತ್ತದೆ ಎನ್ನುವುದಕ್ಕೆ ಕಲಾನಿಕೇತನದ ಹತ್ತಿರ ಆ ಗುಡ್ಡೆಯ ಮೇಲೆ ತೋಡಿದ ಬಾವಿಯಲ್ಲಿ ಸಮೃದ್ಧವಾದ ನೀರು ಕೇವಲ ಒಂದುವರೆ ಆಳು ಅಡಿಯಲ್ಲಿ ದೊರಕಿದುದೇ ಸಾಕ್ಷಿ ಆ ನೀರಿನಿಂದ ಅಲ್ಲಿಯ ಗುಡ್ಡೆಯ ಜಾಗೆಯನ್ನು ಉತ್ತು ಬೇಕಾದ ಹಾಗ 'ಸುಗ್ಗಿ, ಕೊಳಕೆ' ಮಾಡಬಹುದೆಂದು ಬಂದವರು ಹೋದವರು ಹೇಳತೊಡಗಿದರು.

ಮೊದಲು ಬಾವಿಯಂತೆ ತೋಡಿದ್ದರೂ ಅದನ್ನು ಕೆರೆಯಂತೆ ವಿಸ್ತರಿಸಿ ಅಗೆಯಿಸಿದ—ಶಂಕರ ಅಲ್ಲಿ ಅಷ್ಟು ಒಳ್ಳೆಯ ನೀರು ಸಿಕ್ಕಿದ್ದರಿಂದ ಶಂಕರನಿಗೆ ಅಪಾರವಾದ ಆನಂದವಾಯಿತು "ನೀರು ಮತ್ತು ವಿದ್ಯೆಗಳಿಗೆ ಸರಿಯಾದ ಸಂಪತ್ತು ಮತ್ತೊಂದಿಲ್ಲ ನೀರನ್ನು ಮತ್ತು ವಿದ್ಯೆಯನ್ನು ಯಾವ ಕಳ್ಳನಿಂದಲೂ ಕದಿಯಲಿಕ್ಕೆ ಸಾಧ್ಯವಿಲ್ಲ ಅದನ್ನು ಪಡೆದ ಶಂಕರ ನಿಜಕ್ಕೂ ಭಾಗ್ಯಶಾಲಿ" ಎಂದು ಎಷ್ಟೋ ಜನ ಅವನನ್ನು ಅಭಿನಂದಿಸಿದರು ಶಂಕರನಾದರೂ ಆ ಕೆರೆಯನ್ನು ದೊಡ್ಡ ಸಂಪತ್ತೆಂದು ಭಾವಿಸಿದ್ದ ಅದಕ್ಕೆ ಸುಂದರವಾದ ಗೋಡೆ, ಮೆಟ್ಟಲು, ಜಗಲಿಗಳನ್ನು ಕಟ್ಟಿಸಿ, ಅದರ ನೀರು ಸ್ವಚ್ಛವಾಗಿರುವಂತೆ ಜಾಗ್ರತೆ ವಹಿಸಿಯಾಗಿತ್ತು

ಆ ಕೆರೆಯಿಂದ ಬಹಳ ದೂರ 'ಕಲಾನಿಕೇತನ' ಇರಲಿಲ್ಲವಷ್ಟೆ ಸಾಲೆಯ ಬಲಕ್ಕೆ ಹತ್ತು ನಿಮಿಷ ಮೆಲ್ಲಗೆ ನಡೆದರೆ ಕೆರೆ ಸಿಗುತ್ತಿತ್ತು ಸಾಲೆಯ ಕಂಪೌಂಡಿನ ಒಳಗಿನ ತಗ್ಗು ಪ್ರದೇಶಗಳನ್ನೆಲ್ಲ ಸಮತಟ್ಟಾಗಿ ಮಾಡಿಸಿದ್ದ ಎಡದ ಮಗ್ಗಲು ಸಾಲೆಯ ಮಕ್ಕಳಿಗೆ ವಿಶಾಲವಾದ ಆಟದ ಬಯಲು

ಇತ್ತು ಇನ್ನು ಕಂಪೌಂಡಿನ ಗೋಡೆಯ ಗುಂಟ ನಿರ್ದಿಷ್ಟವಾದ ಅಂತರಗಳ ಮಧ್ಯದಲ್ಲಿ ತೆಂಗಿನ, ಬಾಳೆಯ, ಅಡಿಕೆಯ ಸಸಿಗಳನ್ನು ನಟ್ಟಾಗಿತ್ತು ಅವುಗಳಿಗೆ ನೀರಿನ ಕೊರತೆ ಬೀಳುವ ಹಾಗಿರಲಿಲ್ಲ

ಆದರೆ ನೀರನ್ನು ಕೆರೆಯಿಂದ ಹೊತ್ತು ಒಯ್ದು ಹಾಕುವುದು ಎಷ್ಟೆಂದರೂ ಪ್ರಯಾಸದ ಕೆಲಸವಾಗಿತ್ತು ಕಾರಣ ಬೊಂಬಾಯಿಗೆ ಒಂದು ಎಣ್ಣೆಯ ಎಂಜಿನಿಗೆ ಆರ್ಡರನ್ನೂ ಕಳುಹಿಸಿದ್ದ ಅದು ಬರುವವರೆಗೆ ಸಸಿಗಳ ಜೀವವನ್ನು ಕೈಯಿಂದ ನೀರು ಹೊತ್ತು ಹಾಕಿ ಉಳಿಸಬೇಕಿತ್ತು

ಸಾಲೆಯ ಮುಖ್ಯ ಕಟ್ಟಡದಲ್ಲಿ ಹತ್ತಾರು ಸಣ್ಣ ಸಣ್ಣ ಕೋಣೆಗಳು ಇದ್ದವು ಅಟ್ಟದ ಮೇಲೆ ಯಾವ ಚಿಕ್ಕ ಪುಟ್ಟ ಅಂಥ ಕೊರಡಿಗಳು ಇರಲಿಲ್ಲ ಅದು ಒಂದು ಉಪನ್ಯಾಸದ ವರ್ಗದಂತೆ ಸಾಕಷ್ಟು ವಿಸ್ತಾರವಾಗಿತ್ತು ಅಲ್ಲಿ ವಿದ್ಯಾರ್ಥಿಗಳಿಗೆ ಮತ್ತು ಇತರ ಜನರಿಗೆ ಕೆಲವೊಂದು ದಿನಗಳಲ್ಲಿ, ಗಣ್ಯವ್ಯಕ್ತಿಗಳಾರಾದರೂ ಪರವೂರುಗಳಿಂದ ಬಂದವರು ವಿದ್ವಾಂಸರಾಗಿದ್ದರೆ, ಅಂಥವರ ಉಪನ್ಯಾಸವನ್ನು ಒದಗಿಸಿ ಕೊಡಬೇಕೆಂಬುದೇ ಶಂಕರನ ಉದ್ದೇಶ

ಅದೇ ಸ್ಥಳದಲ್ಲಿ ಸಾಲೆಯ ಪ್ರಾರಂಭೋತ್ಸವದ ದಿನ ಉಪನ್ಯಾಸಗಳನ್ನು ಏರ್ಪಡಿಸಲಾಗಿತ್ತು ಇತ್ತ ಕೆಳಗಡೆಯ ಕೋಣೆಗಳಲ್ಲಿ ವಿದ್ಯಾರ್ಥಿಗಳಿಗೆ ಪಾಠ ಹೇಳುವುದೆಂದು ನಿಶ್ಚಯಿಸಲಾಗಿತ್ತು ಹಿಂದುಕಡೆಯಲ್ಲಿ ಅಡುಗಮನೆ ಮತ್ತು ಬಚ್ಚಲುಮನೆಗಳಿಗೆ ಪ್ರತ್ಯೇಕವಾದ ಸಾಧಾರಣ ಮಟ್ಟಿನ ಕಟ್ಟಡವಿತ್ತು. ಸಾಲೆಯ ಮುಖ್ಯ ಕಟ್ಟಡದಲ್ಲೇ ಬಾಲಕರ ವಸತಿಯ ಕೋಣೆಗಳು ಇದ್ದವು ಅಟ್ಟದ ಮೇಲಿನ ಉಪನ್ಯಾಸ ವರ್ಗದ ಗೋಡೆಯನ್ನು ಭಾರತದ ಮಹಾಪುರುಷರ ಭಾವ ಚಿತ್ರಗಳನ್ನು ಶಂಕರನೇ ಬರೆದು, ಚೊಕ್ಕಟವಾಗಿ ಕಟ್ಟುಹಾಕಿಸಿ—ಅಲಂಕರಿಸಿದ್ದ ಒಟ್ಟಿನಲ್ಲಿ ಕಲಾನಿಕೇತನದ ವ್ಯವಸ್ಥೆಯನ್ನು ಸಾಕಷ್ಟು ಮುಂಜಾಗ್ರತೆಯಿಂದ ಶಂಕರ ಮಾಡಿದ್ದನೆಂದು ಹೇಳಬಹುದು ಸಾಲೆಯ ಮುಂದೆ ಒಂದು ಹೂವಿನ ತೋಟವನ್ನೂ ನಿರ್ಮಿಸಲಾಗಿತ್ತು ಮುಂದೆ ಬರಲಿರುವ ಪ್ರಾರಂಭೋತ್ಸವದ ಸಲುವಾಗಿ ಎಷ್ಟೋ ವ್ಯವಸ್ಥೆಗಳನ್ನು ಎಂದಿನಿಂದಲೋ ಮಾಡುತ್ತ ಬಂದಿದ್ದರು

ಅಲ್ಲಿಯ ವಿದ್ಯಾರ್ಥಿಗಳಿಗೆ ಅಡುಗೆ ಮಾಡುವ ಆಳನ್ನು ಹುಡುಕಲು ಹೋಗುವ ಕೆಲಸವೊಂದು ಶಂಕರನ ತಲೆಯಿಂದ ಸುಲಭದಿಂದ ಇಳಿಯಿತು.

ಯಾಕೆಂದರೆ ಅವನ ತಾಯಿಯೇ ಆ ಕೆಲಸವನ್ನು ಮಾಡುತ್ತೇನೆಂದು ಮಾತು ಕೊಟ್ಟಿದ್ದಳು ಅವಳೊಡನೆ ಬಿಡುವು ಇದ್ದಾಗ ಸಹಕರಿಸುತ್ತೇನೆಂದು ಸುಮತಿಯೂ ಒಪ್ಪಿಕೊಂಡಾಗಿತ್ತು ಸುಮತಿಯ ಒಪ್ಪಿಗೆಯು ದೊರೆತದ್ದು ಶಂಕರನಿಗೆ ಮುಂದೆ ಹೋಗಲು ಪ್ರಬಲವಾದ ಆಸ್ಪದವನ್ನು ದೊರಕಿಸಿಕೊಟ್ಟಿತೆಂದು ಹೇಳಬಹುದು ಹೀಗೆ ಶಂಕರ ಯೋಚಿಸಿದ ಕೆಲಸಗಳೆಲ್ಲವೂ ತಾವಾಗಿ ಕೈಗೂಡುತ್ತ ಬಂದವು

ಕೆಲವು ದಿವಸಗಳ ಹಿಂದೆ ಅವನಿಗ "ಪಿರ್ಕಿ" ಎಂದು ಹಾಸ್ಯ ಮಾಡಿದವರೂ ಎಷ್ಟೋ ಮೈಲುಗಳ ದೂರದಲ್ಲಿ ಕಾಣುವ 'ಕಲಾನಿಕೇತನ' ದ ಕಟ್ಟಡದ ಮಂಗಳೂರಿನ ಕೆಂಪುಹಂಚುಗಳನ್ನು ನೋಡಿ "ಆಗಬಹುದಯ್ಯ ಹುಡುಗ! ಬಿಲ್ಡಿಂಗ್ ಕಟ್ಟಿಸಿ ಬಿಟ್ಟನಲ್ಲ!" ಎಂದು ಉದ್ಗಾರ ತೆಗೆದು, ಅಲ್ಲಿಗ ಬಂದು, ನಾಲೆಯೊಳಗಿನ ಅಚ್ಚುಕಟ್ಟಾದ ವ್ಯವಸ್ಥೆಯನ್ನು ನೋಡಿ ಹೋಗಿದ್ದರು ಮತ್ತು ತಮ್ಮ ಸಂಬಂಧಿಕರ ಇಲ್ಲವೆ ತಮ್ಮ ಪೈಕಿಯವರ ಮಕ್ಕಳನ್ನು ಅಲ್ಲಿಗೆ ಕಳುಹಿಸುವ ಆಲೋಚನೆಯನ್ನೂ ಮಾಡಿದ್ದರು ಇನ್ನು ಕೆಲವರು ತಮಗೆ ಚಿಕ್ಕ ಮಕ್ಕಳು ಇಲ್ಲದ್ದಕ್ಕಾಗಿ ಮನಸ್ಸಿನಲ್ಲಿ ವ್ಯಥೆಪಟ್ಟದ್ದೂ ಇದೆ

ಇನ್ನು ಉಳಿದ ರಸ್ತೆಯ ಕೆಲಸವನ್ನೂ ಪ್ರಾರಂಭಿಸಿದ ಒಂದು ಮೈಲಿನ ರಸ್ತೆ ಆಗಬೇಡವೇ? ಶಂಕರನೂ ಹಾರೆ, ಪಿಕ್ಕಾಸು ಹಿಡಿದುಕೊಂಡು ದುಡಿಯತೊಡಗಿದ ಎಷ್ಟೋ ಜನ ಆಳುಗಳು ಅವನಿಗೆ ಹಾರೆ ಕೊಡಲು ಒಪ್ಪಲಿಲ್ಲ ಆದರೂ ಶಂಕರ ಆಸ್ಥೆಯಿಂದ ಅವರೊಡನೆ ಕಲಸಕ್ಕೆ ಇಳಿದ ಏಳೆಂಟು ದಿನಗಳಲ್ಲಿ ಸುಮಾರು ಮುಕ್ಕಾಲು ಪಾಲು ರಸ್ತೆಯ ಕೆಲಸ ಮುಗಿಯಿತು ಅಷ್ಟು ದಿನಗಳು ಕೂಡಾ ಹಿಡಿಯುತ್ತಿರಲಿಲ್ಲ ಆದರೆ ಕೆಲವು ಕಡೆಗಳಲ್ಲಿ ಕಲ್ಲಿನ ಚಿಕ್ಕ ಪುಟ್ಟ ಸಂಕ (Bridge) ಗಳನ್ನು ಕಟ್ಟಬೇಕಾಗಿ ಬಂತು ಅಂತೂ ರಸ್ತೆಯ ಕಾಮಗಾರಿಯು ಶಂಕರ ಎಣಿಸಿದ್ದಕ್ಕಿಂತ ಬೇಗನೆ ಸಾಗುತ್ತಿತ್ತು ಅದಕ್ಕೆಲ್ಲ ಅಲ್ಲಿಯ ಜನರ ಸಹಾನುಭೂತಿಯೇ ಕಾರಣವೆಂದು ಶಂಕರನೇ ಹೇಳುತ್ತಿದ್ದ ಮುಂದೆ ಏಳೆಂಟು ದಿನಗಳಲ್ಲೇ ಮಾರ್ಗ ತಯಾರಾಯಿತು

ಅಂದು ಮೂಡಮನೆಯ ಸುತ್ತುವ ಆತ್ತಲಿನ ಸ್ಥಳವೆಲ್ಲ ನೂರಾರು ಜನರಿಂದ ತುಂಬಿತ್ತು ಊರಿನ ಪ್ರತಿಷ್ಠಿತ ವ್ಯಕ್ತಿಗಳೆಲ್ಲ ಕಲಾನಿಕೇತನದ ಮುಂದೆ

ನೆರವೇರಿದ್ದರು. ಹಳ್ಳಿಯ ಬಡಬಗ್ಗರಿಗೆಲ್ಲ ಅಲ್ಲಿಯ ಸನ್ನಿವೇಶ ಜಾತ್ರೆಯಂತೆ ಕುತೂಹಲ ಕೆರಳಿಸಿತ್ತು ಹೆಂಗಸರು, ಮುದುಕರು, ಮಕ್ಕಳೆನ್ನದೆ ಎಲ್ಲರೂ ಅಲ್ಲಿ ಕೂಡಿದ್ದರು ಕಾಂತಪ್ಪನಿಗೆ ಪುರಸೊತ್ತೇ ಇರಲಿಲ್ಲ ಶಂಕರನ ಕೈಕೆಳಗೆ ಕಾಂತಪ್ಪ ಓಡಾಡುತ್ತಿದ್ದ ಹೊನ್ನಪ್ಪಯ್ಯನವರೂ ಉತ್ಸಾಹದಿಂದ ಅತ್ತಿತ್ತ ಅಲೆದಾಡುತ್ತಿದ್ದರು ಒಟ್ಟಿನಲ್ಲಿ ಅಲ್ಲಿ ತುಂಬಿದ್ದ ಜನರನ್ನು ಗುರುತಿಸು ವುದು ಕಷ್ಟ

ಆ ಸಭೆಗೆ ಎಡಹಿತ್ತಲು ಅಣ್ಣಪ್ಪಯ್ಯನವರು ಬಂದಿರಲಿಲ್ಲ ಅವರು ಊರಲ್ಲಿಯೂ ಇರಲಿಲ್ಲ ಕಾರ್ಕಳಕ್ಕೆ ಹೋಗಿದ್ದಾರೆಂಬ ಸುದ್ದಿಯೂ ಅಲ್ಲಿಗೆ ಬಂದಿತ್ತು 'ಅರ್ಜಂಟ' ಕೆಲಸದ ಮೂಲಕ ಅಲ್ಲಿಗೆ ಹೋಗಿದ್ದರಂತೆ ಅಂದು ಆ ಊರಿನ ಶ್ರೀಮಂತರಲ್ಲೇ ಅಗ್ರಗಣ್ಯರಾದ ಮುಕ್ತೇಶ್ವರ ಮಂಜ ಪ್ಪಯ್ಯನವರ ನಂಬ್ರದಲ್ಲಿ ಸಾಕ್ಷಿ ಹೇಳಲು ಅಣ್ಣಪ್ಪಯ್ಯ ಕಾರ್ಕಳಕ್ಕೆ ಹೋಗಿದ್ದಾರೆಂದು ಗೊತ್ತಾಯಿತು ಆದರೆ ಒಳಗಿನ ಗುಟ್ಟು ಬೇರೆಯೇ ತನ್ನ ಹಳ್ಳಿಗೆ ಎಲ್ಲೆಲ್ಲಿಯವರು ಬರುವಾಗ ತಾನು ಊರು ಬಿಟ್ಟು ಹೋಗುವುದು ಅಸಮಂಜಸವೆಂದು ಅಣ್ಣಪ್ಪಯ್ಯ ತಿಳಿದಿದ್ದರು ಅಂದಿನ ಸಾಕ್ಷಿಗೂ ಅವರು ಹೋಗುತ್ತಿದ್ದಿಲ್ಲ

ಅದಕ್ಕಿಲ್ಲ ಒಂದು ಗುಪ್ತ ಕಾರಣವಿದೆ ಅಣ್ಣಪ್ಪಯ್ಯ ಕಾರ್ಕಳಕ್ಕೆ ಹೋಗದಿದ್ದರೆ 'ಕಲಾನಿಕೇತನ'ಕ್ಕೆ ಹೋಗಬೇಕಾಗಿತ್ತು. ಕಾರ್ಕಳದ ಕಾರ್ಯಕ್ರಮ ರದ್ದು ಮಾಡಬೇಕೆಂದೂ ಬಯಸಿದ್ದರು ಆದರೆ ತನ್ನ ಒಕ್ಕ ಲಾದ ಕಾಂತಪ್ಪ ಮೂನ್ನೂರು ರೂಪಾಯಿಗಳನ್ನು ಮುಕ್ತಹಸ್ತದಿಂದ 'ಕಲಾ ನಿಕೇತನ'ಕ್ಕೆ ದಾನಮಾಡುತ್ತೇನೆಂಬ ಸುದ್ದಿ ಅವನ ಬಾಯಿಯಿಂದಲೇ ಅಣ್ಣಪ್ಪಯ್ಯ ಕೇಳಿದ್ದರು ಇನ್ನು ಹಲವಾರು ಜನರು ಅವನಂತೆ ಸಭೆಯಲ್ಲಿ ಧರ್ಮ ಕೊಡುತ್ತಾರೆಂಬ ಮಾತು ಅವರಿಗೆ ಗೊತ್ತೇ ಇತ್ತು ಅವರೆಲ್ಲ ಕೊಟ್ಟರೆ ತಾನು ಕೊಡಬೇಕೆಂಬ ಕಾಯ್ದೆ ಇಲ್ಲ ಆದರಿಂದ ತನ್ನ ಮರ್ಯಾದೆ ಹೋಗದು. ಈ ಕಾಂತಪ್ಪ, ತನ್ನ ಒಕ್ಕಲು, ಮುನ್ನೂರು ರೂಪಾಯಿ ಕೊಡು ವಾಗ ಅವನ ಧನಿಯಾದ ತಾನು ಅಲ್ಲಿ ಬರಿಗೈಯಿಂದ ಕೂಡುವುದು ತನ್ನ ಘನತೆಗೆ ಎಷ್ಟೆಂದರೂ 'ಕುಮಾರು' ಎಂದು ಬಗದರು ಅದಕ್ಕಾಗಿ ಅಂದಿನ ಸಭೆಗೇ ಕಾಲಿಡದಿದ್ದರೆ ಯಾವ ಪೇಚಾಟವೂ ಬರುವುದಿಲ್ಲವೆಂದು ನಂಬಿ

ಕಾರ್ಕಳಕ್ಕೆ ಕಂಬಿ ಕಿತ್ತರು

ಆ ಊರಿನ ಮುಕ್ತೇಶ್ವರ ಮಂಜಪ್ಪನವರೂ ಇವರು ಕೂಡಿಕೊಂಡು 'ಕಲಾನಿಕೇತನ'ದ ಬಗ್ಗೆ ಏನೇನೆಲ್ಲ ಮಾತಾಡಿಕೊಂಡರೋ ದೇವರೇ ಬಲ್ಲ ಮುಕ್ತೇಶ್ವರರೂ ಮನಸ್ಸಿನಲ್ಲಿ ಸಾಕಷ್ಟು ನೊಂದುಕೊಂಡಿದ್ದರು. ಶಂಕರನ ಹೆಸರು ಊರಲ್ಲಿ ಎಲ್ಲರ ಬಾಯಿಯಿಂದ ಕೇಳಬರುತ್ತಿದ್ದದ್ದು ಅವರ ಕಿವಿಗೂ ಬಿದ್ದಿತ್ತು. ಹೊಟ್ಟೆಯಲ್ಲೇ ಅದಕ್ಕಾಗಿ ಉರಿಯುತ್ತಿದ್ದರು ಮತ್ಸರವೂ ಮೊಳೆತಿತ್ತು ಅದನ್ನು ಹೊನ್ನಪ್ಪಯ್ಯ ಚಿಗುರಿಸಿದರು ಇಲ್ಲಿ ವಿಜೃಂಭಣೆಯಿಂದ ಶಾಲೆಯ ಪ್ರಾರಂಭೋತ್ಸವ ನಡೆಯುತ್ತಿದ್ದರೆ ಅಲ್ಲಿ ಅಣ್ಣಪ್ಪಯ್ಯ ಮತ್ತು ಮುಕ್ತೇಶ್ವರರು ಕೂಡಿಕೊಂಡು ಅದರ ಸ್ಮಶಾನ ಯಾತ್ರೆಯ ಸೊಗಸನ್ನು ಹೇಗೆ ನೋಡಬೇಕೆಂಬ ವಿಚಾರಗಳನ್ನು ತರ್ಕಿಸುತ್ತಿದ್ದರು

ಸಮಯಕ್ಕೆ ಸರಿಯಾಗಿ ಡಾ। ಕೃಷ್ಣರಾಯರು ಅತಿಥಿಗಳಾಗಿ ಆಗಮಿಸಿದ್ದರು ಮೊಟ್ಟ ಮೊದಲು ಕ್ರಮ ಪ್ರಕಾರ ಶಂಕರ ಅತಿಥಿಗಳ ಪರಿಚಯ ಮಾಡಿಕೊಟ್ಟ ಆ ಮೇಲೆ ಉಳಿದ ಕಾರ್ಯಕ್ರಮಗಳೂ ನಡೆದವು ಶಾಲೆಯನ್ನು ತೆರೆಯುವಾಗ "ಈ ಕಲಾನಿಕೇತನ ಉತ್ತರೋತ್ತರವಾಗಿ ಅಭಿವೃದ್ಧಿ ಹೊಂದಲಿ" ಎಂದು ಮುಂತಾಗಿ ಹರಸುತ್ತ ಅತಿಥಿಗಳು ಗಂಭೀರವಾಗಿ ನುಡಿದರು ತರುವಾಯ ಶಂಕರ ಆ ಸಾಲೆಯ ಉದ್ದೇಶ, ಅದು ಸಾಧಿಸುವ ಪ್ರಗತಿ ಮೊದಲಾದ ವಿಷಯಗಳ ಬಗ್ಗೆ ಆದರ್ಶಯುಕ್ತವಾದ ಭಾಷಣವಿತ್ತ

ತದನಂತರ ಅಧ್ಯಕ್ಷಸ್ಥಾನವನ್ನು ಸ್ವೀಕರಿಸಿದ ಮುಖ್ಯ ಅತಿಥಿಗಳು ನಿರರ್ಗಳವಾಗಿ ಮಾತನಾಡಲು ಆರಂಭಿಸಿದರು ಅಲ್ಲಿಯ ಜನರೆಲ್ಲ ನಕಾಶದ ಗೊಂಬೆಗಳಂತೆ ಸ್ಥಿರವಾಗಿ ಕೂತಿದ್ದರು ಆವೇಶಪೂರ್ಣವಾದ ಭಾಷಣವನ್ನು ಕೇಳುವಾಗ ಸಭಿಕರು ಆಗಾಗ ತಲೆದೂಗುತ್ತಿದ್ದರು "ಬಡವರ ಸೇವೆಯೇ ಭಗವಂತನ ಸೇವೆ ವಿದ್ಯೆ ಬುದ್ಧಿಗಳ ಪ್ರಚಾರಕ್ಕಾಗಿ ನಾವಿಂದು ಹೆಣಗಾಡಬೇಕು ಇಂಥ ಒಂದು ಸಾಲೆಯು ಸಾವಿರ ದೇವಾಲಯುಗಳಿಗಿಂತ ಮಿಗಿಲಾದದ್ದು ದೇವರ ಗುಡಿ ಕಟ್ಟಿ ಹಣ ಹಾಳುಮಾಡಿ ಅಧರ್ಮ ಪ್ರಚಾರ ಮಾಡುವುದಕ್ಕಿಂತ ಇಂಥ ಪುಣ್ಯಕಾರ್ಯಕ್ಕೆ ಮುಕ್ತಹಸ್ತದಿಂದ ಸಹಾಯ ಮಾಡಿದರೆ ಪುಣ್ಯ ಬಂದೀತು" ಎಂದು ಮುಂತಾಗಿ ಡಾಕ್ಟರರು ಸರಳವಾದ ವಾಣಿಯಲ್ಲಿ ಧೈರ್ಯದಿಂದ ಭಾಷಣವಿತ್ತರು

ಸಭೆಯ ಮಧ್ಯದಲ್ಲಿ ನಿಂತುಕೊಂಡು ಭಾಷಣ ಮಾಡುತ್ತ ಮಾಡುತ್ತ ಅಧ್ಯಕ್ಷರ ಕೈ ಅವರ ಜೇಬಿನೊಳಗೆ ಹೋಯಿತು ಪ್ಯಾಕೇಟಿನಿಂದ ಇನ್ನೂರ ಒಂಬ ರೂಪಾಯಿಗಳನ್ನು ಕೈಯಲ್ಲಿ ಹಿಡಿದುಕೊಂಡು "ನನ್ನ ಶಕ್ತ್ಯಾನುಸಾರ ಈ ಕಿಂಚಿತ್ ಕಾಣಿಕೆಯನ್ನು 'ಕಲಾನಿಕೇತನ'ಕ್ಕೆ ಅರ್ಪಿಸಿರುತ್ತೇನ" ಎಂದು ಹೇಳಿ ರೂಪಾಯಿಗಳನ್ನು ಅಲ್ಲಿಯೇ ಮುಂದಿರುವ ಮೇಜಿನ ಮೇಲೆ ಇಟ್ಟರು ಸಭಿಕರ ಕಣ್ಣುಗಳಲ್ಲಿ ಆನಂದ ಜಲ ಒಸರಿತು

ಎಷ್ಟೋ ಸಭಿಕರ ಮನಸ್ಸುಗಳು ಪರಿವರ್ತನಗೊಂಡವು ಕೆಲವರಂತೂ ಆಗಲೇ ಹಣವನ್ನು ಕೈಯಲ್ಲಿ ಹಿಡಿದುಕೊಂಡು ಏಳಲು ಹವಣಿಸಿದರು ಮತ್ತೆ ಹಲವರು ಹಣ ಅಲ್ಲಿಗೆ ತಾರದಿದ್ದವರು "ನಾನಿಷ್ಟು ಕೊಡುತ್ತೇನೆ" ಎಂದು ವಾಗ್ದಾನ ಮಾಡುವುದಾಗಿ ನಿಶ್ಚಯಿಸಿಯಾಗಿತ್ತು ಅಧ್ಯಕ್ಷರು ಸ್ಫೂರ್ತಿಯಿಂದ ಮಾತಾಡುತ್ತ "ನನ್ನಿಂದ ಏನೆಲ್ಲ ಈ ಪುಣ್ಯಕಾರ್ಯಕ್ಕೆ ಸಹಾಯ ಮಾಡಲು ಸಾಧ್ಯವಿದೆಯೋ ಅದನ್ನೆಲ್ಲ ಮಾಡುತ್ತೇನೆ ನಾನು ಪ್ರತಿ ವಾರಕ್ಕೊಮ್ಮೆ ಇಲ್ಲಿಗ ಬಂದು ಇಲ್ಲಿಯ ವಿದ್ಯಾರ್ಥಿಗಳ ಆರೋಗ್ಯವನ್ನು ನಿರೀಕ್ಷಿಸಿಕೊಂಡು ಹೋಗುತ್ತೇನೆ" ಎಂದು ಹೇಳುವಾಗ ಸಭೆಯಲ್ಲಿ ಪ್ರಚಂಡ ವಾದ ಕರತಾಡನವಾಯಿತು

ಒಂದುವರೆ ಗಂಟೆಯ ತನಕ ಅಧ್ಯಕ್ಷರು ಮಳೆ ಸುರಿದಂತೆ ಮಾತಾಡಿದರು ಅವರು ಕೊನೆಯಲ್ಲಿ "ದಯವಿಟ್ಟು ಈ ಪುಣ್ಯಕಲಸಕ್ಕೆ ಯಾರೂ ಕಲ್ಲು ಹಾಕಬೇಡಿ, ಕಲ್ಲು ಹಾಕಬೇಡಿ" ಎಂದು ಹೃದಯಾಂತರಾಳದಿಂದ ಹೊರ ಹೊಮ್ಮಿದ ಮಾತುಗಳನ್ನು ಕರುಣಪೂರ್ವಕ ಸಭಿಕರ ಮುಂದಿಟ್ಟರು

ಅಧ್ಯಕ್ಷರ ಭಾಷಣ ಮುಗಿದೊಡನೆ ಹಕ್ಕಿಯಂತೆ ಎಲ್ಲಿಂದಲೋ ಕಾಂತಪ್ಪ ಹಾರಿ ಬಂದು ವೇದಿಕೆಯ ಮೇಲೆ ನಿಂತುಕೊಂಡ ಅವನ ಕೈಯಲ್ಲಿ ಎಷ್ಟೋ ರೂಪಾಯಿಗಳ ನೋಟುಗಳು ತುಂಬಿದ್ದವು ಆವೇಶಭರಿತನಾಗಿ ಅತ್ಯಂತ ಸ್ಫೂರ್ತಿಯಿಂದ ಸಭೆಯೆದುರು ನಿಂತುಕೊಂಡು, ನೋಟುಗಳನ್ನು ಹಿಡಿದುಕೊಂಡಿರುವ ಕೈಯನ್ನು ಮುಂದೆ ಎತ್ತಿಹಿಡಿದು, ಶುದ್ಧವಾದ ಕನ್ನಡ ಮಾತಾಡಲಿಕ್ಕೆ ಬಾರದಿದ್ದರೂ, ತುಳು-ಕನ್ನಡಗಳ ಮಿಶ್ರಣಮಾಡಿ, "ಎಂಕ ಕರ್ನಾಟಕ ಸವ-ಚೆನ್ನಾಗಿ ಬರ್ಪುಜಿ ಆಂಡಲಾ ಯಾನು ಹೇಳುವುದು [illegible]ದಂಡಾ, ಯಾನ ಬಡವೆ. ನಾನೇ ಬಡವ ಆದರೂ ನನ್ಗೆ ಸಭೆಟ

ನಿಂತದ ಲೆಕ್ಕಾಚಾರ ಕೊಡಲಿಕ್ಕೆ ಗೊತ್ತಜ್ಜಿ ಬರ್ರುಜಿ ನಿಕುಲು ಎಲ್ಲ ಕ್ಷಮೆಕೋರೋಡು ಯಾನ ಈ ಮುನ್ನೂರು ರೂಪಾಯಿಗಳನ್ನು ಎನ್ನ ಕಿಂಚಿತ್ ಧರ್ಮ ಎಂದು ಕೋರುಪೆ ಈ ಕಲಾ ಸಾಲೇಗ ಈ ರೂಪಾಯಿಲು ಎನ್ನ ಅಲ್ಲ ಯಾನ ಕಷ್ಟದಿಂದ ದುಡೀತಿನ ಅಲ್ಲ ದೇವರ ದಯೋಟು ಎಂಕ ತಿಕ್ಕಿನವು ಯಾವ ಸಂಪಾದನೆ ಮಲ್ತಿನಾವು ಒಟ್ಟಾರೆ ಎನ್ನ ಈ ಎಲ್ಲೆ ಕಾಣಿಕೆಯನ್ನು ಚಂಕರ ಭಟ್ಟರು ತೆಗೆದುಕೊಳ್ಳಲಿ ನಿಕುಲು ಮಾತಾ ನಕ್ಕರೂ ಎಂಕ ನಾಚಿಕೆ ಇಲ್ಲ ಈತ ಪಾತೇರಲಿಕ್ಕೆ ಯಾನಿಲ್ಲಿ ಬಯ್ದಿನಿ" ಎಂದು ಹೇಳಿ ಮುನ್ನೂರು ರೂಪಾಯಿಗಳನ್ನು ಅಲ್ಲಿಯ ಮೇಜಿನ ಮೇಲೆ ಇಟ್ಟ

ಜನರಲ್ಲ ಮೊದಮೊದಲು ನಕ್ಕರೂ, ಕೊನೆಗೆ ಸುಮ್ಮನೆ ಕೂತರು—ಆ ಮೇಲೆ ಅವನು ಮಾಡಿದ ಮಹಾ ದಾನಕ್ಕಾಗಿ ಎಲ್ಲರೂ ಚಪ್ಪಾಳೆ ಬಡೆದರು

ಡಾಕ್ಟರರು ಅವನ ಕುತ್ತಿಗೆಗೆ ಒಂದು ಮಾಲೆಯನ್ನು ಹಾಕಿದರು "ಎಂಕ ಬೇಡ ಮಾಲೆ" ಎಂದು ಕಾಂತಪ್ಪ ಅಲ್ಲಿಂದ ಕೆಳಗೆ ಇಳಿದು ಬಂದ ಜನರಲ್ಲ ಅವನ ಬೆನ್ನು ತಟ್ಟಿದರು

ಕಾಂತಪ್ಪನ ಭಾಷಣ ಮುಗಿದ ಮೇಲೆ ಎಷ್ಟೋ ಜನರು ಬಂದು, ಸ್ವಲ್ಪ ಹೊತ್ತು ನಾಲ್ಕು ಮಾತಾಡಿ, ತಮ್ಮ ಕೈಯಿಂದ ಆದಷ್ಟು ಹಣ ಸಹಾಯ ಮಾಡಿದರು ಕೆಲವರು, ತಾವಿಷ್ಟು ಹಣ ಕೊಡುತ್ತೇವೆಂದು ವಾಗ್ದಾನವನ್ನೂ ಮಾಡಿಯಾಯಿತು

ಒಂದೆರಡು ಸಾವಿರ ರೂಪಾಯಿಗಳ ನಿಧಿ ಅಂದು ಒಟ್ಟು ಕೂಡಿತ್ತೆಂದು ಹೇಳಬಹುದು ಶಂಕರ ಆನಂದದಿಂದ ತಿರುಗುತ್ತಿದ್ದ ಅವನ ಮನಸ್ಸು ಅಂದು ತೃಪ್ತಿಯ ಪಕ್ವಾನ್ನ ಉಂಡಿತ್ತು ಅವನ ದೇಹ ಅಂದು ಗಾಳಿಯಂತೆ ಅತ್ತಿತ್ತ ಸುಳಿಯುತ್ತಿತ್ತು ಹಸಿವು, ನೀರಡಿಕೆ ಆಯಾಸಗಳಾವುವೂ ಅವನಿಗೆ ಅನಿಸಲಿಲ್ಲ ಅಷ್ಟೊಂದು ಸಂತೋಷ ಅವನಿಗೆ ತನ್ನ ಮುಂದಿನ ಮಾರ್ಗ ಅವು ಇದಕ್ಕೂ ಆನಂದದಾಯಕವಾಗಿದೆ ಎಂದು ಆತ ನಂಬಿದ ಇನ್ನೂ ಹಲವಾರು ತರಹದ ಕನಸಿನ ಕೋಣೆಗಳನ್ನು ಕಟ್ಟಿಕೊಂಡ ಅಂದಿನ ಸಭೆಯು ಸುವ್ಯವಸ್ಥಿತವಾದ ರೀತಿಯಿಂದ ಜರಗಲ್ಪಟ್ಟು ಮುಕ್ತಾಯವಾಯಿತು.

ರಾತ್ರಿ ಮಾತ್ರ ವಿಶೇಷ ಕಾರ್ಯಕ್ರಮಗಳ ಏರ್ಪಾಟು ಆಗಿತ್ತು ತಾಳಮದ್ದಲೆಯೂ ಆಗುವುದಿತ್ತು ಅದಕ್ಕೆ ಎಲ್ಲರಿಗೂ ಸಭೆಯಲ್ಲೇ ಆಮಂತ್ರಣ ಮುಟ್ಟಿಸಿದ ದೂರ ದೂರದಿಂದ ನಾಲ್ಕೆಂಟು ಜನ ಶ್ರೀಮಂತರು ಕಾರಿನಲ್ಲಿ ಬಂದಿದ್ದರು ಅವರಿಗೆ ಊಟದ ವ್ಯವಸ್ಥೆಯನ್ನು ಹೊನ್ನಪ್ಪಯ್ಯ ನೋಡಿ ಕೊಂಡರು ಶಂಕರನಿಗೆ ವಿಶೇಷವಾಗಿ ಯಾವ ಕೆಲಸದ ಭಾರ ಬೀಳದಂತೆ ಹಲವರ ಪ್ರಯತ್ನ ನಡೆದಿತ್ತು.

ಅಂದು ಕೆಲವರು ಅಲ್ಲಿಯ ತಾವಿಗೆ 'ಶಂಕರಪುರ' ಎಂಬ ಹೊಸ ಹೆಸ ರನ್ನು ಇಡಬೇಕೆಂದು ಠರಾವು ಮಾಡಿದರು ಎಷ್ಟೋ ಜನರು ಅದಕ್ಕೆ ಒಪ್ಪಿಗೆ ಕೊಟ್ಟರು ಶಂಕರನ ಒಪ್ಪಿಗೆ ಅದಕ್ಕೆ ಇತ್ತೋ ಇಲ್ಲವೋ ಗೊತ್ತಿಲ್ಲ ಆದರೆ ಜನರಿಗೆ ಅವನ ಒಪ್ಪಿಗೆ ಬೇಕೆಂದು ಅನಿಸಲಿಲ್ಲ ಒಬ್ಬಿಬ್ಬರು ' ಶಂಕರಪುರ ' ಎಂದರು ಅದು ಎಲ್ಲರ ಕಿವಿಗೂ ತಲಪಿತು ರಾತ್ರಿಯ ಕಾರ್ಯಕ್ರಮಗಳಿಗೆ ಬರುವಾಗ ಜನರು "ನಾವು ಶಂಕರಪುರದವರು" ಎಂದು ಉಬ್ಬಿಕೊಂಡು ಆಡುತ್ತ ಬಂದರು

ರಾತ್ರಿಯಲ್ಲಿ ವಿವಿಧ ವಿನೋದಾವಳಿಗಳ ಕಾರ್ಯಕ್ರಮವಿತ್ತು. "ಮುಕ್ತ ಹಸ್ತ" ಎಂಬ ನಾಟಕವನ್ನು ಶಂಕರ ಆಡಿ ತೋರಿಸುವವನಿದ್ದ ಅದನ್ನು ಅವನೇ ಬರೆದಿದ್ದಾನೆಂಬುದನ್ನು ತಿಳಿದ ಆ ಊರ ಜನರಿಗೆ ತುಂಬ ಹೆಮ್ಮೆ ಬಂತು ಡಾ|| ಕೃಷ್ಣರಾಯರೂ ಮತ್ತು ಅನೇಕ ಜನ ಅಭಿಮಾನಿಗಳೂ ಅಂದಿನ ರಾತ್ರಿ ಕೂಡಾ ಉಪಸ್ಥಿತರಿದ್ದರು ಸರಿಯಾಗಿ ರಾತ್ರಿಯ ಗಂಟೆ ಒಂಬತ್ತು ಹೊಡೆದೊಡನೆ 'ಕಲಾನಿಕೇತನ' ದ ಅಟ್ಟದ ಮೇಲಿನ ವಿಶಾಲವಾದ ಹಾಲಿನಲ್ಲಿ ನಾಟಕ ಪ್ರಾರಂಭವಾಯಿತು ಶಂಕರನೇ ಅದರಲ್ಲಿ ನಾಯಕ ಪಾತ್ರ ವಹಿಸಿದ್ದ

ಮುಕ್ತಹಸ್ತದಿಂದ ತನ್ನ ಸಂಪತ್ತನ್ನೆಲ್ಲ ಧಾರೆ ಎರೆದು ಒಂದು ಧರ್ಮಾರ್ಥ ಚಿಕಿತ್ಸಾಲಯವನ್ನು ಕಟ್ಟಿಸಿದ ಒಬ್ಬ ಕೋಟ್ಯಾಧೀಶನ ಜೀವನವನ್ನು ಇಹಪರ ಗಳೆರಡರಲ್ಲೂ ಚಿತ್ರಿಸುವ ನಾಟಕವೇ "ಮುಕ್ತಹಸ್ತ" ಇಹಲೋಕದಲ್ಲಿ ಅವ ನನ್ನು ಜನರೆಲ್ಲ "ಹಣವಿದ್ದರೆ ಏನಂತೆ ? ಅವನಿಗೆ ಮಕ್ಕಳಿಲ್ಲ ! ಮಕ್ಕಳಿಲ್ಲ ದವನಿಗೆ ಸ್ವರ್ಗದ ಬಾಗಿಲು ಮುಚ್ಚಿರುತ್ತದೆ" ಎಂದು ನಿಂದಿಸುತ್ತಾರೆ ಕೊನೆಗೆ ಆತ ಈ ನಿಂದನೀಯ ಜೀವನವನ್ನು ತೊರೆಯುತ್ತಾನೆ. ಸ್ವರ್ಗಕ್ಕೆ ಹೋ

ದಾಗ ಅಲ್ಲಿಯ ಬಾಗಿಲುಗಳೆಲ್ಲ ತೆರೆದು ಇರುವುದಷ್ಟೇ ಅಲ್ಲ, ದ್ವಾರಪಾಲಕರೆಲ್ಲ ಅವನ ಕಾಲುಗಳಿಗೆ ತಮ್ಮ ತಲೆ ತಾಗಿಸುತ್ತಾರೆ ಹೆಬ್ಬಾಗಿಲಿನ ಹತ್ತಿರ ಹೋಗುವಾಗ ಅವನನ್ನು ಸ್ವರ್ಗದ ಅಧಿಪತಿಯಾದ ಇಂದ್ರನು ಕೂಡಾ ಕೈ ಹಿಡಿದುಕೊಂಡು "ಎಲ್ಲ ಸೌಖ್ಯವೋ ಹೇಗೆ? ನಿಮ್ಮ ದಾನ ಧರ್ಮಗಳ ಮುಕ್ತಹಸ್ತದ ಕೀರ್ತಿ ಇಲ್ಲಿಗೂ ಹಬ್ಬಿದೆ" ಎಂದು ಹೊಗಳುತ್ತ ಕರೆದೊಯ್ಯು ವಾಗ ನಾಟಕ ಕೊನೆಗೊಳ್ಳುತ್ತದೆ

ಮೂರು ಗಂಟೆಗಳ ವರೆಗೆ ಜನರೆಲ್ಲ ಅತ್ತಿತ್ತ ಕದಲದೆ ನಾಟಕವನ್ನು ಮೈ ತುಂಬ ಕಣ್ಣುಳ್ಳವರಂತೆ ನೋಡುತ್ತಿದ್ದರು ಶಂಕರನ ಅಭಿನಯ, ಮಾತು ಗಾರಿಕೆ, ಭಾವಪರವಶತೆಗಳನ್ನು ಕಾಣುತ್ತಿದ್ದ ಸಭಿಕರು ಮುಗ್ಧರಾಗಿದ್ದರು ನಾಟಕ ಮುಗಿದೊಡನೆ ಹದಿನೈದು ನಿಮಿಷಗಳ ವಿರಾಮ ದೊರೆಯಿತು

ಮುಂದಿನ ಕಾರ್ಯಕ್ರಮ ಶಂಕರನದೊಬ್ಬನದ್ದೇ ವೀಣೆ ವೆಂಕಟ ರಾಯರು 'ಧೈ ತಕ ಧೈ' ಹಾಕುತ್ತಿದ್ದರು ಶಂಕರ ನೃತ್ಯ ನಡೆಸಿದ್ದ ಕೃಷ್ಣಲೀಲೆಯ ಕಥೆಯನ್ನು ಅದಾವ ಭಂಗಿಯಲ್ಲಿ ನರ್ತಿಸಿ ತೋರಿಸಿದನೆಂದು ಹೇಳಲಿಕ್ಕೆ ಅಸದಳ ಒಂದು ಗಂಟೆಯ ವರೆಗೆ ಈ ನೃತ್ಯವಾಯಿತು ಆ ಮೇಲೆ ಸ್ವಲ್ಪ ಹೊತ್ತು ಶಂಕರನೇ ವಿಶ್ರಾಂತಿ ಪಡೆದುಕೊಂಡ ಸಭಿಕರೆಲ್ಲ ಶಂಕರನ ಕಾರ್ಯಕ್ರಮವನ್ನೇ ಅಪೇಕ್ಷಿಸುತ್ತಿದ್ದರು

ಕೆಲವು ದೊಡ್ಡ ಮನುಷ್ಯರು ಇಂಗ್ಲೀಷಿನಲ್ಲಿ "Once more" ಎಂದರು ಆದರೆ ರಂಗಭೂಮಿಗೆ ತೆರೆ ಇಳಿಯಿತು ಶಂಕರ ಒಳಗೆ ಹೋಗಿ ವಿಶ್ರಾಂತಿ ತೆಗೆದುಕೊಳ್ಳುತ್ತ ಕುಳಿತಿದ್ದನಷ್ಟೆ ಅಲ್ಲಿಗೂ ಆ ವ್ಯಕ್ತಿಗಳು ಬಂದು "Once more" ಎಂದರು ಶಂಕರ ದಣಿದಿದ್ದ "Please no more" ಎಂದು ವಿನಂತಿಸಿದ "All Right" ಎಂದು ಅವರು ಸಭೆಗೆ ಹೊರಟರು

ಅಲ್ಲಿಂದ ಅವರು ಸಾಲೆಯ ಆವರಣದಲ್ಲಿ ನಡೆದಿರುವ "ತಾಳ ಮದ್ದಲೆ" ನೋಡಲು ಹೋದರು ಎಷ್ಟೋ ಹೊತ್ತು ಅದನ್ನು ನೋಡುತ್ತ ಕಳೆದರು ಆಗ ಶಂಕರನ ಇನ್ನೊಂದು ಕಾರ್ಯಕ್ರಮ ಪ್ರಾರಂಭವಾಗಲಿದೆ ಎಂಬ ಸುದ್ದಿ ಅವರಿಗೆ ತಲಪಿತು ಕೂಡಲೇ ಅಟ್ಟ ಏರಿದರು

ರಾತ್ರಿ ಕಳೆದು ಬೆಳಕು ಹರಿಯುವ ಸಮಯವದು ದೃಷ್ಟಿ ದಿಗಂತದ ದುಂಡಾದ ಅಂಚು ಬೆಳ್ಳಿಯ ಬಣ್ಣ ತಾಳಿತ್ತು ಎಲ್ಲೆಲ್ಲೂ ಹಕ್ಕಿಗಳು ಚಿಲಿ

ಪಿಲಿ ನಡೆಸಿದ್ದವು ತಂಪಾದ ಅನಿಲದ ಶೀಟದಲ್ಲಿ ಗಿಡಗಂಟಿ ಕುಣಿದಾಡುತ್ತಿದ್ದವು ನಿಮಿಷ ನಿಮಿಷಕ್ಕೂ ಪೃಥ್ವಿಯಲ್ಲಿ ವಿಚಿತ್ರವಾದ ಬದಲಾವಣೆ ನಡೆದಿತ್ತು ಧರಾಂಗನೆಯು ಕರಿಯ ಹೊದಿಕೆಯನ್ನು ಸರಿಸುವಂತೆ ನಸುಗತ್ತಲು ಕರಗುತ್ತ ಜಾರುತ್ತಿತ್ತು ಉದಯ ಕಾಲದ ನವ್ಯ ಚೈತನ್ಯ ಚರಾಚರಗಳೆಲ್ಲವನ್ನು ಎಚ್ಚರಿಸುತ್ತಿತ್ತು

ಶಂಕರ ಉದಯರಾಗ ಹಾಡುತ್ತಿದ್ದ ವೀಣೆ ವೆಂಕಟರಾಯರು ತಂಬೂರಿ ಹಿಡಿದಿದ್ದರು ಜನರೆಲ್ಲ ಮೈ ಮರೆತು ಸ್ವರ್ಗವೇರುವ ಸ್ವರರೇಣುವಿನೊಡನೆ ಆನಂದದ ಆಕಾಶದಲ್ಲಿ ಅಲೆಯುತ್ತಿದ್ದರು ಶಂಕರನ ಅಮರವಾದ ಆತ್ಮ ಸ್ವರ್ಗಾರೋಹಣ ಮಾಡುತ್ತಿತ್ತು—ಸ್ವರರೇಣುವಿನ ಹಿಂದೆ ಅರುಣೋದಯವಾಗುತ್ತ ಬಂದರೂ ಶಂಕರ ರಾಗಾಲಾಪನೆಯನ್ನು ತಡೆದಿರಲಿಲ್ಲ ಸಭೆಯವರಂತು ಅವನತ್ತ ದೃಷ್ಟಿ ಬೀರಿ ಗಾನದಲ್ಲಿ ಮುಳುಗಿದ್ದರು ಆದರೂ ಶಂಕರನಿಗೆ ಆಯಾಸವಿಲ್ಲ ಮುದುಕರಾದ ವೀಣೆ ವೆಂಕಟರಾಯರ ಬೆರಳುಗಳು ತಂಬೂರಿಯ ತಂತಿ ಮೀಟಿ ಮೀಟಿ ರಕ್ತಮಯವಾದವು ಅವರಿಗೂ ಎಚ್ಚರವಿಲ್ಲ

ಬೆಳಗಾಯಿತು ಆಗ ಒಮ್ಮೆಲೇ ಶಂಕರ "ಭೇಷ್! ಭಪ್ಪರೇ! ಹೇಯ್!" ಎಂದು ಹಾಡುವುದನ್ನು ನಿಲ್ಲಿಸಿ ಪುಟಿದೆದ್ದನು ಅವನೊಡನೆ ಮುದಿ ವೀಣೆ ವೆಂಕಟರಾಯರೂ ಮೇಲೆ ಹಾರಿದರು ಸಭೆಯಲ್ಲಿ ಇನ್ನೂ ಅನೇಕ ಮಂದಿ "ಬೇಷ್" ಎಂದು ಧ್ವನಿಗೈದರು "ಗಾನದ ಪರಿಪೂರ್ಣತೆ ಇಂದು ಕಂಡೆವು! ಸಾಕ್ಷಾತ್ ಸರಸ್ವತಿಯೇ ಅವನ ಕಂಠದಲ್ಲಿ ನೆಲೆಸಿದ್ದಾಳೆ" ಎಂದು ಅನೇಕರು ಹೊಗಳಿದರು ಆತ್ಮಾನಂದದ ಮೆಟ್ಟಲಿಗೆ ತಲುಪಿದೊಡನೆ ಶಂಕರ ಸ್ಫೂರ್ತಿಯಿಂದ ಮೇಲೆದ್ದ ಎಷ್ಟೋ ಜನರು ಅವನನ್ನು ಅಪ್ಪಿಕೊಂಡರು "ಏನು ಕಂಠ! ಎಂಥ ಸ್ವರ!" ಎಂದು ಅವರವರ ಮೆಚ್ಚುಗೆ ವ್ಯಕ್ತಮಾಡಿದರು ಹೀಗೆ ಆನಂದದಿಂದ ಅವರೆಲ್ಲ ಅವನನ್ನು ಮುದ್ದಾಡುವುದೊಂದು ಉಳಿದಿತ್ತು ಆಗ ಶಂಕರ ಅವರೆಲ್ಲರನ್ನು ಸರಿಸಿ, ತಟ್ಟನೆ ಓಡಿಹೋಗಿ, ಆ ಮೂಲೆಯಲ್ಲಿ ಗೋಡೆಗೆ ಜೋತುಬಿದ್ದ "ಸ್ವರಮೂರ್ತಿ" ಸುವರ ಭಾವಚಿತ್ರದ ಕೆಳಗೆ ಸಾಷ್ಟಾಂಗ ನಮಸ್ಕಾರ ಮಾಡಿದ ಎಲ್ಲರೂ ಆಶ್ಚರ್ಯದಿಂದ ನೋಡುತ್ತಿದ್ದರು

ಎಷ್ಟೋ ಹೊತ್ತಿನ ವರೆಗೆ ಶಂಕರ ಅಲ್ಲಿಂದ ಏಳಲಿಲ್ಲ ಆ ಮೇಲೆ ಎದ್ದವನೇ "ನೀವು ಇವರನ್ನು ಅಭಿನಂದಿಸಬೇಕು" ಎಂದು ಆ ಫೋಟೋದ ಕಡೆಗೆ ಕೈಮಾಡಿ ತೋರಿಸಿದ "ಇವರೇ ನನ್ನ ಪೂಜ್ಯ ಗುರುಗಳು ಇವರ ಆಶೀರ್ವಾದವೇ ನನ್ನನ್ನು ಕಾಯುತ್ತಿದೆ" ಎಂದು ಆನಂದ ಭಾಷ್ಪಗಳನ್ನು ಕಣ್ಣಲ್ಲಿ ತುಂಬಿಸಿಕೊಂಡು ಅವರ ಮುಂದೆ ನಿಂತ ಕೆಲವರು ಆ ಚಿತ್ರಕ್ಕೆ ಕೈಮುಗಿದರು ಶಂಕರನ ಶಾಲೆಯ ವಿದ್ಯಾರ್ಥಿಗಳೆಲ್ಲ ತಮ್ಮ ಭಾವೀ ಗುರುವೆಂಬ ಗೌರವ ಭಾವನೆಯಿಂದ ಅವನನ್ನು ನೋಡುತ್ತಿದ್ದರು ಆಗ ಡಾಕ್ಟರರು "ಈ ಕಲೆಯ ಸದುಪಯೋಗವನ್ನು ಮಾಡು. ಸತ್ಪಾತ್ರದಲ್ಲಿ ಇದರ ವಿನಿಯೋಗವಾಗಲಿ ನಿನ್ನ ಈ ಆದರ್ಶ ಸಾಲೆಯಲ್ಲಿ ಇಂಥ ಲಲಿತ ಕಲೆಗಳಿಗೆ ಆಸ್ಪದವಿದೆಯೆಂದು ಹೇಳಿದ್ದಿ ನೀನೇ ಗುರುವಾಗಿ ಈ ಕಲೆಯದಾನ ಮಾಡು" ಎಂದರು ಶಂಕರ ಅವರ ಮಾತನ್ನು ಅಂಗೀಕರಿಸಿದ "ನೀನು ಸಕಲಕಲಾ ವಿಶಾರದ" ಎಂದು ಅನೇಕರು ಅವನನ್ನು ಹೊಗಳಿದರು "ಇಂಥವನಿಂದ ನಮ್ಮ ಜನ ಮುಂದೆ ಬಂದೀತು" ಎಂದು ಅನೇಕರು ಹಿಗ್ಗಿದರು ಅಂತೂ ಅಂದಿನ ಕಾರ್ಯಕ್ರಮಗಳೆಲ್ಲ ಸಾಂಗವಾಗಿ ನೆರವೇರಿದವು

ಸಾಲೆಯ ಪ್ರಾರಂಭೋತ್ಸವದ ಗದ್ದಲವೆಲ್ಲ ಶಾಂತವಾಯಿತು ಹತ್ತಾರು ದಿನಗಳೂ ಕಳೆದವು ಸಾಲೆಯ ಆಟಪಾಠಗಳು ಪಾರಂಭವಾದವು ಅಲ್ಲಿಯ ವಿದ್ಯಾರ್ಥಿಗಳಿಗೆ ದೊರೆಯುವ ಶಿಕ್ಷಣದ ರೀತಿಯೇ ಬೇರೆ ವಿದ್ಯಾರ್ಥಿಯ ವೈಯಕ್ತಿಕ ಅಭಿರುಚಿಗನುಗುಣವಾಗುವಂತೆ ಶಿಕ್ಷಣ ಕೊಡಲ್ಪಡುತ್ತಿತ್ತು ಲಲಿತ ಕಲೆಯೂ ಅಲ್ಲಿ ತನ್ನ ಸ್ಥಾನವನ್ನು ದೊರಕಿಸಿಕೊಂಡಿತ್ತು ಒಟ್ಟಿನಲ್ಲಿ ಪ್ರತಿಯೊಬ್ಬನ ಸರ್ವತೋಮುಖವಾದ ವ್ಯಕ್ತಿತ್ವದ ಬೆಳವಣಿಗೆಯಾಗಬೇಕೆಂಬುದೆ ಶಂಕರನ ಉದ್ದೇಶ ಕೇವಲ ಒಂದರಿಂದ ೨೦ರ ವರೆಗ ಮಗ್ಗಿ ಬಾಯಪಾಠ ಮಾಡಿ ವಜಾ ಬಾಕಿ ಗಣಿತ ಕಲಿಯುವುದು, ದೇಶದ ಪ್ರಮುಖ ಪಟ್ಟಣ, ಕಾಡು–ನದಿಗಳ ನಾಮಸ್ತೋತ್ರದ ಭೂಗೋಲ ಪಠಣೆ ಮಾಡುವುದು, ಸುಳ್ಳಿಗೆ ಸುಳ್ಳನ್ನೇ ಅಂಟಿಸಿ, ಸತ್ತವರ ಇತಿಹಾಸ, ಅವರ ಜನನ ಮರಣದ ತಾರೀಕುಗಳನ್ನು ನೆನಪಿಡುವುದು—ಮೊದಲಾದ ಕಡ್ಡಾಯ ಶಿಕ್ಷಣವನ್ನು ದಾಸರಂತೆ ಅಭ್ಯಾಸಮಾಡುವ ವರ್ಗವು 'ಕಲಾನಿಕೇತನ' ದಲ್ಲಿ ಇರಲಿಲ್ಲ

ಅಲ್ಲಿ ನೃತ್ಯವೂ ಒಂದು ವಿದ್ಯೆಯಾಗಿತ್ತು, ತರಕಾರಿಯ ತೋಟ ಮಾಡುವುದೂ ಒಂದು ಶಿಕ್ಷಣವೆಂದು ಶಂಕರ ಹೇಳುತ್ತಿದ್ದ ಬಡಿಗತನ ಕಲಿತು ವಿವಿಧ ರೀತಿಯ ಕುಸುರಿನ ಕೆಲಸಗಳನ್ನು ಜಾಣ್ಮೆಯಿಂದ ಮಾಡು ವುದೂ ವಿದ್ಯೆಯೆಂದು ವಿದ್ಯಾರ್ಥಿಗಳಿಗೆ ಗೊತ್ತಾಗಿತ್ತು ಶಂಕರನಂತೆ ಅವನ ಸಂಗಡಿಗರೂ ಕೆಲಸ ಮಾಡಿ, ವಿದ್ಯಾರ್ಥಿಗಳನ್ನು ತರಬೇತು ಮಾಡುತ್ತಿದ್ದರು ವಿದ್ಯಾರ್ಥಿಗಳಾದರೂ ಆಸ್ಥೆಯಿಂದ ಕಲಿತು, ಒಬ್ಬೊಬ್ಬರು ಒಂದೊಂದು ವಿಷಯದಲ್ಲಿ ಒಲವು ತೋರಿಸಿ ಅಭ್ಯಸಿಸಿ ಪರಿಣಿತರಾಗುತ್ತ ಬರುತ್ತಿದ್ದರು ಒಬ್ಬರಂತೆ ಒಬ್ಬರು ಇರಲಿಲ್ಲ ಅದರಂತೆ ಎಲ್ಲರಿಗೂ ಸಾಮಾನ್ಯವಾದ ಓದು ಬರಹ ಬರುತ್ತಿತ್ತು ಆದರೆ ಅವರೆಲ್ಲ ಮಂಗಳೂರು ಹಂಚುಗಳ ಹಾಗೆ ಒಂದೇ ಬಗೆಯ ಜ್ಞಾನದ ಪಡಿಯಚ್ಚುಗಳಾಗಿರಲಿಲ್ಲ

ಕಲವರು 'ಕಲಾನಿಕೇತನ' ವನ್ನು ಜಾತಿಗೆಟ್ಟವರ ಸಾಲೆ ಎಂದು ಕರೆಯುತ್ತಿದ್ದರು ಅಲ್ಲಿ ಹೊಲೆಯರಿಂದ ಹಾರವರ ತನಕ ಇದ್ದಾರೆ ಎಷ್ಟೆಂದರೂ ಹೊಲೆಯ ಹೊಲೆಯನೇ, ಹಾರವ ಹಾರವನೇ ದೇವರು ಮಾಡಿಟ್ಟ ಜಾತಿಯನ್ನು ಕೆಡಿಸುವ ಪಾಪಿಗಳೂ ಈ ಜಗತ್ತಿನಲ್ಲಿ ಜನ್ಮ ತಾಳು ತ್ತಿದ್ದಾರೆ ಒಟ್ಟಿನಲ್ಲಿ ಇದೆಲ್ಲ ಕಲಿಯುಗದ ಮಹಾತ್ಮೆ ಕಲಿಯುಗದಲ್ಲಿ ವಿಪ್ರರು ಆಚಾರ ಕೆಡಿಸಿಕೊಂಡು ಹೀನರಾಗುತ್ತಾರೆಂದು ಪರಮಾತ್ಮನೇ ಹೇಳಿದ್ದಾನೆ ಹಾಗೆ-ಹೀಗೆ ಎಂದು ಮಾತಾಡತೊಡಗಿದರು ಇನ್ನು ಅಣ್ಣಪ್ಪಯ್ಯ, ಮುಕ್ತೇಶ್ವರ ಮತ್ತು ಕೆಲವರು ಬೇರೆಯೇ ಹಂಚಿಕೆ ಹಾಕಿದ್ದರು ಜೊತೆಯಲ್ಲಿ ಅಪಪ್ರಚಾರವನ್ನು ನಡೆಸಿದ್ದರು "ಹರಿಜನ ಭಕ್ತ" ಎಂದೂ ಶಂಕರನಿಗೆ ಹೆಸರಿಟ್ಟಾಗಿತ್ತು.

ಬರಬರುತ್ತ ಶಂಕರನ ತಾಯಿಯಿಂದ ಅಲ್ಲಿಯ ವೃಂದಕ್ಕೆಲ್ಲ ಅಡುಗೆ ಮಾಡುವುದಕ್ಕ ಆಗಲಿಲ್ಲ ಆದಕ್ಕಾಗಿ ಒಬ್ಬ ಅಡುಗೆಯ ಆಳನ್ನೇ ಶಂಕರ ನಿಯಮಿಸಬೇಕಾಯಿತು. ಅಂತೂ ಸಾಲೆಯು ಪ್ರಗತಿಪಥದಲ್ಲೇ ಮುನ್ನಡೆ ಯುತ್ತಿತ್ತು ಶಂಕರನೂ ಆನಂದದಲ್ಲಿ ಇದ್ದ ಡಾ। ಕೃಷ್ಣರಾಯರೂ ವಾರ ಕ್ಕೊಮ್ಮೆ ಬಂದು ಎಲ್ಲ ವಿದ್ಯಾರ್ಥಿಗಳ ಆರೋಗ್ಯ ನೋಡಿಕೊಂಡು ಹೋಗು ತ್ತಿದ್ದರು ಪ್ರತಿ ಆದಿತ್ಯವಾರ ಅವರು ಬಂದಾಗ ಶಂಕರ ಅವರೊಡನೆ ಒಂದು ಗಂಟೆ ಸಂಭಾಷಣೆ ನಡೆಸದೆ ಇಲ್ಲ ಅವರೊಡನೆ ಏನೋ ಕೇಳಬೇಕೆಂದು

ಮನಸ್ಸಿನಲ್ಲಿ ನಿರ್ಧರಿಸುತ್ತಿದ್ದ ಆದರೆ ಕೇಳುವದು ಮಾತ್ರ ಆಗುತ್ತಿರಲಿಲ್ಲ ಹೀಗೆ ನಾಲ್ಕಾರು ವಾರಗಳು ಕಳೆದವು

ಒಮ್ಮೆ ಎಂದಿನಂತೆ ಡಾಕ್ಟರು ಬಂದಾಗ ಶಂಕರ ಅವರೊಡನೆ ಮಾತಾಡುತ್ತ ಕುಳಿತುಕೊಂಡ ಸ್ವಲ್ಪ ಹೊತ್ತು ಮಾತುಕತೆ ನಡೆಯಿತು ಆಮೇಲೆ ಶಂಕರ ನೇರವಾಗಿ ತನ್ನ ಮನಸ್ಸನ್ನು ಬಿಚ್ಚಿ ಅವರೊಡನೆ "ನೀವು ನನಗೆ ವೈದ್ಯಕೀಯ ಕಲಿಸುತ್ತೀರೋ ?" ಎಂದು ಕೇಳಿದ

"ನಿನ್ನಲ್ಲಿ ಎಷ್ಟೆಲ್ಲ ವಿದ್ಯೆಗಳಿಲ್ಲ! ಇದನ್ನೂ ನನ್ನಿಂದ ಕಲಿಯಬೇಕೆನ್ನುತ್ತೀಯಾ ?"

"ಹೌದು"

"ಆ ಒಂದು ವಿದ್ಯೆಯಲ್ಲಾದರೂ ನಾನು ನಿನಗಿಂತ ಮುಂದೆ ಇದ್ದೇನೆ ಎಂದು ಭಾವಿಸಿದ್ದೆ ಆದರೆ ಅದನ್ನೂ ಕಲಿತು ನನ್ನನ್ನು ಹಿಂದೆ ಹಾಕಬೇಕೆಂಬುದು ನಿನ್ನ ಆಸೆಯೋ ?"

"ಛೀ! ಎಂದಿಗೂ ಇಲ್ಲ ಆದರೂ ಕಲಿಯಬೇಕು ಎಂಬ ಆಸೆ ಯಾವ ವಿಶ್ವವಿದ್ಯಾಲಯಗಳಿಗೂ ಅದಕ್ಕಾಗಿ ಮೊರೆ ಹೋಗುವುದಿಲ್ಲ ಅಲ್ಲಿ ಕಲಿಯುವುದು—ಅವರು ಕಲಿಸುವುದು ಎಷ್ಟೆಂಬುದು ನನಗೆ ಗೊತ್ತಿದೆ ಸರಕಾರದ ಮನ್ನಣೆ ಪಡೆಯದೆ ಅನುಭವಸ್ಥರಾದ ನಿಮ್ಮ ಕೈಕೆಳಗೆ ವೈದ್ಯಕೀಯ ಕಲಿತು—ಏನಾದರೂ ಮಾಡಬೇಕೆಂಬ ಹಂಬಲವಿದೆ"

"ಅದಕ್ಕೇನು ? ಶಿಷ್ಯಾದಿಚ್ಛೇತ್ ಪರಾಭವಮ್ ಎಂಬ ಮಾತೇ ಇದೆಯಲ್ಲ ಹಲವಾರು ವಿದ್ಯೆಗಳ ಗುರುವಾದ ನಿನಗೆ ಅದನ್ನು ಒಂದು ಕಲಿತುಕೊಳ್ಳಲು ಹೆಚ್ಚಿನ ಪರಿಶ್ರಮ ಬೇಕಾಗದು" ಎಂದು ಡಾಕ್ಟರು ಹೇಳಿದರು ಅಂದಿನಿಂದ ಶಂಕರ ವೈದ್ಯಕೀಯ ಕಲಿಯುತ್ತ 'ಕಲಾನಿಕೇತನ'ದ ವ್ಯವಸ್ಥೆ ನೋಡಿಕೊಂಡು ಹೋಗುತ್ತಿದ್ದ ಅಲ್ಲಿಯ ಒಂದು ವಿಶಾಲವಾದ ಕೊಠಡಿಯೇ ಶಂಕರನ ಆಸ್ಪತ್ರೆಯಾಯಿತು ಅಲ್ಲಿಯೇ ಡಾಕ್ಟರರು ವಾರಕ್ಕೆ ಒಮ್ಮೆಯೋ ಎರಡು ಸಲವೋ ಬಂದು ಶಂಕರನಿಗೆ ಅಭ್ಯಾಸ ಹೇಳಿಯೋ ಮಕ್ಕಳ ಆರೋಗ್ಯ ನೋಡಿಯೋ ಹೋಗುತ್ತಿದ್ದರು

ಇಷ್ಟಾದರೂ ಸುಮತಿಯೊಡನೆ ದಿವಸಕ್ಕೊಮ್ಮೆ ಮಾತಾಡದಿದ್ದರೆ ಶಂಕರನಿಗ ನಿದ್ದೆ ಬೀಳದು ಅವಳಾದರೂ ಚಿಕ್ಕಪುಟ್ಟ ಕೆಲಸಗಳ ಸೊಟ್ಟ

ನೆವ ಹೂಡಿ 'ಕಲಾನಿಕೇತನ' ದತ್ತ ಹೋಗದಿರಳು ಶಾಲೆಯ ಹಿಂದೆ, ಕಾಡು–ಗುಡ್ಡ, ಗವಿ, ಬಂಡೆಗಳ ಗೂಡು, ಮರಗಳ ಮನೆಗಳು ಬೇಕಾದಷ್ಟು ಇದ್ದವು ಅಂಥ ರಮ್ಯ ಸ್ಥಳಗಳಲ್ಲಿ ಶಂಕರ ಸುಮತಿಯರ ಸರಸಸಲ್ಲಾಪ ನಡೆಯುತ್ತಿತ್ತು ಆಕ ಹಲವಾರು ಸಲ ಮಾತಾಡುತ್ತ ಆಡುತ್ತ, "ನಾನು ಭಾಗ್ಯಹೀನಳು ಶಂಕರಾ" ಎಂದು ಕಣ್ಣೀರು ಸುರಿಸುತ್ತಿದ್ದಳು ತಲೆ ಕೆಳಗೆ ಹಾಕಿ ಅವನ ಮುಂದೆ ಕೂತಲ್ಲಿಂದಲೇ ಕೆಳಗೆ ನೋಡುತ್ತಿದ್ದಳು ಆಗ ಶಂಕರ ಅವಳ ತಲೆಯನ್ನು ಮೃದುವಾಗಿ ಮ ಟ್ಟಲು ಕೈ ನೀಡುತ್ತಿದ್ದ ಆದರೆ ಅವನ ಕೈಗಳು ಮುಂದುವರಿಯುತ್ತಿರಲಿಲ್ಲ ಮೈಯಿಂದ ಮಲಿನ ಮಾಡದೆ ಪ್ರೀತಿ ಯನ್ನು ಮುದ್ದು ಮಾತುಗಳ ಮುಖಾಂತರ ಶುದ್ಧವಾಗಿ ಸಾಕುತ್ತಿದ್ದ "ನಿನ್ನನ್ನು ನಾನು ಬಿಟ್ಟು ಹಾಕುವುದಿಲ್ಲ" ಎನ್ನುತ್ತಿದ್ದ ಆದು ಪ್ರೀತಿಯ ಸಲುವಾಗಿಯೇ ಪ್ರೀತಿಯಲ್ಲವೇ ?

## ೬

ಮಳೆಗಾಲ ಆದೇ ಪ್ರಾರಂಭವಾಗಿತ್ತು ನದಿ, ತೊರೆ, ಹಳ್ಳಗಳು ತುಂಬಿ ಹರಿಯುತ್ತಿದ್ದವು 'ಮದುಮಗಳ ಅಬ್ಬಿ' ಆರ್ಭಟಿಸುತ್ತ ಭೋರ್ಗ ರೆಯುತ್ತಿದ್ದಳು ನೋಡಿದತ್ತೆಲ್ಲ ಹಸಿರು ಹರಡಿತ್ತು ಬೇಸಾಯದ ಕೆಲಸದ ದಿನಗಳಲ್ಲವೇ ಅವು ? ಎಲ್ಲ ರೈತರೂ ತಮ್ಮ ತಮ್ಮ ಹೊಲಗಳಲ್ಲಿ ದುಡಿಯು ತ್ತಿದ್ದರು ಅವರಿಗೆ ಹಗಲೇ ಸಾಲುತ್ತಿರಲಿಲ್ಲ ದೀರ್ಘವಾದ ರಾತ್ರಿಯನ್ನು ಕೆಲವು ಜನರು ಶಪಿಸಲೂ ಹಿಂಜರಿಯುತ್ತಿದ್ದಿಲ್ಲ ಆದರೆ ನೇಗಿಲು ಎಳೆದು ಎಳೆದು ಸೋತು ಮಲಗಿದ ಎತ್ತು, ಕೋಣಗಳು ಸವಿನಿದ್ದೆಯಲ್ಲಿ ಯಾರನ್ನು ಬಯ್ಯುತ್ತಿದ್ದವೋ ತಿಳಿಯದು ಈ ಎತ್ತು–ಕೋಣಗಳೇ ದೀರ್ಘವಾದ ರಾತ್ರಿಗೆ ಕಾರಣವೆಂದು ಹಲವಾರು ಜನ ಹೇಳುತ್ತಿದ್ದರು ಅವರಲ್ಲಿ ಅಣ್ಣಪ್ಪ

ಯ್ಯನವರೂ ಒಬ್ಬರು ಸೃಷ್ಟಿಕರ್ತನೊಡನೆ ಅವುಗಳು "ರಾತ್ರಿ ಉದ್ದವಾಗಲಿ" ಎಂದು ವರ ಪಡೆದುಕೊಂಡು ಬಂದಿವೆಯಂತೆ ಯಾಕಂದರೆ ಹಗಲಲ್ಲಿ ಈ ಮನುಷ್ಯರು ಹೊಡೆದು ಬಡೆದು ಬಡೆದು ಮಧ್ಯಾಹ್ನ ದಾಟುವ ವರೆಗೆ ನೇಗಿಲು ಕಟ್ಟಿ ಊಳಿಸುತ್ತಾರೆ ಆ ಆಯಾಸವನ್ನು ನೀಗಿಸಲು ಲಂಬವಾದ ರಾತ್ರಿ ಉಪಯೋಗವಾಗುತ್ತದಷ್ಟೆ ಹೊರತು ಭೂಮಿ ತಿರುಗುವ ಭೂಗೋಲದ ಜ್ಞಾನ ಅವರ ಬುರುಡೆಯೊಳಗೆ ಇಲ್ಲ

ಅಂದು ದಾಸ ಮನೆಗೆ ಬರುವಾಗಲೂ ಕಾಂತಪ್ಪ ಮತ್ತು ಅಣ್ಣಪ್ಪಯ್ಯ, ಕಲಾನಿಕೇತನದ ಬಗ್ಗೆ ತರ್ಕ ನಡೆಸಿದ್ದರು

'ದಾಸ ಮಾಸ್ತ್ರ ಸಾಲೆಯ ವಿದ್ಯಾರ್ಥಿಗಳೇ ಬುರ್ನಾಸು' ಎಂದು ಕಾಂತಪ್ಪ ಹೇಳಿದ "ಅಲ್ಲಿಯ ಹುಡುಗರು ಕಲಿಯುವುದು ಎಷ್ಟೆಂದು ನನಗೆ ಗೊತ್ತಿಲ್ಲವೋ? ಅದಕ್ಕಾಗಿ ನನ್ನ ಮಗನನ್ನ ಕಲಾನಿಕೇತನಕ್ಕೆ ಕಳುಹಿಸಿದ್ದೇವೆ ಹಾ! ಅಲ್ಲಿ ಎಷ್ಟು ತರಹದ ವಿದ್ಯೆ ಕಲಿಸುತ್ತಾರೆ! ಅಲ್ಲಿ ಒಬ್ಬ ಹುಡುಗನೂ ಭೂಸಾಗಿಲ್ಲ ಒಬ್ಬರಿಗಿಂತ ಮತ್ತೊಬ್ಬರು ಚುರುಕಾಗಿದ್ದಾರೆ" ಎಂದು ಹೊಗಳಿಯೇ ಹೊಗಳಿಕೊಂಡ

ಅಣ್ಣಪ್ಪಯ್ಯ ಉತ್ತರಿಸದೆ ಸುಮ್ಮನಾದರು ದಾಸನೂ ಅವನ ಮಾತಿಗ ಹೆಚ್ಚು ಲಕ್ಷ್ಯನೀಯಲಿಲ್ಲ ಕಾರಣ ಕಾಂತಪ್ಪ ಅಲ್ಲಿಂದ ಎದ್ದು "ನಾನು ಹೋಗುತ್ತೇನೆ" ಎನ್ನುತ್ತ ಮನೆಯತ್ತ ಹೋದ

ಅವನು ಹೋದ ಮೇಲೆ ತಂದೆ ಮತ್ತು ಮಗ ತಮ್ಮೊಳಗೆ ಸಂಭಾಷಣೆಗೆ ಪ್ರಾರಂಭಿಸಿದರು

"ಹಾಗಾದರೆ ನಾಡದು ನೀನು ಧಾರವಾಡಕ್ಕೆ ಹೋಗುತ್ತೀಯಲ್ಲ?" ಎಂದು ಅಣ್ಣಪ್ಪಯ್ಯ ಕೇಳಿದರು

"ನಾಡದು ಹೋಗುವುದಾದರೆ ಇವತ್ತೇ ಮೋಟಾರಿನ ಸೀಟು ರಿಜರ್ವ್ ಮಾಡಿಸಬೇಕಾಗುತ್ತದೆ"

"ಆದೀತು ಇವತ್ತು ಹೇಗೂ ಸೋಮವಾರ ನಾನು ಸಂಪಿಗೆಗೆ ಹೋದಾಗ ಅಲ್ಲಿಯೆ ಹಣ ತುಂಬಿ ರಿಜಾರ್ವ ಮಾಡಿಸಿ ಬರತ್ತೇನ" ಎಂದು ಅಣ್ಣಪ್ಪಯ್ಯ ಹೇಳಿ, ಸಂಪಿಗೆಗೆ ಹೊರಡಲು ಅನುವಾದರು ಆಗ ಸಂಜೀವಿ ಏನೋ ಹೇಳಬೇಕೆಂದು ಬಾಯಿ ತೆರೆದುಕೊಂಡು ಹೊರಗೆ ಬಂದಳು ಅಣ್ಣಪ್ಪ

ಯ್ಯನವರ ದೃಷ್ಟಿ ಅವಳತ್ತ ಹೋಯಿತು

"ಏನು ಸಂಜೀವಿ ?" ಎಂದು ಅಣ್ಣಪ್ಪಯ್ಯನವರೇ ಮೊದಲು ಪ್ರಶ್ನಿಸ ಬೇಕಾಯಿತು

"ನೀವು ಸೀಟು-ಗೀಟು ಅಂತ ಏನೋ ಅಂದಿರಿ ... ಅದನ್ನು"

"ಹೌದು, ನಾನೀಗ ಹೊರಟದ್ದೇ ಅದಕ್ಕೆ ನಮ್ಮಿಂದ ಆದಷ್ಟು ಪ್ರಯತ್ನ ಮಾಡಬೇಕಲ್ಲ! ಅದು ಕಬ್ಬಿಣ ಎಂದು ನನಗೆ ಗೊತ್ತುಂಟು ಅದನ್ನು ಬಂಗಾರ ಮಾಡಲಿಕ್ಕೆ ಸಾಧ್ಯವಿಲ್ಲ ನಿಜ ನೋಡೋಣ, ಅವನು ಒಮ್ಮೆ ನನ್ನ ಮುಂದೆ ನಿಂತರೆ ಸಾಕು" ಎಂದು ಉಪಮೆ ಹೊಂದಿಸಿಯೇ ಮಾತಾಡಿದರು

"ಅವರು ಧಾರವಾಡದಲ್ಲಿ ಇದ್ದಾರೆ ಎಂಬುದು ಖಾತ್ರಿಯಿಲ್ಲದೆ—ಸುಮ್ಮನೆ ದಾಸ ಹೋಗಿ ಹಣ ವೆಚ್ಚ ಮಾಡಬೇಕಾಗುತ್ತದಲ್ಲ"

"ಅದರಲ್ಲಿ ಯಾವ ಸಂಶಯವೂ ಇಲ್ಲ ನಾರಾಯಣ ಧಾರವಾಡಕ್ಕೆ ಬಂದಿದ್ದಾನಂತೆ ಹಾಗೆಲ್ಲ ತೆಲಿಗ್ರಾಮ್ (Telegram) ಮಾಡಲಿಕ್ಕೆ ಭೀಮ ರಾಯನಿಗೆ ಹುಚ್ಚೇ ?" ಎಂದು ಅಣ್ಣಪ್ಪಯ್ಯ ಹೇಳುವಾಗ ದಾಸನೂ ನಡುವೆ ಬಾಯಿ ಹಾಕಿ ಕೇಳಿದ

"ಫಕ್ಕನೆ ನಾನು ಇಲ್ಲಿಂದ ಹೋಗುವುದರೊಳಗೆ ಅವರು ಅಲ್ಲಿಂದ ಫರಾರಿಯಾದರೆ ?"

"ಅದಕ್ಕೆಲ್ಲ ಉಪಾಯ ಮಾಡಿದ್ದೇನೆ ಭೀಮರಾಯರಿಗೆ ಈ ಊರಿಗೆ ಬಂದಾಗ ಏನೆಲ್ಲ ಮಾಡಬೇಕೆಂಬುದನ್ನು ಹೇಳಿ ಕಳುಹಿಸಿದ್ದೆ ಅಲ್ಲಿಗೆ ನಾರಾಯಣ ಬಂದೊಡನೆ, 'ಅಣ್ಣಪ್ಪಯ್ಯ ಸ್ಟಾರಟಾ ಇಮೇಡಿಯಟಲೀ' (Start immediately) ಅಂತ ತೆಲಿಗ್ರಾಮ್ ಮಾಡಲಿಕ್ಕೆ ಹೇಳಿದ್ದೆ ಮುಂದೆ ಅವನನ್ನು ಎಲ್ಲಿಯೂ ಹೋಗದಂತೆ ಎಚ್ಚರ ತೆಗೆದುಕೊಳ್ಳಲಿಕ್ಕೂ ಸೂಚಿಸಿದ್ದೇನೆ ನೀನೇನು ಅದರ ಬಗ್ಗೆ ಸಂದೇಹ ಪಡಬೇಕಿಲ್ಲ. ಈಗ ಏನು ? ನೀನು ಹೋಗುತ್ತೀಯೋ ಅಥವಾ ನಾನೇ ಹೋಗಬೇಕೋ ?"

"ಈಗ ಮಳೆಗಾಲದ ರಜೆಯೂ ಅನಾಯಾಸವಾಗಿ ದೊರೆತಿದೆ ನಾನೇ ಹೋಗುತ್ತೇನೆ ನೀವೇನು ಹೋಗುವುದು ಬೇಡ ಆದರೆ ಟೆಲಿಗ್ರಾಮ್

ಬಂದು ನಾಲ್ಕೈದು ದಿವಸವಾಯಿತು ಇಲ್ಲಿಯ ವರೆಗೆ ಅವರು ಧಾರವಾಡ ದಲ್ಲಿ ಇರುತ್ತಾರೋ ಇಲ್ಲವೋ ?"

"ಇರುತ್ತಾನೆಂಬ ಧೈರ್ಯದಿಂದ ಹೋಗುವುದು ಇಲ್ಲದಿದ್ದರೆ ಇಲ್ಲ ಒಂದು ನೂರು ರೂಪಾಯಿ ನೀರಿಗೆ ಹಾಕಿದೆವು ಅಂತ ತಿಳಿದುಕೊಳ್ಳುವುದು ಮತ್ತೇನು ಮಾಡುವುದಿದೆ ?" ಎಂದು ಅಣ್ಣಪ್ಪಯ್ಯ ದೃಢವಾದ ನಿರ್ಧಾರಕ್ಕೂ ಬಂದಾಯಿತು

"ಹಾಗಲ್ಲ ನಾನು ಹೇಳುವುದು ಅಪ್ಪಾ, ಮೂಡುಮನೆಯ ದೊಡ್ಡಪ್ಪ ನವರಿಗೂ ಕೇಳಿಕೊಂಡು ಹೋದರೆ ನೆಟ್ಟಗೆ ಎಂದು ನನಗೆ ಅನಿಸುತ್ತದೆ" ಎಂದು ಸಂಜೀವಿ ತಂದೆಗೆ ಹೇಳಿದಳು

"ಅವನಿಗೇನು ಕೇಳುವುದು ? ಅವನಿಗೆ ಹೇಳದೆ ಈ ಕೆಲಸ ಸಾಧಿಸ ಬೇಕಾಗಿದೆ ನಾರಾಯಣ ಊರಿಗೆ ಬಂದು, ನಿನ್ನನ್ನು ಕೂಡಿಕೊಂಡು ಅಶ್ವತ್ಥಪುರದಲ್ಲಿ ಒಂದು ಭಾರೀ ಆಸ್ಪತ್ರೆ ಕಟ್ಟಿಸಿ, ದೊಡ್ಡ ದಾಕದಾರ ಆದ ದ್ದನ್ನು ನನಗೆ ನೋಡಬೇಕಾಗಿದೆ ನಿನಗೇನು ಗೊತ್ತುಂಟು ಸಂಜೀವಿ ? ನಿನ್ನ ಶನಿ ಎಲ್ಲ ಈಗ ಬಿಡುವ ಕಾಲ ಬಂದಿದೆ"

"ಖರ್ಚಿಗೆ ಸ್ವಲ್ಪ ಗುಣವಾಗುತ್ತದೆ ಎಂದು ನಾನು ಹೇಳುವುದು ಅಪ್ಪಾ ನನ್ನ ಹಾಗೆ ಅವಳೂ ಒಬ್ಬಳು ಸುಮತಿ ಇದ್ದಾಳಲ್ಲ !"

"ನಿನ್ನ ಹಾಗೆ ಅಲ್ಲ ಬಿಡು ಅವಳು ನೀನೂ ಏನೂ ಚಿಂತಿಸುವುದು ಬೇಡ ನಾನೆಲ್ಲ ಏರ್ಪಾಟು ಮಾಡುತ್ತೇನೆ"

"ನಿಮ್ಮದೇ ನಿಮಗೆ ನಾನು ಹೇಳುವುದನ್ನಾದರೂ ಸ್ವಲ್ಪ ಸಮಾಧಾ ನದಿಂದ ಕೇಳಬಾರದೇ ?" ಎಂದು ಮಗಳು ಹೇಳುವಾಗ ಅಣ್ಣಪ್ಪಯ್ಯ ಅಲ್ಲಿಯೇ ಕೂತುಕೊಂಡರು

"ಹಾಂ, ಏನು ಹೇಳುತ್ತ ಹೇಳು ನೋಡೋಣ"

"ದಾಸ ಗಟ್ಟಕ್ಕೆ ಹೋಗಿ ಬರಲಿಕ್ಕೆ ಏನಿಲ್ಲವೆಂದರೂ ನೂರಿನ್ನೂರು ರೂಪಾಯಿ ಬೇಕಾಗಬಹುದು ಅಷ್ಟೆಲ್ಲ ಹಣದ ಭಾರವನ್ನು ನೀವು ಒಬ್ಬರೆ ತಲೆಯ ಮೇಲೆ ಹಾಕಿಕೊಳ್ಳುವುದಕ್ಕಿಂತ ಸ್ವಲ್ಪ ಹಗುರ ಮಾಡಿಕೊಳ್ಳುವುದು ಒಳ್ಳೆಯದಲ್ಲವೇ ?"

"ಅದು ಹೇಗೆ ?"

"ಗಟ್ಟದತ್ತಲಾಗೆ ಸುಮತಿಯ ಗಂಡನೂ ಇದ್ದಾನಂತಲ್ಲ? ಅವನನ್ನೂ ಹುಡುಕಿಕೊಂಡು ದಾಸ ಕರೆದು ತರಬಹುದಲ್ಲ"

"ಛೀ ಛೀ. ಅದೇಕೆ? ಬೇಕಾದರೆ ಅವರೇ ಹೋಗಿ ಕರೆದು ತರಲಿ ಅವರಿಗೆ ಈ ಸುದ್ದಿ ತಿಳಿಸುವುದೇ ಬೇಡ"

"ಮತ್ತೆ ನಿಮ್ಮ ಖುಷಿ ಅಪ್ಪವರೇ ಅಂದರೆ ದಾಸನಿಗೆ ಗಟ್ಟಕ್ಕೆ ಹೋಗಿ ಅವರಿಬ್ಬರನ್ನೂ ಕರೆದು ತರಲಿಕ್ಕೆ ಬೀಳುವ ಖರ್ಚನ್ನು ನೀವಿಬ್ಬರೂ ಸರಿಯಾಗಿ ಹಂಚಿಕೊಂಡರೆ ಎಷ್ಟೋ ಗುಣ ಬೀಳುತ್ತದೆ ಎಂದು ನಾನು ಹೇಳುವುದು"

"ಹಾಗೆ ಮಾಡಿದರೂ ಅಡ್ಡಿ ಇಲ್ಲ" ಎಂದು ದಾಸನೂ ಧನಿಗೂಡಿಸಿದ ಆದರೆ ಅಣ್ಣಪ್ಪಯ್ಯನವರಿಗೆ ಈ ವಿಚಾರ ಸರಿದೋರಲಿಲ್ಲ.

"ಇನ್ನೊಬ್ಬರಿಗೆ ಉಪಕಾರ ಮಾಡಲಿಕ್ಕೆ ಹೋಗುವುದು ಬೇಡ ನಮ್ಮಷ್ಟಕ್ಕೆ ನಾವು ಇದ್ದರೆ ನಮ್ಮ ಮೇಲೆ ಇಲ್ಲದ ಅಪವಾದಗಳು ಬರುತ್ತವೆ ಇನ್ನು ನಾವಾಗಿ ಅವರ ಮೇಲೆ ಸಹಾಯ ತೋರಿಸಲು ಹೋದರೆ ಏನೆಲ್ಲ ಕೇಳಬೇಕಾಗುತ್ತದೋ ದೇವರೇ ಬಲ್ಲ! ..ದಾಸಾ, ನೀನು ಊರು ಬಿಟ್ಟು ಗಟ್ಟಕ್ಕೆ ಹೋಗುವ ಸುದ್ದಿಗಾಳಿಗೂ ಗೊತ್ತಾಗಬಾರದು ಖರ್ಚು ಆಗುತ್ತದೆ ಅದಕ್ಕೇನು ಮಾಡುವುದು? ಯಾವುದಕ್ಕೂ ನಾರಾಯಣ ಒಮ್ಮೆ ಊರಿಗೆ ಬರಲಿ ಆ ಮೇಲೆ ಇವರಿಗೆಲ್ಲ ಕಲಿಸುವ ಬುದ್ಧಿಯೇ ಬೇರೆ ಖರ್ಚು ಆಗುತ್ತದೆ ಅಂತ ನೀವೇನು ಹೆದರುವುದು ಬೇಡ ನಮ್ಮ ಆಸ್ತಿ ಏನು ಮಾರಿ ಹೋಗಲಿಕ್ಕಿಲ್ಲವಷ್ಟೆ .. .ನೋಡು ಸಂಜೀವಿ, ಈ ಸುದ್ದಿಯನ್ನು ಯಾರಿಗೂ ಹೇಳಬೇಡ 'ದಾಸ ಎಲ್ಲಿಗೆ ಹೋಗಿದ್ದಾನೆ?' ಅಂತ ಯಾರಾದರೂ ಕೇಳಿದರೆ, 'ಎಲ್ಲಿಯೋ ಪುತ್ತೂರು—ಕಾಸರಗೋಡುಗಳಿಗೆ ಹೋಗಿದ್ದಾನೆ' ಎಂದು ಹೇಳಬೇಕು ಈಗ ನಮ್ಮ "ಕರೆ" ಬಿಟ್ಟು ನಮ್ಮ ಪೈಕಿಯವರೇ ನಮ್ಮ ಕಿಮ್ಮತ್ತು ಕಟ್ಟಲಿಕ್ಕೆ ಪ್ರಾರಂಭಿಸಿದ್ದಾರೆ ತಿಳಿಯಿತೇ ಸಂಜೀವಿ?" ಎಂದು ಹೇಳಿ ಅಣ್ಣಪ್ಪಯ್ಯ ಸಂಪಿಗೆಗೆ "ಸೀಟು ರಿಜರ್ವ" ಮಾಡಿಸಲಿಕ್ಕೆ ಹೋಗಿ ಬಿಟ್ಟರು

ಶಂಕರನ 'ಕಲಾನಿಕೇತನ' ಅಣ್ಣಪ್ಪಯ್ಯನವರ ಜೀವನದಲ್ಲಿ ಒಂದು ಹೊಸ ಪರಿವರ್ತನೆಯನ್ನೂ ತಂದೊಡ್ಡಿನಂತೆ ಕಾಣುತ್ತದೆ ಅವನಿಗೂ ಅವ

ರಿಗೂ ಯಾವ ದ್ವೇಷವೂ ಇಲ್ಲ ಆದರೂ ಲವರ ಮನಸ್ಸಿನಲ್ಲಿ ಯಾವುದೋ ಒಂದು ತರಹದ ಅಸಮಾಧಾನದ ಹೋರಾಟ ನಡೆದಿದೆ ಅದಕ್ಕೆ ಮತ್ತೂ ಅಷ್ಟು ಎಡೆಕೊಟ್ಟು ಪುಷ್ಟಿಗೊಳಿಸುತ್ತಲಿರುವವರೆಂದರೆ ಹಿಂದೆ ಹೇಳಿದ ಮುಕ್ತೇಶ್ವರರು ಮುಕ್ತೇಶ್ವರರಿಗೆ 'ಕಲಾನಿಕೇತನ'ದ ಸುದ್ದಿ ಕೇಳಿದೊಡನೆ ವೈ ಜುಮ್ಮೆಂದು ಹೇಗೋ ಆಗುತ್ತಿತ್ತು—ಮನಸ್ಸಿನಲ್ಲಿ ಒಬ್ಬನ ಮೇಲೆ ಮತ್ತೊಬ್ಬನು ವೈರ ಹೂಡಬೇಕಾದರೆ ಬಲವಾದ ಕಾರಣಗಳು ಬೇಕೆಂದಿಲ್ಲ ವಷ್ಟೇ ಹಾಗೆ ಎಂಥ ವೈರತ್ವ ಕಟ್ಟಿಕೊಳ್ಳಬೇಕೆಂಬ ಪ್ರಸಂಗಗಳು ಬಂದರೂ ಅವುಗಳಿಂದ ದೂರ ನಿಂತುಕೊಂಡು ಸ್ನೇಹದಿಂದ ವರ್ತಿಸುವ ಜನರಿಲ್ಲವೆಂದಲ್ಲ ಅಂಥವರ ಸಂಖ್ಯೆ ಮಾತ್ರ ವಿರಳ

ಇನ್ನು ವಿನಾಕಾರಣ ವೈರತ್ವ ಕಟ್ಟಿಕೊಳ್ಳಲು ಹವಣಿಸುವವರು ಈ ಜಗತ್ತಿನಲ್ಲಿ ಕಡಿಮೆ ಇಲ್ಲ ಏನಾದರೂ ಒಂದು ಜಗಳ—ಜಂಜಾಟ ಇಲ್ಲವೆ ಪಕ್ಷಪಂಗಡಗಳಲ್ಲಿ ಭಾಗವಹಿಸಿ ದಿನದ ತಾಸೋ—ನಿಮಿಷಗಳನ್ನು ಲೆಕ್ಕ ಮಾಡುತ್ತ ಸಮಯ ಕಳೆಯುವುದು ಅವರ ಉದ್ಯೋಗ ಅದೇ ಅವರ ಸರ್ವಸ್ವ, ಯಾವುದೋ ಒಂದು ಯೋಗಾಯೋಗದಿಂದ ಲಕ್ಷ್ಮಿ ಅಂಥವರನ್ನು ಒಲಿದೇ ಇರುತ್ತಾಳೆ ತಾವೇ ದೊಡ್ಡವರು ಎಂಬುದು ಅವರ ಮನಸ್ಸಿಗೆ ಎಂದೋ ಹೊಳೆದಿರುತ್ತದೆ ತಮಗಿಂತ ಹೆಚ್ಚಿನವರನ್ನು ಕಂಡರೆ ಅವರಿಗೆ ಸಹನೆ ಇಲ್ಲ ಅಂಥವರು ಯಾರಾದರೂ ಕಣ್ಣೆದುರು ಬಿದ್ದರೆ ಅವರ ಮೂಲ ನಾಶ ಮಾಡುವ ತನಕ ಇವರಿಗೆ ನಿದ್ದೆ ಬೀಳದು ತಾವಾಗಿ ಲೋಕೋಪಕಾರ ಮಾಡುವುದಿಲ್ಲ ತಮ್ಮಲ್ಲಿ ಆ ಕಾರ್ಯಕ್ಕೆ ಅನುಕೂಲತೆಗಳು ಬೇಕಾದಷ್ಟಿದ್ದರೂ ಅವರು ಆತ್ತ ಲಕ್ಷವೀಯರು ಬದಲು ಪರರು ಕಾರ್ಯ ಸಾಧಿಸಲು ಹೊರಟರೆ ಅವರನ್ನು ನಾಶಮಾಡಲು ಟೊಂಕಕಟ್ಟಿ ಸಿದ್ಧರಾಗುವರು

ಈಗ ಮುಕ್ತೇಶ್ವರರು ಸನ್ನದ್ಧರಾದದ್ದು ಕೂಡಾ ಅಂಥ ಮಹಾತ್ಕಾರ್ಯಕ್ಕೆ ತಮ್ಮೊಡನೆ ಅಣ್ಣಪ್ಪಯ್ಯನವರನ್ನು ಎಳೆದುಕೊಂಡಿದ್ದಾರೆ ಅಣ್ಣಪ್ಪಯ್ಯನವರಿಗೆ ವೃದ್ಧಾಪ್ಯದಲ್ಲಾದರೂ ಏನಾದರೊಂದು 'ಹೆಸರು ಉಳಿಸುವ ಕಾರ್ಯ' ಸಾಧಿಸಬೇಕಾಗಿದೆಯೋ ಏನೋ ಅವರೂ ಮುಕ್ತೇಶ್ವರರ ಹಿಂದೆ ಮುಂದೆ ಹೆಜ್ಜೆ ಹಾಕುತಲಿದ್ದಾರೆ "ಯಾವುದಕ್ಕೂ ಈ ಒಂದು ವರುಷ ಹೋಗಲಿ ನನ್ನ ವ್ಯಾಜ್ಯ (ಖಟ್ಲೆ) ಒಮ್ಮೆ ಕೊನೆಗೊಳ್ಳಲಿ ಆ ಮೇಲೆ ನೋಡೋಣ"

ಎಂದು ಒಮ್ಮೊಮ್ಮೆ ಮುಕ್ತೇಶ್ವರರು ಹೇಳಿದರೆ, "ಆಗಲಿ . ಆಗಲಿ ಅದಕ್ಕೇನು ?" ಎಂದು ಅನ್ನುವುದೂ ಅಣ್ಣಪ್ಪಯ್ಯನವರ ಸ್ವಭಾವವೇ ಆಗಿತ್ತು ಒಟ್ಟಿನಲ್ಲಿ ಮುಕ್ತೇಶ್ವರರು ಏನು ಹೇಳುತ್ತಾರೋ ಅದಕ್ಕೆ ಇವರು ತಲೆ ಹಾಕುತ್ತಿದ್ದರು

ಇತ್ತೀಚೆಗೆ ಅಣ್ಣಪ್ಪಯ್ಯನವರ ಮನೆಯಲ್ಲೂ ಅವರ ಸ್ವಭಾವದಲ್ಲೂ ಅಸಾಮಾನ್ಯವಾದ ಬದಲಾವಣೆಗಳು ಆದಂತಿವೆ. ಏಕೆ ಆಗಿಯೇ ಬಿಟ್ಟಿವೆ ಈಗ ಎರಡು ವರುಷಗಳ ಹಿಂದೆ ಅವರ ಮಗನಿಗೆ ಮದುವೆಯಾಯಿತಲ್ಲ ಅಂದಿನಿಂದ ಅಣ್ಣಪ್ಪಯ್ಯ ಬದಲಾದದ್ದು ಅವರಿಗೆ ಸೊಸೆಯ ನಡಾವಳಿಗಳು ಸರಿಬೀಳಲಿಲ್ಲ ಮನೆಯಲ್ಲಿಯ ಸೊಗಸಾದ ಅಚ್ಚುಕಟ್ಟುತನಗಳಿಗೆ ಸೊಸೆಯೂ ಸರಿಹೊಂದಿ ವರ್ತಿಸಲಿಲ್ಲ ಅಣ್ಣಪ್ಪಯ್ಯನವರು ಪ್ರತಿಯೊಂದು ಕಾರ್ಯದಲ್ಲೂ ಸೂಕ್ಷ್ಮತೆ, ಚೊಕ್ಕಟ್ಟು, ಓರಣ ಮೊದಲಾದ ಸದ್ಗುಣಗಳನ್ನು ಇಚ್ಛಿಸುವವರು ಸ್ವತಃ ತನ್ನ ಮಗಳ ಕೆಲಸಗಳೇ ಅವರಿಗೆ ಸರಿಬೀಳುತ್ತಿರಲಿಲ್ಲ ಎಂದ ಮೇಲೆ ಈ ಪರರ ಮಗಳು ಸೊಸೆ ಮಾಡುವ ಕೆಲಸ ಬೊಗಸೆಗಳು ಯೋಗ್ಯವೆನಿಸಬಹುದೇ ? ಅವರ ಮನಸ್ಸಿಗೆ ಸೊಸೆ ನಡೆಯುವ ಭಂಗಿ ಕೂಡಾ ಅಸಹ್ಯತೆಯನ್ನು ತಂದೊಡ್ಡಿತ್ತು

"ಸೇಲೆ ಮಾಡಿ ನಡೆಯುವುದು ಇಲ್ಲಿಯಲ್ಲ!. ಇಲ್ಲಿ ನಾಲ್ಕು ಜನ ವಯಸ್ಸಾದವರು ಬರುತ್ತಾರೆ-ಹೋಗುತ್ತಾರೆ" ಎಂದು ಅಣ್ಣಪ್ಪಯ್ಯ ಸೊಸೆಗೆ ಮದುವೆಯಾದ ಮೂರು-ನಾಲ್ಕು ತಿಂಗಳುಗಳಲ್ಲಿ ಎಚ್ಚರಿಕೆ ಕೊಟ್ಟರು

"ಅತ್ತೆ ಇಲ್ಲದಿದ್ದರೂ—ಅತ್ತೆಗಿಂತ ಹೆಚ್ಚಿನ ಕಿಟಕಿಟಿರೆಪ್ಪಾ ಈ ಮಾವಾವರದ್ದು !" ಎಂದು ಆಕೆ ಮನಸ್ಸಿನಲ್ಲಿ ನೆನೆಸುತ್ತಿದ್ದಳು ದಿನಗಳು ಕಳೆದಂತೆ ಮಾವನ ಅಚ್ಚುಕಟ್ಟುತನದಲ್ಲಿ ಸೊಸೆ ನಡೆಯುವುದೂ ಕಷ್ಟವಾಯಿತು

ಒಮ್ಮೆ ಮಳೆಗಾಲದಲ್ಲಿ ಸೊಸೆ ಸೀರೆ ಒಗೆದು ತಂದು ಮನೆಯೊಳಗೆ ಒಣಗಲು ಹಾಕಿದ್ದಳು ಚೆನ್ನಾಗಿ ಹಿಂಡದಿದ್ದುದರಿಂದ ಸೀರೆಯು ನೀರು ಮನೆಯೊಳಗೆ ಮಳೆಸುರಿಸತೊಡಗಿತ್ತು ಅಣ್ಣಪ್ಪಯ್ಯನವರ ಕಣ್ಣಿಗೇ ಮೊದಲು ಅದು ಬೀಳಬೇಕೆ ? ಸಿಟ್ಟಿನಿಂದ ಕಿಡಿಕಿಡಿಯಾದರು ಅವರು "ಎಲ್ಲಿದ್ದಿ ನಿಮ್ಮಿ ?" ಎಂದು ಗದರಿದರು ಸೊಸೆ ಮಾವನ ಎದುರು

ಬಂದು "ಯಾಕ್ರೀ ಮಾವಾವರ ?" ಎಂದು ಪ್ರಶ್ನಿಸಿದಳು

"ನಿನಗೆ 'ಯಾಕೆ?' ಎನ್ನುವಷ್ಟು ಧೈರ್ಯವೂ ಉಂಟೇ?" ಎಂದು ಒದರುತ್ತ ಒಣ ಹಾಕಿದ ಸೀರೆಯನ್ನು ಬಿಚ್ಚಿ ತೆಗೆದು, ಅವಳ ಎದುರಿಗೆ ನಿಂತು, ಅಲ್ಲಿಯೇ ಹಿಂಡಿ ತೋರಿಸಿದರು!

"ನೋಡು . ನಿನ್ನ ಕಣ್ಣು ಕಾಣುತ್ತದೆಯೋ? ಒಂದು ಕೊಡ ನೀರು ಉಳಿದಿದೆ ಸೀರೆಯಲ್ಲಿ! ಮತ್ಯಾಕೆ ಕರೆದದ್ದು? ಇದಕ್ಕೇ ನೋಡು ಕಣ್ಣು ತೆರೆದು ನೋಡು! ಹೀಗೆಯೇ ಸೀರೆ ಹಿಂಡುವುದು? ಮಳೆಗಾಲದಲ್ಲಿ ಅದು ಹೇಗೆ ಒಣಗಬೇಕು?"

"ಒಣಗದಿದ್ದರs ಪೆಟ್ಟಿಗ್ಯಾಗs ಹೊಸಾ ಸೀರಿ ಅವs—ಲಗ್ನದಾಗ ಬಂದೂವು ಅವುನ್ನ ಉಟ್ಟುಕೋತೀನಿ!" ಎಂದು ಸೊಸೆ ಉತ್ತರಿಸಿದಳು

"ಈ ಧಾರವಾಡದ ಸೊಸೆಯ ಕನ್ನಡ! ಇವಳ ಸೇಲೆ ಇವಳ ಪೌಡರು! ನಮ್ಮ ದಾಸನಿಗೆ ಇವಳನ್ನು ಎಲ್ಲಿಂದ ತಂದು ಕಟ್ಟಿದೆನೋ ತಿಳಿಯದು" ಎಂದು ಅಣ್ಣಪ್ಪಯ್ಯ ಸೀರೆಯನ್ನು ಪುನಃ ಒಣಗಲು ಹಾಕುವಾಗ ಸಂಜೀವಿ ಅಲ್ಲಿಗೆ ಬಂದು "ಛೀ ಅಪ್ಪವರಿಗೆ ಇಷ್ಟೂ ತಿಳಿಯುವುದಿಲ್ಲವೇ?" ಎಂದು ಅವರನ್ನು ಅಲ್ಲಿಂದ ಕಳುಹಿಸಿದಳು

"ಲಕ್ ಮಾವಾವರು ಬಿಡವಾ ಇವರು" ಎಂದು ಸೊಸೆ ಕಿಲಕಿಲನೇ ನಗುತ್ತ ಒಳಗೆ ಕೂತಳು

"ಹಾಗೆಲ್ಲ ಹಿರಿಯರನ್ನು ನೋಡಿ ನಗಬಾರದು ನಿಮ್ಮಿ ಎಷ್ಟೆಂದರೂ ಅವರು ಹಿಂದಿನ ಸಂಪ್ರದಾಯದವರು ನಿಮ್ಮ ಗಟ್ಟದ ಮೇಲಿನ ಫ್ಯಾಶನ್ನುಗಳು ಅವರಿಗೆ ಸರಿಬೀಳುವುದಿಲ್ಲ ಅದಷ್ಟು ನೀನು ಸುಧಾರಿಸಿಕೊಂಡು ನಡೆಯಬೇಕು ಹೀಗೆಲ್ಲ ಮಾಡಿದರೆ ಅವರಿಗೆ ಸಿಟ್ಟು ಬಂದು ಏನಾದರೂ ಅನ್ನಬಹುದು ಅಪ್ಪವರು ಬಹಳ ಸಿಟ್ಟಿನವರು ಅವರಿಗೆ ಎಲ್ಲ ಸ್ವಚ್ಛ—ರುಚಿ ಆಗಬೇಕು ಅಡ್ಡಾತಿಡ್ಡಾ ಕೆಲಸಗಳು ಯಾವುದೂ ಅವರಿಗೆ ಸರಿಬೀಳುವುದಿಲ್ಲ" ಎಂದು ಸಂಜೀವಿ ನಿಮ್ಮಿಗೆ ಬುದ್ಧಿವಾದ ಹೇಳಿದಳು

"ನಿಮಗೇನು ಗೊತ್ತsದರೀ ಒಯ್ನೀ? ಈಗಿನ ದಿವಸಂs ಏನು? ಈಗಿನ ಮಂದಿs ಹ್ಯಾಂಗ ಇರತಾರs? ಅದಕ್ಕ ಸರಿಯಾಗಿ ಈ ಮಾವಂದಿರೂ ಇರಬೇಕಾಗತದs.... .ಈ ಊರ ಮಂದಿ ಬ್ಹಾಳ ಹಿಂದುಳದವರು

ಇವರಿಗ ನೆಟ್ಟಗs ಕನ್ನಡ ಮಾತಾಡಕ ಬರೋದಿಲ್ಲ ನಮ್ಮ ಧಾರವಾಡನs ಭೇಷ ಬಿಡ್ರಿವ್ವಾ ನಾ ಯಾಕs ಈ ಮೂಲಿಗs ಮದ್ವಿ ಮಾಡಕೊಂಡ್ನ್ಯೋ ನನ್ಗs ತಿಳಿವಲ್ದು ನಮ್ಮ ಅವ್ವಾನ ಧಂದೇ ಇದೆಲ್ಲ ನಾ ಈ ಊರಿನs ಬೀಗತನಾನ ಬೇಡಾ ಅಂದಿದ್ದೆ" ಎಂದು ನಿಮ್ಮಿ ತನ್ನ ಪಾಡನ್ನೇ ಹೇಳಿ ಕೊರಗಿ ಕೊಳ್ಳಲು ಪ್ರಾರಂಭಿಸಿದಳು

"ನೀನೇನು ಹೆದರಬೇಡ ನಿಮ್ಮಿ—ಮಾವವರು ಬಯ್ತಾರೆಂದು ನಾನು ಹೇಳಿದ ಹಾಗೆ ಮಾಡುತ್ತ ಬಾ ಅಂದರೆ ನಿನಗೆ ಯಾರು ಏನೂ ಅನ್ನುವುದಿಲ್ಲ ನಿನಗೆ ಯಾರೂ ಚಕಾರ ಶಬ್ದ 'ಶೂ' ಎನ್ನದ ಹಾಗೆ ನೋಡಿ ಕೊಳ್ಳುತ್ತೇನೆ ನೀನು ಧಾರವಾಡದಲ್ಲಿ ಪಟ್ಟ ಸುಖಕ್ಕಿಂತ ಇಲ್ಲಿ ಹೆಚ್ಚು ಸುಖ ಪಡುವಂತೆ ನಾನು ಮಾಡುತ್ತೇನೆ ನೀನೇನು ಚಿಂತಿಸಬೇಡ" ಎಂದು ಸಂಜೀವಿ ನಿಮ್ಮಿಯನ್ನು ಸಂತೈಸಿದಳು

ಸಂಜೀವಿಯ ಸಹಾನುಭೂತಿಯನ್ನು ಕಂಡು ನಿಮ್ಮಿಯಾದರೂ ಬೆರಗು ಪಡದೆ ಇಲ್ಲ ತನ್ನ ಗಂಡನೊಡನೆ ರಾತ್ರಿಯಲ್ಲಿ ಮಾವನ ದೂರು ಒಪ್ಪಿಸು ವಾಗ ಸಂಜೀವಿಯ ಸಹಾನುಭೂತಿಯನ್ನು ಸ್ವಲ್ಪವಾದರೂ ಹೊಗಳದೆಯೂ ಬಿಡಳು—ನಿಮ್ಮಿ ಅವಳಿಗಾದರೂ ಸಂಜೀವಿಯ ಜೀವನ ನೋಡಿ ಕರುಣೆ ಹುಟ್ಟಿತ್ತು ಮಾವನಂತೆ ವರ್ತಿಸುವ ಅಪ್ಪನ ಕೈಕೆಳಗೆ ಇವಳು ಹೇಗೆ ದಿನ ಕಳೆಯುತ್ತಿರಬಹುದೆಂದು ಆಶ್ಚರ್ಯವೆನಿಸಿತ್ತು

ಅಷ್ಟೇ ಅಲ್ಲ, ಒಮ್ಮೆ ನಿಮ್ಮಿಯೇ ಕೇಳಿದ್ದಳು. "ಅಲ್ಲರೀ ನೀವು ಈ ಮಾವಾವರ ಸಂಗಡಾ ಹ್ಯಾಂಗ ಇಷ್ಟ ದಿನಾ ಇದ್ದಿರಿ ?"

"ಯಾಕೆ ?"

"ಮಾವಾವರನs ನೋಡಿದರs ನನಗ ಅಂಜಿಕಿ ಬರ್ತದರಿವ್ವಾ! ಅಯ್ಯೋ ನಾನೊಲ್ಲೆ! ಅವರs ಮಾತೇನು! ಅವರು ಬಯ್ಯೋದೇನು! ಯಾವಾಗಲೂ ಏನೋ ಕೆಲಸಾ ಮಾಡಿಕೋತಾ ಇದ್ದs ಇರತಾರs ಮನ್ಯಾಗ ಕೂತ್ಕೊಂಡು ಹೆಣಮುಕ್ಕಳಾಂಗ ಇದೇನಿದುs ನಿಮ್ಮೂರಿನ 'ಮಡಲಾ' ಹೆಣಿಯೋದು.. ಕಸಪೊರಕೀ ಮಾಡೋದುs ಏನ್ರೀವ್ವಾ ಇದಲ್ಲಾ!"

"ಅವರು ಅಷ್ಟೆಲ್ಲ ದುಡಿಯುತ್ತಾರೆ ಎಂದೇ ನಮಗೆ ದಿವಸವೂ ಹೊಟ್ಟೆ ತುಂಬ ಅನ್ನ ಸಿಗುತ್ತದೆ ಇಲ್ಲದಿದ್ದರೆ ನನ್ನಂಥ ಅನಾಥೆಗೆ ಯಾರು ಕೇಳು

ತ್ತಿದ್ದರು ನಿಮ್ಮಿ? ಅವರು ಕೆಲಸ ಮಾಡಿದರೆ ಕೆಟ್ಟದೇ? ಕೈ ಕೆಸರಾದರೆ ಬಾಯಿ ಮೊಸರು" ಎಂದು ಹೇಳಿ ಸಂಜೀವಿ, ನಿಮ್ಮಿಗೆ ವಿವೇಕೋದಯ ಮಾಡಲು ಯತ್ನಿಸುತ್ತಿದ್ದಳು

"ಅಂದರೂ ನೀವು ಒಳ್ಳೇ ಗಟ್ಟಿ ಮನಷ್ಯಾರು ನೋಡ್ರಿವ್ವಾ ನಿಮ್ಗs ಚೈನಿs ಅನ್ನೋದ ಗೊತ್ತಿಲ್ಲs ನಿಮ್ಮಷ್ಟು ಒಳ್ಳೆ ಹೆಣಮಗಳನs ನಾ ಇಲ್ಲೀ ತನಕ ನೋಡೇ ಇಲ್ಲ" ಎಂದು ನಿಮ್ಮಿಯೂ ಮನವಾರೆ ಸಂಜೀವಿಯ ಆದರ್ಶ ಗುಣಗಳನ್ನು ಹೊಗಳಿದಳು

ನಿಮ್ಮಿಯ ಮದುವೆಯಿಂದ ಅಣ್ಣಪ್ಪಯ್ಯ ಹಾಗೂ ಹೊನ್ನಪ್ಪಯ್ಯನವರ ನಡುವಿನ ಸ್ನೇಹ–ಬಾಂಧವ್ಯಗಳು ಕ್ಷಯ ಹೊಂದುತ್ತ ಬಂದಿದ್ದವು ಕಲಾ ನಿಕೇತನ ಪ್ರಾರಂಭವಾದ ವರುಷವೇ ಅಣ್ಣಪ್ಪಯ್ಯ ಮಗನ ಮದುವೆ ಎಬ್ಬಿಸಿದ್ದರು ಅಷ್ಟೊಂದು ಗಡಿಬಿಡಿಯಿಂದ ಯಾಕೆ ಮದುವೆ ಮಾಡಲಿಕ್ಕೆ ಹೊರಟಿರುವೆ—ಎಂದು ಹೊನ್ನಪ್ಪಯ್ಯ ಒಂದೇ ಮಾತು ಕೇಳಿದ್ದರು ತಮ್ಮನಿಗೆ "ಖುಷಿ ಇದ್ದರೆ ಮದುವೆಗೆ ಬರಬಹುದು, ಇಲ್ಲವಾದರೆ ಬಿಡಬಹುದು" ಎಂದು ಅಣ್ಣಪ್ಪಯ್ಯ ಸ್ವಲ್ಪ ಬಿರುಸಾಗಿ ಅಣ್ಣನಿಗೆ ಉತ್ತರ ಕೊಟ್ಟಿದ್ದರು

ಹೇಗೂ ಹೊನ್ನಪ್ಪಯ್ಯ ತಮ್ಮನೊಡನೆ ಸಮಾಧಾನದಿಂದ ಕೂಡಿಕೊಂಡು ರಾಮದಾಸನ ವಿವಾಹವನ್ನು ಮುಗಿಸಿದರು ಮದುವೆಗೆ ಹೊನ್ನಪ್ಪಯ್ಯ ಒಬ್ಬರೇ ಹೋಗಬೇಕಾಗಿ ಬಂತು ಯಾಕಂದರೆ ರಾಮದಾಸನ ಮದುವೆಯಾದದ್ದು ಎಡಹಿತ್ತಲಲ್ಲಿ ಅಲ್ಲ 'ವೆಂಕಟಾಪುರ'ದ ಪುಣ್ಯ ಕ್ಷೇತ್ರದಲ್ಲಿ ವಿವಾಹ ನಡೆದಿತ್ತು ಖರ್ಚೆಲ್ಲ ಹೆಣ್ಣಿನ ಕಡೆಯವರು ವಹಿಸಿಕೊಂಡಿದ್ದರು ಎಂದಮೇಲೆ ಅಣ್ಣಪ್ಪಯ್ಯನವರ ಸಂತೋಷಕ್ಕೆ ಮೇರೆಯುಂಟೇ? ಮೇಲಾಗಿ ಮುಕ್ತೇಶ್ವರರಂಥ ಧನಾಢ್ಯರ ಸಹಾಯವೂ ಅಣ್ಣಪ್ಪಯ್ಯನವರಿಗೆ ಪದೇಪದೇ ಸಿಗಲು ಸಿದ್ಧವಿತ್ತು

ಇತ್ತ ಹುಡುಗಿಯೂ ರಾಮದಾಸನ ಮನಸ್ಸಿಗೆ ಬಂದಿದ್ದಳು ಹೀಗೆ ಎಲ್ಲವೂ ಅನುಕೂಲವಿರುವಾಗ ಹೊನ್ನಪ್ಪಯ್ಯನವರ ಕಡೆಯಿಂದ ಏನಾದರೂ ಅಡ್ಡಿ ಆತಂಕಗಳು ಬಂದಾವೆಯೇ? ಬಂದರೂ ಅವುಗಳನ್ನು ಕಿವಿಗೆ ಹಾಕಿಕೊಳ್ಳುವಷ್ಟು ನಿಷ್ಠೆ ಅಣ್ಣಪ್ಪಯ್ಯನವರಲ್ಲಿ ಇದ್ದೀತೇ?

"ಆ ಗಟ್ಟದ ಮೇಲೆ—ವೆಂಕಟಾಪುರದಲ್ಲಿ ಯಾಕ ಭಾವಾ ನಮ್ಮ

ದಾಸನ ಮದುವೆ ಮಾಡುವುದು ? ಇಲ್ಲಿಯೇ ನಮ್ಮ ಊರಿನ ಅಶ್ವತ್ಥಪುರ ದೇವಸ್ಥಾನದಲ್ಲಿ ಮಾಡಿಸಬಾರದೇ ? ಸುಮ್ಮನೆ ಬಹಳ ಖರ್ಚಾಗುತ್ತದೆ!" ಎಂದು ಸಾವಿತ್ರಿ ಹೇಳಿಕೊಂಡರೂ ಅಣ್ಣಪ್ಪಯ್ಯ ಕೇಳಲಿಲ್ಲ

"ಹೆಣ್ಣಿನ ಕಡೆಯವರು ಎಷ್ಟೆಂದರೂ ಗಟ್ಟದ ಮೇಲಿನವರು ಅವರು ಹುಟ್ಟಿದ್ದು ಈ ಊರಲ್ಲಿ ಆದರೂ ಅವರು ದಿನ ಕಳೆದು ಧಂದೆ ಮಾಡಿ, ಕೈಯಲ್ಲಿ ನಾಲ್ಕು ಕಾಸು ಮಾಡಿಕೊಂಡದ್ದು ಅತ್ತಲಾಗೆ ಹೋದ ಮೇಲೆ ತಮ್ಮ ಮಗಳ ಮದುವೆಯನ್ನು ಅತ್ತಲಾಗೇ ಮಾಡಿಸಬೇಕೆಂಬುದು ಅವರ ಆಸೆ"

"ನಮ್ಮ ಮಗುವಿನ ಮದುವೆಯನ್ನು ಇತ್ತಲಾಗೆ ಮಾಡಿಸಬೇಕೆಂಬ ಆಸೆ ನಮಗೂ ಇರುವುದಿಲ್ಲವೇ ?"

"ನಿನಗೇನು ಗೊತ್ತುಂಟು ಸಾವಿತ್ರೀ ? ವೆಂಕಟಾಪುರ ಅಂದರೆ ಏನೆಂದು ಮಾಡಿದ್ದಿ ನೀನು ? ಅದು ನಮ್ಮವರ ಪುಣ್ಯ ಕ್ಷೇತ್ರ ಅಂಥಲ್ಲಿ ನಮ್ಮ ಹುಡುಗನ ಮದುವೆಯಾಗುವುದೆಂದರೆ ನಾವು ನಿಜಕ್ಕೂ ಪೂರ್ವ ಜನ್ಮದಲ್ಲಿ ದೊಡ್ಡ ಪುಣ್ಯ ಮಾಡಿ ಬಂದಿದ್ದೇವೆ ಆ ವೆಂಕಟಾಪುರ ಎಲ್ಲಿ ? ಈ ಅಶ್ವತ್ಥಪುರ ಎಲ್ಲಿ ?"

"ಇಲ್ಲಿಂದ ಧಾರವಾಡಕ್ಕೆ ಹೋಗಿ, ಅಲ್ಲಿಂದ ವೆಂಕಟಾಪುರಕ್ಕೆ ಹೋಗುವುದರೊಳಗೆ ನನ್ನಂಥ ವಯಸ್ಸಾದವರ ಗತಿಯೇನಾಗುತ್ತದೋ ಏನೋ"

"ನಾನೆಲ್ಲಿ ಎಲ್ಲರನ್ನೂ ಕರೆದೊಯ್ಯುತ್ತೇನೆ ಎಂದು ಹಟ ಹಿಡಿದಿದ್ದೇನೆ ? ನಮಗೆ ಅತ್ಯಂತ ಹತ್ತಿರದವರ ಮನೆಯವರು ಒಬ್ಬರೋ ಇಬ್ಬರೋ ಬಂದರೆ ಸಾಕು ಮದುವೆಗೆ ಬೇಕಾದಷ್ಟು ಸಭೆ ಅತ್ತಲಾಗೆ ಅವರೇ ಕೂಡಿಸುತ್ತಾರಂತೆ ಮನೆಗೊಬ್ಬರು ಬರಲೇ ಬೇಕು" ಎಂದು ಅಣ್ಣಪ್ಪಯ್ಯ ಹೇಳುವಾಗ ಆ ಹೆಂಗಸಿನ ಆಸೆಗೆ ಬಿಸಿನೀರು ಎರೆದಂತಾಯಿತು ಮಗನ ಮದುವೆಯ ಮಂಗಲ ಕಾರ್ಯವನ್ನು ನೋಡಬೇಕೆಂಬ ಆಸೆ ಅವಳಿಗೆ ಕುತ್ತಿಗೆಯ ವರೆಗೆ ಇತ್ತು ಆದರೆ ಮಾಡುವುದೇನು ? ಅಣ್ಣಪ್ಪಯ್ಯನವರ ವಿರುದ್ಧ ಮಾತಾಡಲು ಅವಳಾರು ? ಹೀಗಾಗಿ ವೆಂಕಟಾಪುರಕ್ಕೆ ಹೊನ್ನಪ್ಪಯ್ಯನವರೊಬ್ಬರೇ ಹೋಗುವುದೆಂದು ನಿಶ್ಚಯವಾಯಿತು ಮದುವೆಯೂ ಮುಗಿಯಿತೆನ್ನಿ.

ಅಂದಿನಿಂದ ಅಣ್ಣತಮ್ಮಂದಿರಲ್ಲಿ ವೈಮನಸ್ಸು ಬೆಳೆಯುತ್ತ ಹೋಯಿತು ಎಲ್ಲವೂ ಅಷ್ಟಕಷ್ಟೇ ಆಗುತ್ತ ಬಂತು. ಅನಿವಾರ್ಯ ಪ್ರಸಂಗಗಳು ಬಂದಾಗ

ಮಾತ್ರ ಅವರು ಇವರಲ್ಲಿ, ಇವರು ಅವರಲ್ಲಿ ಬಂದು ಹೋಗುತ್ತಿದ್ದರು ಇದಕ್ಕೆಲ್ಲ ಪ್ರಬಲವಾದ ಕಾರಣವೆಂದರೆ ಹೊನ್ನಪ್ಪಯ್ಯ ಶಂಕರನ ಬಗ್ಗೆ ಸಹಾನುಭೂತಿ ತೋರಿಸಿ, ಅವನು ಬುದ್ಧಿವಂತನೆಂದು ಹೇಳುತ್ತ ಬಂದದ್ದು ಅಷ್ಟೇ ಅಲ್ಲ ಹೊನ್ನಪ್ಪಯ್ಯ ಅವನಿಗೆ ಹಲವಾರು ರೀತಿಯಿಂದ ಸಹಾಯವನ್ನು ಮಾಡಿದ್ದರು ಇದೆಲ್ಲ ಅಣ್ಣಪ್ಪಯ್ಯನವರಿಗೆ ಸರಿದೋರಲಿಲ್ಲ ಅದಕ್ಕಾಗಿ ಅವರು ಅಣ್ಣನೊಡನೆ ಆ ಬಗ್ಗೆ ಪ್ರಸ್ತಾಪಿಸಿಯೂ ಆಗಿತ್ತು

ಹೊನ್ನಪ್ಪಯ್ಯ ತಮ್ಮನ ಮೂರ್ಖತನಕ್ಕೆ ಮಡಿ ಮಾಡಿದ್ದರು ಹೀಗಾಗಿ ಅಣ್ಣಪ್ಪಯ್ಯವರು ಅಣ್ಣನೊಡನೆಯೂ ವೈಮನಸ್ಸಿನಿಂದ ವರ್ತಿಸಬೇಕಾಯಿತು "ನೋಡು, ಜಾಗ್ರತೆ! ನಿನ್ನ ಮುಖಕ್ಕೆ ಮಸಿ ಹಚ್ಚುವ ಕಾರ್ಯ ಮಾಡಲೂ ಅವನು ಹಿಂಜರಿಯುವವನಲ್ಲ ಯಾರೋ ಹೇಳುತ್ತಿದ್ದರು ನಿಮ್ಮ ಸುಮತಿ ಮತ್ತು ಅವನು ಆ ಪಾದಡ್ಕದ ಗುಡ್ಡದ ಗವಿಯ ಬಳಿಯಲ್ಲಿ ಮಾತಾಡುತ್ತ ಕುಳಿತಿದ್ದರಂತೆ ನಾನು ಮೊದಲೇ ಹೇಳಿದ್ದೇನೆ ಆ ಮೇಲೆ ನನ್ನನ್ನು ದೂರಬೇಡ" ಎಂದು ಅಣ್ಣಪ್ಪಯ್ಯ ಹೇಳಿದ್ದರು

"ನನ್ನ ಮುಖಕ್ಕೆ ನಾನೇ ಮಂಗಳಾರತಿ ಮಾಡಿಸಿಕೊಂಡಾಗಿದೆ! ಬೇರೆಯವರು ಅದನ್ನೇನು ಎತ್ತಲಿಕ್ಕೆ ಉಳಿದಿಲ್ಲ" ಎಂದು ಹೊನ್ನಪ್ಪಯ್ಯನವರೂ ಉತ್ತರಿಸಿದ್ದರು ಹೊರತು, ತಮ್ಮನ ಮಾತುಗಳನ್ನು ನಂಬಲಿಲ್ಲ "ಶಂಕರ ಅಂಥವನಲ್ಲ" ಎಂಬುದು ಹೊನ್ನಪ್ಪಯ್ಯ ಎಂದೋ ಖಚಿತ ಮಾಡಿಕೊಂಡು ಬಿಟ್ಟಿದ್ದರು

ಇತ್ತ ತಮ್ಮನ ಮದುವೆಗೆ ಸಂಜೀವಿ ಕೂಡಾ ಹೋಗಲಿಲ್ಲ "ನಾನೊಬ್ಬಳೇ ಯಾವ ಸೌಭಾಗ್ಯಕ್ಕಾಗಿ ಹೋಗುವುದು? ಅದಕ್ಕೆ ತಕ್ಕಂತೆ ಎಲ್ಲ ಇದ್ದರೆ ಚಂದ ಇಲ್ಲವಾದರೆ ಏನು ಉಪಯೋಗ? ನನ್ನ ಹಣೆಬರಹ ಹೀಗಿದೆ ಎಂದಮೇಲೆ ಯಾರೇನು ಮಾಡಬಲ್ಲರು?" ಎಂದು ಆಕೆ ಮನಸ್ಸಿನಲ್ಲೇ ಬೆಂದುಕೊಂಡಳು ರಾಮದಾಸ ಎಷ್ಟು ಹೇಳಿದ! ಅಣ್ಣಪ್ಪಯ್ಯ ಎಷ್ಟು ಹೇಳಿಕೊಂಡರು!

"ನಿನ್ನ ಗಂಡನಿಗಿಂತ ಹೆಚ್ಚಿನ ರೀತಿಯಿಂದ ಉಡುಗೊರೆ ಮಾಡುವಿಯಂತೆ ಅವನು ಇಲ್ಲದಿದ್ದರೂ—ಇದ್ದಾನೆಂದು ತಿಳಿದುಕೊ ನೀನು ಏನು ಹೇಳುತ್ತಿ ಅದನ್ನೆಲ್ಲ ತಂದುಕೊಡುತ್ತೇನ" ಎಂದು ಅಣ್ಣಪ್ಪಯ್ಯ ಮಗಳಿಗೆ

ಸಮಾಧಾನ ಹೇಳಿದರು

"ನಿಮ್ಮದನ್ನೇ ನಾನು ತೆಗೆದುಕೊಂಡು ನಿಮಗೇ ಉಡುಗೊರೆ ಮಾಡು ವುದಕ್ಕಿಂತ ಸುಮ್ಮನೆ ಇಲ್ಲಿಯೇ ಇರುವುದು ಲೇಸು ಕೆರೆಯ ನೀರು ಕೆರೆಗೆ ಚೆಲ್ಲಿದರೆ ಏನು ಪ್ರಯೋಜನ? ಅವರು ಇದ್ದಿದ್ದರೆ, ಎಷ್ಟು ಸಣ್ಣ ರೀತಿ ಯಿಂದ ಉಡುಗೊರೆಯಾದರೂ ಅದಕ್ಕೆ ಬೆಲೆ ಇತ್ತು ಅದು ನನ್ನ ಸೌಭಾಗ್ಯಕ್ಕೆ ಇಲ್ಲವೆಂದ ಮೇಲೆ ನಾನೇಕೆ ಬರುವುದು?" ಎಂದು ಸಂಜೀವಿ ಮದುವೆಗೆ ಹೋಗಲೇ ಇಲ್ಲ ಮನೆಯನ್ನು ಕಾಯುತ್ತ ಕುಳಿತಳು ಅಣ್ಣ ಪ್ಪಯ್ಯನವರೂ ವಿಶೇಷ ಒತ್ತಾಯಪಡಿಸಲಿಲ್ಲ ಸಂಜೀವಿ ಹೋಗದೆಯೇ ಮದುವೆ ಮುಗಿಯಿತು

ಗಟ್ಟಕ್ಕೆ ಹೋದ ಅಣ್ಣಪ್ಪಯ್ಯ ಅಳಿಯನನ್ನು ಹುಡುಕುವ ಕೆಲಸದಲ್ಲೂ ತೊಡಗಿದ್ದರು ಒಬ್ಬ ಪರಿಚಯದ ವ್ಯಕ್ತಿಯನ್ನು ಕರೆದುಕೊಂಡು ರಾಮ ಚೂರಿಗೂ ಹೋಗಿದ್ದರು ಆದರೆ ಅವರ ಅಳಿಯ ಸಿಗಲಿಲ್ಲ ಅಂತೇ ಹೊನ್ನಪ್ಪಯ್ಯನವರೂ ಮಗ ರಾಘವೇಂದ್ರನೊಡನೆ ಪುಣೆ, ಬೊಂಬಾಯಿಗೂ ಪ್ರಯಾಣ ಬೆಳೆಸಿದ್ದರು ಅವರು ಹೋದದ್ದು ಅಳಿಯನನ್ನು ಕರೆದು ತರ ಲಿಕ್ಕೆಂದು ಆದರೆ ನೋಡಿ ಬಂದದ್ದು ಬೊಂಬಾಯಿ–ಪುಣೆ ಮೊದಲಾದ ಮಹಾ ನಗರಗಳ ಗಲಭೆ–ಗೊಂದಲಗಳನ್ನು

ಅಣ್ಣಪ್ಪಯ್ಯನವರು ತಮ್ಮ ಬೀಗರಿಗೆ ಒಂದು ಸೂಚನೆ ಕೊಟ್ಟೇ ಊರಿಗೆ ಬಂದಿದ್ದರು ಅಂದರೆ ನಾರಾಯಣಯ್ಯ ವರುಷಕ್ಕೊಮ್ಮೆ ಧಾರವಾಡಕ್ಕೆ ಬಂದು ಹೋಗುತ್ತಿದ್ದನಂತೆ ಅವರು ಅಣ್ಣಪ್ಪಯ್ಯನವರ ಅಳಿಯನೆಂದು ಅಲ್ಲಿಯ ಬೀಗರಿಗೆ ಗೊತ್ತಿರಲಿಲ್ಲ, ಈಗ ಗೊತ್ತಾಯಿತು ಅದಕ್ಕಾಗಿ ಫಕ್ಕನೆ ಅವನು ಧಾರವಾಡಕ್ಕೆ ಕಾಲಿಟ್ಟನೆಂದಾದರೆ ಕೂಡಲೆ ತನಗೆ ತಂತಿಯ ಮೂಲಕ ತಿಳಿಸಬೇಕೆಂದು ಅಣ್ಣಪ್ಪಯ್ಯ ಹೇಳಿ ಬಂದಿದ್ದರು ಆ ವರುಷ ಅವರ ಅಳಿಯ ಧಾರವಾಡಕ್ಕೆ ಬರಲೇ ಇಲ್ಲ ಅಣ್ಣಪ್ಪಯ್ಯನವರಿಗೆ ತಂತಿಯೂ ಬರಲಿಲ್ಲ

ಅಣ್ಣಪ್ಪಯ್ಯನವರ ಬೀಗರು ಧಾರವಾಡದಲ್ಲಿ ಮನೆಮಾಡಿ ಬಹಳ ವರುಷಗಳಾಗಿದ್ದವು ಭೀಮರಾವ್ ವಕೀಲರೆಂದರೆ ಧಾರವಾಡದತ್ತಲಾಗಿನ ವರಿಗೆ ತಿಳಿಯುತ್ತಿತ್ತು ಕಲ್ಲಪಾಡಿ ಭೀಮನೆಂದರೆ ಈ ಅಣ್ಣಪ್ಪಯ್ಯನವರ ಘಟ್ಟದವರಿಗ ಪರಿಚಯವಾಗುತ್ತಿತ್ತು ವಕೀಲರು ತಮ್ಮೂರನ್ನು ಮರೆ

ತಿದ್ದರೂ ತಮ್ಮವರ ಬಗ್ಗೆ ಅಭಿಮಾನ ಪಡುತ್ತಿದ್ದರು ತಮ್ಮವರು ದೊಡ್ಡವ ರಾಗಿ ಮುಂದೆ ಬರಬೇಕು ಎಂಬ ಆಕಾಂಕ್ಷೆಯೂ ಅವರಿಗಿತ್ತು

ಮನೆತುಂಬ ಮಕ್ಕಳು ಅವರಿಗೆ ಅವರಲ್ಲಿ ಹಿರಿಯವಳೆಂದರೆ ನಿಮ್ಮಿ ನಿಮ್ಮಿ ಹುಟ್ಟಿದ್ದು ಧಾರವಾಡದಲ್ಲಿ ಅವಳ ಪ್ರಾಯ, ವಕೀಲರು ಬರೆದಿಟ್ಟ ಜಾತಕದ ಪ್ರಕಾರ ಹದಿನಾರು ಅಂತೆ ಧಾರವಾಡ ಮುನಸಿಪಾಲ್ಟಿಯಲ್ಲಿ ನಿಮ್ಮಿಯ ಜನ್ಮದಿನ ದಾಖಲೆಯಾಗಿತ್ತು ಅದರಂತೆ ನೋಡಿದರೆ ನಿಮ್ಮಿಗೆ ೨೦ ವರುಷ ಪ್ರಾಯವಂತೆ ಅದೇನೆ ಇರಲಿ, ನಿಮ್ಮಿಯ ಮದುವೆ ಆಯಿತು ಆ ವಿಷಯ ಈಗ ಯಾಕೆ ? ವಕೀಲರು ಮಗಳನ್ನು ವಿದ್ಯಾವಂತನಿಗೆ ಕೊಡ ಬೇಕೆಂದು ಕಾದು ಕೂತರು ಎಷ್ಟೋ ತಮ್ಮೂರಿನವರನ್ನು ಹುಡುಕಿದರು ಆದರೆ ಅವರೆಲ್ಲ ಒಂದೊಂದು 'ಭವನ' ಇಲ್ಲವೆ 'ಕೆಫೆ' ಅಥವಾ 'ವಿಲಾಸಗಳ' ಒಡೆಯರು ಎಂಬ ಸುದ್ದಿಯನ್ನು ಹಿಂದಿನಿಂದ ಕೇಳಿದೊಡನೆ ವಕೀಲರ ಮನಸ್ಸು ಹಿಂಜರಿಯುತಿತ್ತು

ಹೀಗಿರಲು ವಕೀಲರಿಗೆ ಅಣ್ಣಪ್ಪಯ್ಯನವರ ಮಗ ಮಾಸ್ತರ ಎಂಬ ವಾರ್ತೆ ಅಶ್ವತ ಪುರ ಜಾತ್ರೆಗೆ ಒಮ್ಮೆ ಬಂದಾಗ ತಲ್ಪಿತು ಅಂದೇ ಜಾತಕ ಒಯ್ದು ಮದುವೆಯ ಮಾತುಕತೆ ನಡೆಸಿ, ಹುಡುಗಿಯನ್ನು ತೋರಿಸಿ, ಎಲ್ಲ ವಿಲಾವರಿ ಮಾಡಿದರು

ಮುಂದೆ ಮದುವೆಯ ದಿನವೂ ನಿಶ್ಚಯವಾಯಿತು ರಾಮದಾಸ ಮ್ಯಾಟ್ರಿಕ್ ಆಗಿದ್ದಾನೆಂಬ ಸುದ್ದಿ ಕೇಳಿದ ಮೇಲಂತೂ ವಕೀಲರು ಬೇರೆಯೇ ಕನಸು ಕಟ್ಟಿದ್ದರು ಹಳ್ಳಿಯ ಸಾಲೆಯ ಮಾಸ್ತರ ಎಂದಮೇಲೆ ಎಲ್ಲಿ ಯಾದರೂ ಮುಲ್ಕಿ ಆಗಿರಬಹುದು ಎಂದು ಅವರು ಎಣಿಸಿದ್ದರು ಆದರೂ ಅವನು ಮಾಸ್ತರ ಎಂಬ ಅಭಿಮಾನದಿಂದ ಅವನಿಗೇ ತನ್ನ ಮಗಳನ್ನು ಕೊಡ ಬೇಕೆಂದು ಗಟ್ಟಿಮಾಡಿದ್ದರು

ಮುಲ್ಕಿ ಹಾಗೂ ಮ್ಯಾಟ್ರಿಕ್‌ಗಳಲ್ಲಿ ವಕೀಲರಿಗೆ ಹೆಚ್ಚಿನ ಏರುಪೇರು ಗಳು ಆ ಹೊತ್ತಿಗೆ ಕಂಡುಬರಲಿಲ್ಲ ಆದರೆ ಮ್ಯಾಟ್ರಿಕ್ ಆಗಿದ್ದಾನೆ ದಾಸ ಎಂಬ ಸುದ್ದಿ ಕಿವಿಗೆ ಬಿದ್ದೊಡನೆ ವಕೀಲರಿಗೆ 'ಮ್ಯಾಟ್ರಿಕ್' ಎಂದರೆ 'ಮೂಲ್ಕಿ' ಗಿಂತ ಹೆಚ್ಚಿನದ್ದು ಎಂದು ಗೊತ್ತಾಯಿತು

ವಕೀಲರ ಮಗಳು 'ನಿಮ್ಮಿ' ಎಂದ ಮೇಲೆ ಕೇಳಬೇಕೆ ? ವಕೀಲರ

ಮನೆ ಎಂದ ಮೇಲೆಯೂ ಹೆಚ್ಚು ಹೇಳಬೇಕೆ ? 'ನಿಮ್ಮಿ' ಎಂಬ ಹೆಸರಿನಲ್ಲೇ ನವನಾಗರಿಕತೆಯ ಮೊದಲನೆಯ ಮೆಟ್ಟಿಲಾದ ಸಿನೇಮಾದ ನೆನಪು ಬರುತ್ತದಲ್ಲವೇ ? ವಕೀಲರಿಗೂ ಅವರ ಮನೆಯವರಿಗೂ ಸಿನೀಮಾ ಎಂದರೆ ಪಂಚಪ್ರಾಣ ಅಂತೇ ಅಲ್ಲಿಯ ತಾರೆಯರ ಹೆಸರು ತಮ್ಮ ಮಕ್ಕಳಿಗೆ ಅಂಟಿಸಿದ್ದಾರೆ ಸುಪ್ರಸಿದ್ಧ ಸಿನೇಮಾ ನಟಿಯರ ಹಾಗೂ ನಟರ ಹೆಸರುಗಳೇ ವಕೀಲರ ಮನೆಯಲ್ಲಿ ಕೇಳಬರುತ್ತವೆ ವಕೀಲರ ಮನೆಯಲ್ಲಿ ಎಲ್ಲದಕ್ಕೂ ಆಳು-ಹೋಳುಗಳೇ ಭಾಂಡಿ ತಿಕ್ಕುವುದರಿಂದ ಹಿಡಿದು ಮಕ್ಕಳನ್ನು ಆಡಿಸುವಲ್ಲಿಯವರೆಗಿನ ಕೆಲಸಗಳು ಎಲ್ಲ ಆಳುಗಳ ಮುಖಾಂತರ ಆಗಬೇಕು. ವಕೀಲರ ಹೆಂಡತಿಯ ಬೊಜ್ಜು ಅದಕ್ಕೆ ಕಾರಣವಾಗಿತ್ತೋ ಗೊತ್ತಿಲ್ಲ

ಇಂಥ ಪಟ್ಟಣದ ನಾಗರಿಕತೆಯ ವಾತಾವರಣದಲ್ಲಿ ಬೆಳೆದ ನಿಮ್ಮಿಗೆ ಎಡಹಿತ್ತಲು ಸೇರಿತೇ? ಅಲ್ಲಿ ಆಕೆಗೆ ಒಗ್ಗುವುದಿಲ್ಲ ಎಂದು ವಕೀಲರ ಮನೆಯವರಿಗೂ ನಿಮ್ಮಿಗೂ ಗೊತ್ತೇ ಇತ್ತು ಆದರೆ ವಕೀಲರು "ಮಗಳನ್ನು ಇನ್ನು ಮನೆಯಲ್ಲಿ ಕೂಡಿಸಿಕೊಳ್ಳುವುದು ಸರಿಯಲ್ಲ" ಎಂದು ಅನುಭವ ಪಡೆದುದರಿಂದ ರಾಮದಾಸ ಮಾಸ್ತರರಿಗೆ ಅವಳನ್ನು ಲಗ್ನ ಮಾಡಬೇಕಾಯಿತು

ಯಾಕಂದರೆ, ವಕೀಲರ ಮನೆಗೆ ಬರುವ ಜನರಲ್ಲಿ ಕಕ್ಷಿಗಾರರ ಸಂಖ್ಯೆಗಿಂತ ಕಾಲೇಜ ಸ್ಟೂಡಂಟುಗಳ ಸಂಖ್ಯೆ ಮಿೂರುತ್ತ ಬಂತು ಹಾಗೆಂದು ಆ ಸ್ಟೂಡಂಟ್ಸು ವಕೀಲರ ಎದುರಿಗೆ ಬೀಳುತ್ತಿದ್ದಿಲ್ಲ ವಕೀಲರ ಮನೆಯ ಓಣಿಯಲ್ಲಿ ಕೆಳಗೆ ಮೇಲೆ ಓಡಾಡುತ್ತಿದ್ದರಂತೆ! ಅವರೆಲ್ಲರ ಕಟಿಕಟಿ ತಪ್ಪಿಸಲು ವಕೀಲರು ಅವಸರ ಪಟ್ಟರು ಕೆಲವು ಸ್ಟೂಡಂಟುಗಳಂತು "ನಿಮ್ಮಿಯ ಆ್ಯಕ್ಟಿಂಗ್ ಬೀವುಟಿಫುಲ್" ಎನ್ನುತ್ತ ವಕೀಲರ ಮನೆಯ ಹತ್ತಿರದಿಂದ ಸುಳಿದಾಡುತ್ತಿದ್ದರಂತೆ ಆಗ ಗೊತ್ತಾಯಿತು ವಕೀಲರಿಗೆ ತನ್ನ ಚಿರಂಜೀವಿಗಳಿಗೆ ಸಿನೇಮಾ ತಾರೆಯರ ಹೆಸರನ್ನು ನಾಮಕರ್ಣ ಮಾಡಿದುದರ ಪರಿಣಾಮ ಹೇಗಿದೆ ಎಂದು!

ಒಂದು ದಿನ ಅಂತೂ ವಕೀಲರ ಓಣಿಯಲ್ಲಿ ಕೆಲವು ಸ್ಟೂಡಂಟುಗಳು ಸೇರಿ, ನಿಮ್ಮಿಯ ಪಾತ್ರವಿರುವ ಒಂದು ಸಿನೇಮಾವನ್ನು ಪ್ರಯೋಗಿಸಿ—ವಕೀಲರು ತಲೆ ಎತ್ತದಂತೆ ಮಾಡಿದ್ದರಂತೆ ವಕೀಲರಾದರೂ ಏನು ಮಾಡಲಿಕ್ಕೆ ಬರುತ್ತದೆ ? ಅವರ ವಕೀಲಿಕೆ ಆ ಸ್ಟೂಡಂಟ ರಾಜ್ಯದಲ್ಲಿ ನಡೆದೀತೆ ?

" ನಮ್ಮ ಮಗಳ ಹೆಸರು ತೆಗೆಯಬೇಡಿ " ಎಂದು ವಕೀಲರು ಬಾಯಿ ತೆರೆದರೆ "Cinema Star Nimmi my dear pleader not your daughter Nimmi we mean pleader " ಎಂದು ಹರುಕು ಮುರುಕು ಇಂಗ್ಲೀಷನ್ನೂ ಆ ಸ್ಟೂಡಂಟ್ಸು ಹಾರಿಸಿ ಬಿಡುತ್ತಿದ್ದರು

ಒಂದೆರಡು ಸಲ ನಿಮ್ಮಿಯೂ ಅವರೊಡನೆ ಸಿನೇಮಾಕ್ಕೆ—" ಏಕಥೀ ಲಡಕೀ " ಗೆ ಹೋದದ್ದು ವಕೀಲರಿಗೆ ಗೊತ್ತಾಯಿತು ಅಂದಿನಿಂದ ಅವರ ಚಿಂತೆ ಹೆಚ್ಚಾಯಿತು ಮಗಳ ಹಿಂದೆ ಒಂದು ಹೆಣ್ಣಾಳನ್ನು ಕಳಿಸತೊಡ ಗಿದರು ಒಟ್ಟಿನಲ್ಲಿ ವಕೀಲರಿಗೆ ಸಾಕು ಬೇಕಾಯಿತು " ನಿಮ್ಮಿ " ಎಂಬ ನಾಮಕರಣ ಮಾಡಿ

ನಿಮ್ಮಿ ತನ್ನ ವಿದ್ಯಾರ್ಥಿ ದೆಸೆಯನ್ನೆಲ್ಲ ಸಿನೇಮಾ, ಪೌಡರ, ಸ್ನೋ, ಡ್ರೆಸ್ ವೊದಲಾದ ಆಡಂಬರಗಳಲ್ಲೇ ಕಳೆದಿದ್ದಳು ಕೊನೆಯ ವರೆಗೂ ಅವಳು ಮ್ಯಾಟ್ರಿಕ್ ಪಾಸಾಗಲಿಲ್ಲವಂತೆ ಮ್ಯಾಟ್ರಿಕ್ಕಿನವರೆಗೆ ಹೇಗೂ ಸಾಗಿಸಿದ್ದರು ವಕೀಲರು, ಕ್ಲಾಸ ಮಾಸ್ತರರ ಕಡೆಯಿಂದ ಟ್ಯೂಷನ್ ಹೇಳಿಸಿದ್ದ ರಂತೆ ಆ ಮಾಸ್ತರರಾದರೂ ತಿಂಗಳಲ್ಲಿ ನಾಲ್ಕಾರು ದಿನ ವಕೀಲರ ಮನೆಗೆ ಬಂದು ಟ್ಯೂಷನ್ ಕೊಟ್ಟು ಹೋಗುತ್ತಿದ್ದರಂತೆ ನಿಮ್ಮಿಗ ಫೋರ್ಥದಿಂದ (IV Standard) ನೆವೆಂತ ಸ್ಟ್ಯಾಂಡರ್ಡ ಮುಟ್ಟಿ, ಅಲ್ಲಿ ಎರಡು ಮೂರು ಸಲ ಡುಮ್ಕಿ ಹೊಡೆದರೂ VII ಥೇರಮ್ಮೇ ಬರುತ್ತಿರಲಿಲ್ಲ ಮಾಸ್ತರರಿಗೆ ಅದನ್ನು ಹೇಳಿ, ಹೇಳಿ ಬೇಸರವೂ ಬರುತ್ತಿರಲಿಲ್ಲ ಅವಳಿಗೂ ಅದನ್ನು ಕಲಿತು—ಕಲಿತು ಸಾಕೆನಿಸುವಂತಿಲ್ಲ

ನಿಮ್ಮಿಗೆ ಸಿನೇಮಾದೊಳಗಿನ ' ಲಾರೆಲಪ್ಪಾ ' ' ಸಂಡೇಕೇ ಸಂಡೇ ' ಹಾಡುಗಳಂತು ಬಾಯಿಪಾಠ ಆದರೆ ಸಾಲೆಯ ಅಭ್ಯಾಸ ಅವಳಿಗೆ ಹತ್ತಲೇ ಇಲ್ಲವಂತೆ ಇತ್ತ ವಕೀಲರು 'ಮ್ಯಾಟ್ರಿಕ್ ಪಾಸಾಗು' ಎಂದು ಟ್ಯೂಷನ್‌ಗೆ ತಿಂಗಳಿಗೆ ಹದಿನೈದು ರೂಪಾಯಿ ದಕ್ಷಿಣೆ ಕೊಡುತ್ತಿದ್ದರು ಮನೆಗೆಲಸಗಳನ್ನು ನಿಮ್ಮಿ ಕಣ್ಣಿನಿಂದ ನೋಡುವುದು ಬಿಟ್ಟು ಕಿವಿಯಿಂದ ಅವುಗಳ ಸುದ್ದಿಯನ್ನು ಕೇಳಿರಲಿಲ್ಲ

ಹೈಸ್ಕೂಲಿನಲ್ಲಿ ಕಲಿಯುತ್ತಿದ್ದರೂ ನಿಮ್ಮಿಗೆ ಕಾಲೇಜ ಸ್ಟೂಡಂಟ್ಸ ಜೋಡಿ ಫ್ರೆಂಡಶಿಪ್ಪು ಬೆಳಸಬೇಕೆಂಬ ಇಚ್ಛೆ ಇತ್ತಂತೆ ಆದರೆ ವಕೀಲರ

ಕಾನೂನುಗಳು ಅವಳನ್ನು ತಡೆಯುತ್ತಿದ್ದವು

ಹಾಗೆಂದು ಆತ್ತ ಸ್ಟೂಡಂಟಗಳ ಉಪದ್ರವವನ್ನು ಅವಳು ತಡೆಯು ವುದು ಕಷ್ಟವಾಗದಿರಲಿಲ್ಲ ಹಲವಾರು ಸ್ಟೂಡಂಟ್ಸು ಅವಳಿಗೆ ಲೆಟರ್ ಬರೆದು ಪೋಷ್ಟಿಗೆ ಕಂತು ತುಂಬುತ್ತಿದ್ದರು ಆದರೆ ಅವರ ಲೆಟರುಗಳಿಗೆ ಇವಳು ಉತ್ತರಿಸುತ್ತಿರಲಿಲ್ಲ

ಹೀಗಾಗಿ ನಿಮ್ಮಿ ಒಮ್ಮೆ ತಾಯಿ.ಯೊಡನೆ, "ಅವ್ವಾ ನನ್ನ ಲಗ್ನಾ ಮಾಡಿ ಕೊಟ್ಟುಕಳಿಸಿಬಿಡು" ಎಂದು ತಾನಾಗಿ ಕೇಳಿದಳು ಮಗಳ ಮಾತುಗಳನ್ನು ಕೇಳಿ ತಾಯಿ ದಿಗಿಲು ಬಿದ್ದಳು ಮಗಳ ಮದುವೆಯ ತಯಾರಿ ಭರದಿಂದ ಸಾಗಿತು ಅಂತೂ ಮದುವೆ ಆಯಿತು ನಿಮ್ಮಿ ಎಡಹಿತ್ತಲಿನಂಥ ಹಳ್ಳಿ ಯೂರಿಗೆ ನೇರಬೇಕಾಯಿತು ಅಲ್ಲಿಂದಲೇ ತಂದೆ–ತಾಯಿಗಳಿಗೆ ಪತ್ರಗಳನ್ನು ಬರೆಯುತ್ತ ಇದ್ದಳು—ನಿಮ್ಮಿ

ಮಾವನ ಮನೆಗೆ ಬಂದ ಪ್ರಾರಂಭದಲ್ಲಿ ಸಂಜೀವಿ ತನ್ನ ತಮ್ಮನ ಹೆಂಡತಿಯನ್ನು ರಾಣಿಯಂತೆ ಮೆರೆಸಿದಳು ಅವಳು ಯಾವ ಕೆಲಸಗಳಿಗೂ ಮುಟ್ಟುವಂತಿರಲಿಲ್ಲ "ನಿಮ್ಮಿ" "ಅಮ್ಮಾ" "ಮಗೂ" ಎಂದೇ ಸಂಜೀವಿ ಅವಳನ್ನ ಕರೆಯುತ್ತಿದ್ದಳು ನಿಮ್ಮಿಗೆ ಸಂಜೀವಿಯ ಮೇಲೆ ತಾಯಿಗಿಂತ ಹೆಚ್ಚಿನ ಪ್ರೇಮ ಹುಟ್ಟಿತು ಸಂಜೀವಿಯಾದರೂ ನಿಮ್ಮಿ ಮಾಡಿದುದೇ ನಿಜ ವೆಂದು ತಿಳಿಯುತ್ತಿದ್ದಳು

ಅಣ್ಣಪ್ಪಯ್ಯನವರಿಗೆ ಸೊಸೆಯ ನಾಟ್ಯ ನೋಡಿ ಮೊದಲಿನಿಂದಲೂ ಬೇಸರ ಬಂದಿತ್ತು ಅವರು ಅಂಥ ಹೆಣ್ಣನ್ನು ತರುತ್ತಿರಲಿಲ್ಲ ಮಗನ ಒತ್ತಾಯಕ್ಕೂ ಮತ್ತು ಧಾರವಾಡದ ವಕೀಲರ ಆಗ್ರಹಕ್ಕೂ ಮದುವೆ ಮಾಡಿದ ರೆಂದು ಹೇಳಿದರೂ ತಪ್ಪಾಗದು ಎಲ್ಲಕ್ಕಿಂತ ಮಿಗಿಲಾಗಿ ಅಣ್ಣಪ್ಪಯ್ಯನವರು ಖರ್ಚಿನ ವಿಷಯದಲ್ಲಿ ಗೆದ್ದದ್ದರಿಂದಲೇ ದಾಸನ ಮದುವೆಯಾಗಿತ್ತು ಯಾಕಂದರೆ ಮದುವೆಯ ಸಂಪೂರ್ಣ ಜಮಾಖರ್ಚಿನ ಪಟ್ಟಿ ವಕೀಲರ ಕಾರ ಕೂನನೇ ನೋಡಿಕೊಂಡಿದ್ದ

ಹೀಗಾಗಿ ಅಣ್ಣಪ್ಪಯ್ಯ ನಿಮ್ಮಿಯನ್ನು ಸೊಸೆಯೆಂದು ಆಶೀರ್ವದಿಸಿ ದ್ದರು ದಿವಸಕ್ಕೊಮ್ಮೆಯಾದರೂ ಅವರು ಅವಳ ನಡೆನುಡಿಗಳನ್ನು ವಿಮರ್ಶೆ ಮಾಡದೆ ಇಲ್ಲ. ಅಂಥ ವೇಳೆಯಲ್ಲಿ ಸಂಜೀವಿ ಅವರನ್ನು ಸಮಾಧಾನ ಪಡಿಸಿ,

" ತಾಳು, ಹಾಗೆಲ್ಲ ಒಮ್ಮೆಲೇ ರಂಭಾಟ ಮಾಡಬಾರದು ಅವಳು ಇನ್ನೂ ಸಣ್ಣವಳು ಬುದ್ಧಿ ಕಡಿಮೆ ಪೇಟೆಯಲ್ಲಿ ಬೆಳೆದವಳು ಇಲ್ಲಿಯ ವಾತಾವರಣಕ್ಕೆ ಅವಳಿನ್ನೂ ಕೂಡಿಕೊಂಡಿಲ್ಲ " ಎಂದು ನಿಮ್ಮಿಯ ಬಗ್ಗೆ ವಕಾಲತು ಮಾಡುತ್ತಿದ್ದಳು

ನಿಮ್ಮಿಯು ಧಾರವಾಡದಿಂದ ತಂದ ಸ್ನೋ ಪೌಡರುಗಳ ಭರಣಿಗಳು ಬರಿದಾದವು ನಾಲ್ಕಾರು ದಿನಗಳು ಹಾಗೇ ದಾಟಿದವು. ಗಂಡನೊಡನೆ ಈ ವಿಷಯ ಹೇಳುವುದಕ್ಕಿಂತ ಮೊದಲು ಸಂಜೀವಿಯೊಡನೆ ಉಪಾಯವಾಗಿ ಕೇಳಿದಳು " ಅಲ್ರಿ, ಒಯ್ನಿ ಈ ಊರಾಗ ಸ್ನೋ ಪೌಡರ ಸಿಗತಾವೋ ಇಲ್ಲೋ ? " ಎಂದು

" ಯಾಕೆ ? "

" ಯಾಕಿಲ್ಲ ಮತ್ತ ನಿಮ್ಮ ಮಾರಿ ಸ್ನೋ ಪೌಡರ ಹಚ್ಚಕೊಳದಿದ್ರೂ ಎಷ್ಟು ನುಣುಪಾಗಿ ಅದ ! "

" ಈ ಊರಲ್ಲಿ ಸ್ನೋ ಪೌಡರಿಗಿಂತ ಹೊಟ್ಟೆ ಬಟ್ಟೆಗೆ ಸರಿಯಾಗಿ ಸಿಗುವುದೆ ದೊಡ್ಡದಮ್ಮ ಅಂಥ ಪರದೇಶದ ಹಿಟ್ಟುಗಳನ್ನು ಮುಖಕ್ಕೆ ಹಚ್ಚಿಕೊಂಡೆ ನಮ್ಮವರು ಹಾಳಾಗಲಿಕ್ಕೆ ಹತ್ತಿದ್ದಾರೆ ದೇವರು ಕೊಟ್ಟ ಸೌಂದರ್ಯಕ್ಕೆ ಮನುಷ್ಯನ ಅಲಂಕಾರ ಯಾಕೆ ಹೇಳು ? ಒಂದು ತಿನ್ನುವುದಲ್ಲ ಉಣ್ಣುವುದಲ್ಲ ! ಬರೀ ಮುಖಕ್ಕೆ ಬೂದಿ ಹಚ್ಚಿಕೊಂಡರೆ ಏನು ಪ್ರಯೋಜನ?"

" ಅಂದ್ರೂ ನೀವು ಬೆರ್ಕಿ ಇದೀರಿ ! ನಿಮಗೂ ಈಗಿನ ಫ್ಯಾಶನ್ ಯಾವುದೂ ಸೇರಿಬರೋದಿಲ್ಲ "

" ನಿನಗೆ ಸ್ನೋ ಪೌಡರ ಬೇಕೇ ? ಬೇಕಾದರೆ ಹೇಳು ನಾನು ದಾಸನಿಗೆ ಹೇಳಿ, ಮೂಡುಬಿದ್ರೆಯಿಂದ ತರಿಸಿಕೊಡುತ್ತೇನೆ "

" ಹಂಗ ಅಂದೆ ನಾ ನೀವು ಖರೇನ ಅಂತ ತಿಳ್ಕೋಬೇಡ್ರಿ ನನಗ ಸ್ನೋನು ಬೇಡ, ಪೌಡರೂ ಬೇಡ ನಿಮ್ಮ ಹಂಗ ಸಾದಾ ರೀತಿ ಜೀವನ ಬೇಕಾಗೇದ "

" ಈ ಹಳ್ಳಿಯಲ್ಲಿ ಸ್ನೋ ಪೌಡರ ಹಚ್ಚಿಕೊಂಡರೆ ಯಾರೂ ನೋಡಿ ಆನಂದ ಪಡುವುದಿಲ್ಲ ಬದಲು ಟೀಕೆ ಮಾಡುತ್ತಾರೆ ನೀನು ಹಚ್ಚಿಕೊಂಡ ಸ್ನೋ ಪೌಡರ ನೀನೇ ನೋಡಿಕೊಳ್ಳಬೇಕು "

"ಹೆಂಗ ಆಗ್ಯದ ನೋಡ್ರಿವ್ವಾ ನನ್ನ ಲಗ್ನ ಆದ ವರ್ಷ ನಾ ಇಲ್ಲಿ ಬಂದ ಕೂಡ್ಲೆ ಎಷ್ಟು ಮಂದಿ ನೋಡಿ ನೋಡಿ ಹೋಗ್ತಿದ್ರು ನನ್ನ ಹೋಗುವಾಗ ಏನೇನ ಮಾತಾಡಿಕೋತ ಹೋಗ್ತಿದ್ರೋ ಏನೋ!"

"ಜನರು ಅನ್ನುತ್ತಾರೆ ಅಂತ ನೀನೇನು ಹೆದರಬೇಡ ನಿಮ್ಮಿ ಅದೇ ಜನರು ಇನ್ನು ಮುಂದೆ ನಿನ್ನ ಚೊಕ್ಕತನದ ಸಾದಾ ಜೀವನ ನೋಡಿ ಮೂಗಿನ ಮೇಲೆ ಬೆರಳು ಇಡಬೇಕು" ಎಂದು ಮುಂತಾಗಿ ಹೇಳಿ ಸಂಜೀವಿ ನಿಮ್ಮಿಯ ಸ್ನೋ ಪೌಡರಿನ ಮೇಲೆ ಇದ್ದ ಮೋಹವನ್ನು ಬಿಡಿಸಿದ್ದಳು

ಸಂಜೀವಿಯನ್ನು ಮೊಟ್ಟಮೊದಲು ಕಂಡೊಡನೆ ನಿಮ್ಮಿಗೆ ಆದರ ಭಾವನೆ ಹುಟ್ಟಿತ್ತು ಯಾಕಂದರೆ ಅವಳ ಗಂಡ ಊರು ಬಿಟ್ಟು ಹೋಗಿದ್ದಾನೆ ಅವಳ ಸ್ಥಿತಿ ಚೆನ್ನಾಗಿಲ್ಲ ಅವಳ ಅತ್ತೆಯ ಮನೆಯವರು ಅವಳನ್ನು ಜೀವಂತ ಉಳಿಸಿದ್ದು ಕಷ್ಟ ಹಾಗೆ–ಹೀಗೆ ಎಂಬ ವಾರ್ತೆಗಳು ನಿಮ್ಮಿಗೂ ಗೊತ್ತಾಗಿದ್ದವು

ಅಂತೇ ಸಂಜೀವಿಯ ಅಪಾರವಾದ ಸಹನಶೀಲತೆಯನ್ನು ಕಂಡು ನಿಮ್ಮಿ "ಒಯ್ನೀ, ನಿಮಗs ಸಿಟ್ಟಿಗೇಳೋದs ಗೊತ್ತಿಲ್ಲ ಅಲ್ಲಾ! ನೀವು ಒಮ್ಮ್ಯಾದರೂ ಮಾವಾವರಿಗs ತಿರುಗಿ ಉತ್ತರ ಕೊಟ್ಟದ್ದು ನಾ ಇಷ್ಟು ದಿವಸಾದರೂ ನೋಡೇ ಇಲ್ಲವಲ್ಲ!" ಎಂದು ಕೇಳಿದ್ದುಂಟು ಅದಕ್ಕೆ ಸಂಜೀವಿಯು ತನ್ನ ಪಾಡನ್ನು ನಿಮ್ಮಿಗೆ ಅರುಹಿ ಅತ್ತುದ್ದೂ ಇದೆ ಆದರೆ ತಂದೆಯ ಬಗ್ಗೆ ಒಂದು ಕಟ್ಟ ಶಬ್ದವನ್ನು ಅವಳ ಬಾಯಿ ಉಚ್ಚರಿಸಲಿಲ್ಲ

ದಿನಗಳು ಕಳೆದಂತೆ ಸಂಜೀವಿ ಮತ್ತು ನಿಮ್ಮಿಯರ ನಡುವಿನ ಸ್ನೇಹ ವರ್ಧಿಸುತ್ತಾ ಹೋಯಿತು ಸಂಜೀವಿ ಹೇಳಿದುದನ್ನೆಲ್ಲ ಚಾಚೂ ತಪ್ಪದೆ ನಿಮ್ಮಿ ಕೇಳಲಿಕ್ಕೂ ಆರಂಭಿಸಿದಳು ಆದರೂ ನಿಮ್ಮಿಗೆ ಸಂಜೀವಿಯ ಜೀವನದಲ್ಲಿ ಏನೋ ಒಂದು ವೈಚಿತ್ರ್ಯ ಅಡಗಿಕೊಂಡಿದೆ ಎಂದು ಅನಿಸುತ್ತಿತ್ತು

"ನಿಜವಾಗಿಯೂ ನೀವು ಪುರಾಣದೊಳಗಿನ ಆದರ್ಶ ಸೀತೆ ನೋಡ್ರೀ ಒಯ್ನೀ" ಎಂದೂ ಒಮ್ಮೆ ನಿಮ್ಮಿ ಹೇಳಿದ್ದಳು

"ನನ್ನನ್ನು ಹೊಗಳಬೇಡ ನಿಮ್ಮೀ" ಎಂದು ಸಂಜೀವಿಯೇ ನಿಮ್ಮಿಗೆ ಹೇಳದೆ ಬಿಟ್ಟಿರಲಿಲ್ಲ

"ನಿಮ್ಮನ್ನು ನೆನೆದಾಗ ನನಗೂ ಕೆಟ್ಟೆನಿಸ ಅನಸತದ ಒಯ್ನೀ ಇಷ್ಟು ಕಷ್ಟ ಸಿಕ್ಕರೂ–ಪಟ್ಟರೂ ನೀವು ಎಷ್ಟು ಸಂತೋಷದಿಂದ ಮಾತಾಡತs

ಇರ್ತೀರಿ ಎಷ್ಟು ಚುರುಕಾಗಿ ಕೆಲಸ ಮಾಡತಾ ಇರತೀರಿ ನಿಮ್ಮ ಬಾಯಿ ಯಿಂದ ಮುತ್ತಿನಂಥ ಮಾತು ಹೊರಬೀಳತಾವs ಹೊರತು ನೀವು ಯಾರಿಗೂ ಮನಸು ನೋಯುವ ಹಂಗs ಮಾತs ಆಡೋದಿಲ್ಲ" ಎಂದು ನಿಮ್ಮಿಗೆ ಸಂಜೀ ವಿಯನ್ನು ಹೊಗಳಿದಷ್ಟೂ ಸಾಲುತ್ತಿರಲಿಲ್ಲ

ಆಗ ಸಂಜೀವಿಯು "ನೀನು ಏನೇ ಹೇಳು ನಿಮ್ಮಿ, ಮನುಷ್ಯರಿಗೆ ಸುಖದುಃಖ ಅನ್ನೋದನ್ನು ದೇವರು ಕೊಡದಿದ್ದರೆ ಈ ಲೋಕ ನಡೆಯುತ್ತಿರ ಲಿಲ್ಲ ತಾನಾಗಿ ಕಷ್ಟ ಪಡೆಯದ ಹೊರತು ಮನುಷ್ಯನಿಗೆ ಲೋಕ ಹೇಗಿರು ತ್ತವೆ ಎನ್ನುವುದೂ ತಿಳಿಯುವುದಿಲ್ಲ ಮನುಷ್ಯ ಕಷ್ಟ ಪಟ್ಟರೇನೆ ಅವನು ಜೀವನ ಬೆಳಗಿಸಬಹುದು ಮತ್ತೊಬ್ಬರ ಜೀವನವನ್ನು ಅದರಿಂದ ಬೆಳಗಿಸ ಲಿಕ್ಕೂ ಸಾಧ್ಯವಿದೆ ದೀವದ ಬತ್ತಿ ಸುಟ್ಟು ಹೋಗುತ್ತಿದ್ದರೂ ಬೆಳಕು ಹೊಳೆಯುತ್ತ ಇರುತ್ತದೆ ಹಾಗೇ ಮನುಷ್ಯ ಕಷ್ಟನಷ್ಟಗಳನ್ನು ಅನುಭವಿಸಿ ದರೇನೆ ತನ್ನ ಬಾಳನ್ನು ಬೆಳಗಿಸಬಲ್ಲ" ಎಂದು ವೇದಾಂತದ ಮಟ್ಟಕ್ಕೆ ತನ್ನ ಮಾತುಗಳನ್ನು ಒಯ್ದು ಮುಟ್ಟಿಸುತ್ತಿದ್ದಳು ಅವಳ ಜೀವನದ ಕೊರಗಿನ ಕಥೆಯೆಲ್ಲ ನಿಮ್ಮಿಯ ಕಿವಿಗೆ ದಿನದಿನವೂ ಕೇಳುತ್ತಿತ್ತು

"ನೀನು ಒಳ್ಳೆಯವಳಾಗಬೇಕಮ್ಮ" ಎಂದು ಸಂಜೀವಿ ಹುರಿದುಂಬಿಸಿ ಹರಸಿದಳು ಆದರೆ ನಿಮ್ಮಿ ಅವಳ ಎಲ್ಲ ಉಪದೇಶಗಳನ್ನು ಪಾಲಿಸಿದಳೆಂದು ಹೇಳಲಾಗದು

ಬದಲು ಸಂಜೀವಿಗೆ ನಿಮ್ಮಿ ಹೇಳಿದಳು "ಅಲ್ಲಾ—ನೀವೂ ಅತ್ತಲಾಗs ನಮ್ಮ ಜೋಡಿ ಧಾರವಾಡಕ್ಕs ಬಂದ ಬಿಡ್ರಿ ಇಲ್ಲಿಯ ಹಾಂಗs ಅಲ್ಲೇನು ಕತ್ತಿ ದುಡಧಾಂಗ ದುಡಿಯೋ ಅವಶ್ಯಕತಾ ಇಲ್ಲ ಹ್ಯಾಂಗಾರೂ ನಮ್ಮ ಅಪ್ಪಾ ನಮ್ಮ ಮನಿಯವರಿಗೇs ಒಂದು ನೌಕರಿ ಅಲ್ಲೇ ಹುಡುಕಿ ಕೊಡ್ತೇನ ಅಂತ ಹೇಳ್ಯಾರ" ಎಂದು

ಆದರೆ ಸಂಜೀವಿ ತನ್ನ ಎಡಹಿತ್ತಲು ಬಿಟ್ಟು, ಗಂಡನೊಡನೆ ಬಿಟ್ಟು— ಬೇರಾರೊಡನೆಯೂ ಹೋಗಲಾರೆನೆಂದು ಹೇಳಿದಳು ಅಲ್ಲಪೆ ನಿಮ್ಮಿ ಹೂಡಿದ ಒಳಸಂಚಿನಲ್ಲಿ ಅಡ್ಡ ಸಿಗಲಿಲ್ಲ "ನಿನಗೆ ಒಳ್ಳೆಯದೆಂದು ಎನಿಸಿದರೆ ಹಾಗೆ ಮಾಡಲು ಅಡ್ಡಿ ಇಲ್ಲ ಆದರೆ ನಾನು ಬರುವುದಿಲ್ಲ" ಎಂದು ದೃಢವಾಗಿ ತಿಳಿಸಿದಳು

ಎಡಹಿತ್ತಲಿನ ಸುತ್ತಮುತ್ತಲಿನ ದೃಶ್ಯ ನಿಸರ್ಗ ದೇವಿಯ ನಂದನ ವನದಂತೆ ಇತ್ತು. ಮಳೆಗಾಲದಲ್ಲಂತು ಅಲ್ಲಿನ ಸೊಬಗನ್ನು ವರ್ಣಿಸುವರಾರು ? ಕಣ್ಣು ಚಾಚಿದತ್ತ ದೃಷ್ಟಿ ಮುರಿಯುವ ತನಕವೂ ಹಸಿರು ಹಾಸಿರುತ್ತದೆ. ಎಲ್ಲಿ ನೋಡಿದರೂ ನೀರಿನ ನಲಿದಾಟ. ಅತ್ತ 'ಮದುಮಗಳ ಅಬ್ಬಿ' ಬೊಬ್ಬಿಟ್ಟರೆ ಇತ್ತಲಿಂದ ಅಣ್ಣಪ್ಪಯ್ಯನವರ ಮನೆಯ ಬದಿಯಿಂದಲೇ ಒಂದು ಸಣ್ಣ ತೋಡು ನೀರು ತುಂಬಿ ಓಡುತ್ತಿರುತ್ತದೆ. ಇನ್ನು ಹಸಿರು ನೆಲದ ಮೇಲೆ ಅಲ್ಲಲ್ಲಿ ಬಣ್ಣಬಣ್ಣದ ಹೂಗಳು ಹೇಗೋ ಅರಳಿರುತ್ತವಷ್ಟೆ. ಯಾವಲ್ಲಿ ನೋಟವಿಟ್ಟರೂ ಸೌಂದರ್ಯ ರಾಶಿಯೇ ಕಾಣಬೇಕು. ಕಾಡಿನಿಂದ ನಾಡಿನವರೆಗೂ ನೀರಿನ ನಾಳಗಳು ಹರಿದು ಹೋಗಿರುವ ಬೆಡಗನ್ನು ಕಂಡ ಕಣ್ಣುಗಳು ಕಲ್ಪನೆಯ ಕಾವ್ಯವನ್ನೂ ಮರೆಯಬಹುದು. ಸುತ್ತಲಿನ ಬೆಟ್ಟದೊಳಿಗಳೂ ಹಸಿರು ಹೊದ್ದುಕೊಂಡು ಮಲಗಿರುತ್ತವೆ. ಎಲ್ಲಿ ನೋಡಿದರೆ ಅಲ್ಲಿ ಉತ್ಸಾಹದ ಹೊಳೆಯೇ ಹರಿಯುತ್ತಿರುತ್ತದೆ. ಸೊಗಸಿನ ಆಭರಣ ತೊಡದ ತುಂಡು ಪ್ರಕೃತಿಯಲ್ಲಿ ಕಾಣಿಸದು.

ಆದರಲ್ಲೂ ನಾಲ್ಕಾರು ದಿನಗಳಿಗೊಮ್ಮೆ ನೆರೆ ಬಂದಾಗ ಕೆಂಪು ನೀರು ನದಿ ತೋಡುಗಳಲ್ಲಿ ಹರಿಯುವಾಗ ಜನ ಪಡುವ ಆನಂದ ಎಷ್ಟು! ಅಲ್ಲಿಯ ದೃಶ್ಯವಾದರೂ ಎಂತಹದು ! ಒಮ್ಮೊಮ್ಮೆ ತುಂಬಿದ ನದಿ ಕೆಂಪು ನೀರನ್ನು ಎಳೆದುಕೊಂಡು ಒಯ್ಯುವಾಗ ಪಟ್ಟಣಗಳಲ್ಲಿ ಧೂಳಿ ತುಂಬಿ ಕೆಂಪಾಗಿ ಕಾಣುವ ವಿಶಾಲವಾದ ರಸ್ತೆಗಳು ಕಾಣುವಂತೆ ಶೋಭಿಸುತ್ತಿರುತ್ತದೆ. ನಿಸರ್ಗ ರಮಣಿಯ ಅನಂತ ಭಂಗಿಗಳನ್ನೂ ಅಲ್ಲಿ ಕಾಣಬಹುದು.

ಒಂದೊಂದು ದಿನ ಬಿರುಗಾಳಿ ಬಿಟ್ಟಿತೆಂದರೆ ಕಾಡು ಗುಡ್ಡಗಳಲ್ಲಿಯ ಮರ ಗಿಡಗಳನ್ನು ಮುರಿದು ಮುಂದೋಡುತ್ತ ಅದು ಹೋಗುವಾಗ ಸ್ಪಷ್ಟವಾದ ಮಾರ್ಗವನ್ನೇ ಮಲಗಿಸಿ ಮಾಯವಾಗುತ್ತದೆ. ದಿಕ್ಕುದೆಸೆಯಿಲ್ಲದೆ ತೆಂಗು-ಕಂಗುಗಳು ಮುರಿದು ಬೀಳುತ್ತವೆ. ರೌದ್ರ-ರಮಣೀಯತೆಗಳು ಹೀಗೆ ಸೃಷ್ಟಿಯಲ್ಲಿ ವೇಗವಾಗಿ ತಾಂಡವವಾಡುವ ದಿನಗಳೆಂದರೆ ಮಳೆಗಾಲದವುಗಳೇ.

ಇಂಥ ದಿನಗಳಲ್ಲಿ 'ಮದುಮಗಳ ಅಬ್ಬಿ' ಯನ್ನು ಏನೆಂದು ಕರೆಯಬೇಕೋ ತಿಳಿಯದು. ಹರಿಯುವ ನೆರೆಯ ನೀರಲ್ಲೂ ಉರಿ ಇದೆಯೋ ಅನ್ನುವಷ್ಟು ಭೀಕರವಾದ ಕೆಂಪು ಬಣ್ಣವನ್ನು ಮಿಂಚಿಸಿಕೊಂಡು 'ಮದುಮಗಳ

ಅಬ್ಬಿ' ಒಯ್ಯಾರ ಒನಪುಗಳಿಂದ ಓಡುವಳೋ, ನೆಗೆಯುವಳೋ ಅಥವಾ ಏರುವಳೋ ತಿಳಿಯದು! ಅವಳ ಮುಂದೆ ಸ್ವಲ್ಪ ದೂರದಲ್ಲಿ 'ಬಂಟಕಲ್ಲು'ಗಳು ಭೂಮಾಕಾರವಾಗಿ ಹೊಟ್ಟೆಯುಬ್ಬಿಸಿಕೊಂಡು ಬಿದ್ದಿರುತ್ತವೆ ಅವುಗಳನ್ನು ತನ್ನ ನೀರ ನಿರಿಗೆಗಳಿಂದ ಕಟ್ಟಿ ಕಾಣದಂತೆ ಮಾಡುವಳು ಅವುಗಳ ಮೇಲೆ ಏರಿ ಕೂಡುವಳು! ಎಂಥ ಭೀಷಣ ಕೃತ್ಯ ಅವಳದು ಎಂದ ಕಾಯಕ ಅವಳದು! ಒಂದು ನಿಮಿಷವೂ ಬಿಡುವು ಇಲ್ಲದೆ ಬಿಳನಗ ಬೀರಿಬೀರಿ, ನೀರ ನಿರಿಗೆಗಳನ್ನು ತೂರಿ ತೂರಿ ನೃತ್ಯಗೈಯ್ಯುವ ಅವಳ ಸೊಗಸೇನು!

ಈ ಮದುಮಗಳ ಅಬ್ಬಿಯ ಸೌಂದರ್ಯ ನೋಡಿ ಹಿಗ್ಗಿದವಳು ನಿಮ್ಮಿ ಸಂಜೀವಿಯಂತು ದಿನಕ್ಕೊಮ್ಮೆಯಾದರೂ ಅಬ್ಬಿಯ ಬಳಿ ಹಾದು ಹೋಗದೆ ಇಲ್ಲ

ಒಮ್ಮೊಮ್ಮೆ ಅವಳ ಬೋರ್ಗರೆಯುವ ನಾದದೊಡನೆ ತನ್ನ ಕಲ್ಪನೆಯ ಮಾತುಗಳನ್ನು ಕೂಡಿಸಿ ಅವಳೊಡನೆ ಮಾತಾಡುವುದೂ ಉಂಟು ಕೆಲಸ ಇರಲಿ, ಇಲ್ಲದಿರಲಿ—ಅಬ್ಬಿಗೆ ಹೋಗದೆ ನಿಮ್ಮಿಯೂ ಬಿಡಳು

ಸಾಮಾನ್ಯವಾಗಿ ಇಬ್ಬರೂ ಯಾವುದಾದರೂ ಒಂದು ಸಣ್ಣ ಮನೆಗೆಲಸ ತೀರಿಸಲು ಅಬ್ಬಿಗೆ ಹೋಗುವರು ಹೆಚ್ಚೇನು ಒಂದು ಸೌಟು ತಿಕ್ಕಬೇಕಾದರೂ ಅಬ್ಬಿಗೇ ಹೋಗುವಳು ನಿಮ್ಮಿ ಇನ್ನು ದಿನದ ಪಾತ್ರೆ-ಪರಡಿಗಳನ್ನು ತೊಳೆಯುವುದಂತು ಅಬ್ಬಿಯಲ್ಲೇ ಸಂಜೀವಿ ಮತ್ತು ನಿಮ್ಮಿ ಕೂಡಿಯೇ ಮನೆಯಿಂದ ಪಾತ್ರೆಗಳನ್ನು ತರುವರು ಆದರೆ ಸಂಜೀವಿ ನಿಮ್ಮಿಗೆ ಪಾತ್ರೆಗಳನ್ನು ತಿಕ್ಕಲು ಕೊಡುವುದಿಲ್ಲ ಆ ಹೊತ್ತಿನಲ್ಲಿ ನಿಮ್ಮಿಯು ಅಬ್ಬಿಯೊಳಗಿನ ನುಣುಪಾದ ಬಣ್ಣಬಣ್ಣದ ಕಲ್ಲುಗಳನ್ನು ಹೆಕ್ಕಿಕೊಂಡು ಉಡಿಯಲ್ಲಿ ತುಂಬಿಸುವುದೂ ಉಂಟು ಕಲವೊಮ್ಮೆ ಸುಂದರವಾದ ಶಿಲೆಯ ತುಂಡು ರಮಣೀಯವಾಗಿ ಕಂಡು ನಿಮ್ಮಿಯ ಮನಸ್ಸನ್ನು ಮೋಹಿಸಿದರೆ ಕೂಡಲೇ ಸಂಜೀವಿಯ ಬಳಿಗೆ ಓಡಿಬರುವಳು

"ಒಯ್ನೀ ಈ ಕಲ್ಲು ಎಷ್ಟು ಚೆಂದರೀ! ಹಾ! ಎಷ್ಟು ನುಣುಪು ಬೆಣ್ಣೆಯ ಹಾಂಗs ಅದs, ಅಯ್ಯೋ! ಎಷ್ಟು ಸುಂದರ!" ಎಂದು ನಿಮ್ಮಿ ಆ ಕಲ್ಲನ್ನು ವರ್ಣಿಸುವಳು

ನಿಮ್ಮಿಯು ಹಾಗೆಲ್ಲ ಆನಂದದಿಂದ ಬಣ್ಣದ ದುಂಡುಕಲ್ಲುಗಳನ್ನು ಅಬ್ಬಿ

ಯಿಂದ ಆರಿಸುವುದನ್ನು ನೋಡಿ, ಸಂಜೀವಿಯು ಮನಸ್ಸಿನಲ್ಲೇ ತನ್ನ ಹಿಂದಿನ ಜೀವನವನ್ನು ನೆನೆಸಿಕೊಳ್ಳುವಳು ಅವಳ ತಾಯಿ ಈಗ ಇವಳು ಹೇಗೆ ಮಡಿಕೆ ತೊಳೆಯುತ್ತಿದ್ದಳೋ ಹಾಗೆ ತೊಳೆಯುತ್ತಿರುವಾಗ, ಅವಳೂ ನಿಮ್ಮಿಯಂತೆ ಸುಂದರವಾದ ಕಲ್ಲುಗಳನ್ನು ಆರಿವೆಯಲ್ಲಿ ಕಟ್ಟಿಕೊಳ್ಳುತ್ತಿದ್ದದ್ದು, ಅವುಗಳನ್ನು ಮುದ್ದಿಸುತ್ತಿದ್ದದ್ದು—ಎಲ್ಲವೂ ಸಂಜೀವಿಯ ನೆನಪಿಗೆ ಬಂದಿತು

ಮಳೆಗಾಲ ಮುಗಿಯುವ ವರೆಗೂ—ಮುಗಿದ ಮೇಲೆ ಎಷ್ಟೋ ದಿನಗಳ ಪರ್ಯಂತ ನಿಮ್ಮಿ ಮತ್ತು ಸಂಜೀವಿಯರು ಅಬ್ಬಿಯಲ್ಲಿ ಆನಂದದಿಂದ ದಿನದ ಕೆಲವು ತಾಸುಗಳನ್ನು ಕಳೆಯುತ್ತಿದ್ದರು ಸಂಜೀವಿಗಂತು ಮಳೆಗಾಲ ಬಂದಿತೆಂದರೆ—ಅದು ಹೇಗೆ ಹೋಯಿತೆಂಬುದೂ ತಿಳಿಯುವುದಿಲ್ಲ ಆನಂದದಿಂದ ಅಷ್ಟು ದಿನಗಳು ಅಬ್ಬಿಯ ಸ್ನೇಹದಿಂದ ಹಾರಿ ಹೋಗುತ್ತವೆ ಬೇಸಗೆಯ ಕಾಲವೆಲ್ಲ ಮಳೆರಾಯನನ್ನೇ ಅವಳು ಬೇಡಿಕೊಳ್ಳುತ್ತಿದ್ದಳು ಈಗ ಕೂಡಾ, ಈ ನಡುವಯಸ್ಸಿನಲ್ಲಿ ಅಬ್ಬಿಯ ಮೋಹ ತನಗೆ ಬಿಡದಲ್ಲ—ಎಂದು ಸಂಜೀವಿ ಆಶ್ಚರ್ಯಪಡುವಳು

ಕೆಲವು ವರುಷಗಳ ಹಿಂದೆ ಬೇಸಗೆಯಲ್ಲಿ ಸಂಜೀವಿ ಒಮ್ಮೆ ಅಬ್ಬಿಯಲ್ಲಿ ಹೆದರಿದ ಸಂಗತಿಯೂ ಅರ್ಧಮರ್ಧ ನಿಮ್ಮಿಗೆ ಗೊತ್ತಾಯಿತು ಆದರೆ ಅದನ್ನು ಪೂರ್ಣವಾಗಿ ಸಂಜೀವಿ ಹೇಳಿರಲಿಲ್ಲ ಅದಕ್ಕಾಗಿ ನಿಮ್ಮಿ ನಾಲ್ಕಾರು ದಿನಗಳಲಾಗಾಯ್ತು ಸಂಜೀವಿಯನ್ನು ಕೇಳಿಕೊಳ್ಳುತ್ತಿದ್ದಳು ಅಬ್ಬಿಗೆ ಬಂದ ಹೊತ್ತಿಗೇ ನಿಮ್ಮಿಗೆ ಹಿಂದೆ ಸಂಜೀವಿ ಅಲ್ಲಿ ಯಾಕ ಹೆದರಿರಬಹುದು ಎಂಬ ಪ್ರಶ್ನೆ ತಲೆಯಲ್ಲಿ ಬರುತ್ತಿತ್ತು ಕೂಡಲೆ " ಒಯ್ನಿ ನೀವು ಆ ಸುದ್ದಿಯನ್ನು ಹೇಳಲೇ ಇಲ್ಲವಲ್ಲ " ಎಂದು ನಿಮ್ಮಿ ಕೇಳುತ್ತಿದ್ದಳು " ಏನು ಬಿಡು ವ ಗೂ ಆದನ್ನೆಲ್ಲ ಹೇಳಿ ಏನು ಪ್ರಯೋಜನ? " ಎಂದು ಸಂಜೀವಿ ಮಾತನ್ನು ತೇಲಿಸಿ ಬಿಡುತ್ತಿದ್ದಳು

ಇಂದು ನಿಮ್ಮಿ ಒಂದು ಉಪಾಯ ಹೂಡಿದಳು ಮಧ್ಯಾಹ್ನ ಊಟವಾದ ಕ್ಷಣಕ್ಕೆ ಅಬ್ಬಿಗೆ ಮಡಿಕೆಗಳನ್ನು ಹಿಡಿದುಕೊಂಡು ಹೊರಟಳು

ಆಗ ಸಂಜೀವಿ, " ನೀನು ಯಾಕೆ ಒಯ್ಯುತ್ತಿ? ನಾನು ಒಯ್ಯುತ್ತೇನೆ ಅಷ್ಟೇಕೆ ಅವಸರ ನಿಮ್ಮೊ? " ಎಂದು ಕೇಳಿದಳು ಆದರೂ ನಿಮ್ಮಿ ಸಂಜೀವಿಯ ಮಾತಿಗೆ ಕಿವಿಗೊಡಲಿಲ್ಲ ಮಡಿಕಗಳನ್ನು ಅಬ್ಬಿಗೆ ಒಯ್ದೇ ಬಿಟ್ಟಳು.

ಅವಳಿನ್ನು ಅವುಗಳನ್ನು ತೊಳೆದು ಕೈನೋವು ಮಾಡಿಕೊಳ್ಳುತ್ತಾಳೆಂದು ಬಗೆದು ಮರುಕಪಟ್ಟು ಸಂಜೀವಿಯೂ ಅವಳ ಹಿಂದಿನಿಂದ ಹೋದಳು ಹೋದ ವಳೇ ಮಡಿಕೆಗಳನ್ನು ತಿಕ್ಕುವುದಕ್ಕೂ ಆರಂಭ ಮಾಡಿದಳು

"ನೀನು ತಿಕ್ಕಬೇಡ ನಿಮ್ಮಿ" ಎಂದು ಸಂಜೀವಿ ಹೇಳಿಕೊಂಡರೂ ಉಪಯೋಗವಾಗಲಿಲ್ಲ ಅಂತೂ ಇಬ್ಬರೂ ಕೂಡಿ ಮಡಿಕೆಗಳ ಮುಸುರೆ ಯನ್ನು ತೊಳೆದು ಸ್ವಚ್ಛ ಮಾಡಿದರು

"ಇನ್ನು ಹೋಗೋಣ" ಎಂದಳು ಸಂಜೀವಿ

"ನಾನು ಬರುವುದಿಲ್ಲ" ಎಂದು ಅಲ್ಲಿಯೇ ಕೂತಳು ನಿಮ್ಮಿ

ಇವಳಿಗೇನಾಯಿತಪ್ಪ—ಎಂದು ಸಂಜೀವಿ "ಯಾಕೆ ಮಗೂ ?" ಎಂದು ಪ್ರಶ್ನಿಸಿದಳು

"ನಾನು ಬರುವುದಿಲ್ಲ, ನೀವು ಹೋಗ್ರಿ"

"ಅದೇನು ?"

"ನೀವು ಹೋಗ್ರಿ"

"ಅಬ್ಬಿ ನಿನ್ನ ಕಣ್ಣಿಗೆ ಅಷ್ಟೊಂದು ನೊಗಸಾಗಿ ಕಂಡಳೇ? ಅವಳ ಹತ್ತಿರದಿಂದ ಎದ್ದು ಬರಲು ನಿನಗೆ ಮನಸ್ಸು ಬಾರದೇ ?"

"ಹೌದು"

"ಇದು ಒಳ್ಳೆಯ ಲೆಕ್ಕ! ನೀನು ಧಾರವಾಡಕ್ಕೆ ಹೋಗುವವಳು ಅಲ್ಲವೋ? ಅಲ್ಲಿ ಎಲ್ಲಿಂದ ಬರಬೇಕು ಈ ಅಬ್ಬಿ ?"

"ಹೋಗುವಾಗ ಇಲ್ಲಿಂದ ಅಬ್ಬೀನ ತುಡುಗು ಮಾಡ್ಕೊಂಡು ಒಯ್ತೇನಿ!"

"ಸಾಯಲಿ ಬಿಡು ನಿಮ್ಮಿ ಎಲ್ಲ ಮಾತು. ನಡೆ—ಮನೆಗೆ ಹೋಗೋಣ ಅಲ್ಲಿಯೇ ಮಾತಾಡಿಕೊಂಡು ಕೂಡೋಣಂತೆ"

"ನಾನಿಲ್ಲೇ ಕೂಡುವಾಕಿ!"

"ಇದೇನು ಮಾತಾಡುತ್ತಿ ವಿಚಿತ್ರ ?"

"ವಿಚಿತ್ರ ಅಲ್ಲ! ನೀವು ಈಗ ನಾ—ಹೇಳಿದ ಪ್ರಶ್ನೆಗs ಉತ್ತರಾ ಕೊಡುತ್ತಿರೋ ಇಲ್ಲಾಂದ್ರs ನಾ ಅಬ್ಬಿಗs ಜಿಗೀತೇನಿ!"

"ಛೀ! ಅಂಥದೇನಮ್ಮ ಅದು ?"

" ನೀವು ಹೇಳು ಅಂದ್ರತ ಹೇಳತೇನಿ "

" ಹೇಳು "

" ಹಂಗಾರ್ತ ನೀವು ಹಿಂದೊಮ್ಮೆ ಅರ್ಧವುರ್ಧ ಹೇಳಿದ ನಿಮ್ಮ ಅಬ್ಬೀ ಕಥೀ ಹೇಳ್ರಿ "

" ಅಬ್ಬೀ ಕಥೆ "

" ಅಹುದು ! "

" ಅದು ಯಾವುದು ನಿಮ್ಮಿ ? "

" ಅಂದೊಮ್ಮೆ ನೀವು ಅಂಜಿ—ಇಲ್ಲೇ ಬಿದ್ದಿದ್ರಂತಲ್ಲಾ! ಅದ್ರ ಕಥೀ "

" ಹೋ ! ಅಷ್ಟೆಯೋ !" ಎಂದು ಸಂಜೀವಿ ಅಲ್ಲಿಯೇ ಹತ್ತಿರ ಇರುವ ಇನ್ನೊಂದು ಕಲ್ಲಿನ ಮೇಲೆ ಕುಳಿತಳು

" ಮನೆಗೆ ಹೋಗೋಣ—ಅಲ್ಲಿಯೇ ಹೇಳುತ್ತೇನೆ " ಎಂದಳು ಸಂಜೀವಿ

" ಬೇಡ "

" ಇಲ್ಲಿ ಈ ನೀರಿನ ಸಪ್ಪಳದಿಂದ ಮಾತುಗಳು ಸ್ಪಷ್ಟವಾಗಿ ಕೇಳಿಸುವುದಿಲ್ಲ "

" ಕೇಳಿದಷ್ಟ್ರ ಸಾಕು ಆ ಅಬ್ಬಿನೂ ಒಂದಿಷ್ಟು ಕೇಳವಳ್ಯಾಕ ? "

" ಆಯಿತಮ್ಮ" ಎಂದು ಸಂಜೀವಿ ತನ್ನ ಕಥೆಯನ್ನು ಹೇಳಲಿಕ್ಕೆ ಆರಂಭಿಸಿದಳು ಅದರಲ್ಲಿ ತನ್ನ ತಂದೆಯ ಪ್ರೀತಿಯ ಪಾತ್ರವನ್ನು ಹಿರಿದು ಮಾಡಿ ವಿವರಿಸಿದಳು ಅಂದು ಆವಳಿಗೆ ಆ ಅಬ್ಬಿಯ ಭೀಕರ ಹಾಗೂ ದುಃಖ ದಾಯಕವಾದ ಅವಸ್ಥೆಯನ್ನು ನೋಡಿ—ತನ್ನ ಬಾಳೂ ಅವಳಂತೆ ಇದೆ ಎಂದು ಅನಿಸಿದ್ದು, ಆಗ ಮನಸ್ಸಿನಲ್ಲಿ ಒಮ್ಮೆಲೇ ಹೇಗೂ ಭಯವಾದದ್ದು, ತನ್ನ ಗಂಡನೇ ಆ ನೀರಿನಮಧ್ಯದಲ್ಲಿ ಕಾಣಿಸಿದ್ದು, ಅವನು ತಪಸ್ಸುಮಾಡುತ್ತ ಕೂತು ತನ್ನನ್ನು ದೂಡಿದ್ದು—ಆಗ ಇವಳಿಗ ಭೀತಿಯಾಗಿ ಮೂರ್ಛೆಬಂದ ಎಲ್ಲ ಸಂಗತಿಯನ್ನು ವಿವರಿಸಿ ಹೇಳಿದಳು

ಎಷ್ಟೋ ಹೊತ್ತಿನವರೆಗೆ ನಿಮ್ಮಿಯೂ ಸಂಜೀವಿಯ ಮಾತುಕತೆಗಳನ್ನು ಕೇಳುತ್ತ ಕೂತಿದ್ದಳು ಇದೇ ರೀತಿಯಲ್ಲಿ ನಿಮ್ಮಿ-ಸಂಜೀವಿ ಅತ್ತೆಯ ಮನೆ

ಯಲ್ಲಿ ಪಟ್ಟಬವಣೆಯ ಕತೆಯನ್ನು ಕೇಳಿದ್ದಳು

ಇಂದು ನಿಮ್ಮಿಗೆ ಅಪಾರವಾದ ಕರುಣೆ ಸಂಜೀವಿಯ ಮೇಲೆ ಹುಟ್ಟಿತು "ಒಯ್ನೀ, ನಾನು ನಿಮ್ಮವರನ್ನು ಹೇಗಾದರೂ ಮಾಡಿ ಹುಡುಕಿ ತರಲಿಕ್ಕೆ ನಮ್ಮ ಅಪ್ಪಗs ಹೇಳ್ತೀನs ನೀವೇನು ಕಾಳಜಿ ಮಾಡಬೇಡ್ರಿ" ಎಂದು ಹೇಳಿದಳು

"ನನಗೆ ಅತ್ತೆ ಮನೆ, ಅಪ್ಪನ ಮನೆ ಎರಡೂ ಒಂದೇ" ಎಂದು ಹೇಳು ವಾಗ ಸಂಜೀವಿಯ ಕಣ್ಣಲ್ಲಿ ನೀರೂರಿತ್ತು

ಅಲ್ಲಿಯ ಸೌಂದರ್ಯವನ್ನೆಲ್ಲ ನೋಡಿ ನಿಮ್ಮಿಯೂ ತನ್ನ ಊರು ಚಂದ ವೆಂದು ಅಭಿಮಾನ ಪಟ್ಟುಕೊಂಡಿದ್ದಳು ದಿನವೂ ಎಲ್ಲಿಯಾದರೂ ಗುಡ್ಡ ಬೆಟ್ಟ ಬಯಲುಗಳನು ನೋಡಲು ಅವಳು ಸಂಜೀವಿಯೊಡನೆ ಹೊಗುತ್ತಿದ್ದಳು ಸಂಜೀವಿಯಾದರೂ ಪ್ರೀತಿಯಿಂದ ಅವಳಿಗೆ ಅಲ್ಲಿಯ ಸೌಂದರ್ಯದ ರಹಸ್ಯವನ್ನು ವಿಸ್ತರಿಸಿ ಹೇಳುತ್ತಿದ್ದಳು

ಇಂತಿರಲು ನಿಮ್ಮಿಗೆ ಸಂಜೀವಿಯನ್ನು ಒಬ್ಬಳನ್ನೇ ಬಿಟ್ಟು ಹೇಗೆ ತಾನು ಧಾರವಾಡಕ್ಕೆ ಹೋಗಬೇಕೆಂಬ ಸಮಸ್ಯೆಯೂ ಬಂದೊದಗಿತು ಆದರೂ ಅವಳ ಮನಸ್ಸು ಅಣ್ಣಪ್ಪಯ್ಯನವರಂಥ ಮಾವನ ಮನೆಯಲ್ಲಿ ಇರಲು ಒಪ್ಪದು ಹೀಗಾಗಿ ಅವಳು ತೊಡಕಿನಲ್ಲಿ ಬಿದ್ದಳು

ಒಮ್ಮೆ ಸಂಜೀವಿಯನ್ನು ಕೇಳಿಯೂ ಆಗಿತ್ತು "ನಿಮ್ಮನ್ನು ಬಿಟ್ಟು ನಾ ಹ್ಯಾಂಗ ಹೋಗಲಿರೀ ಒಯ್ನೀ ?" ಎಂದು ಪ್ರಶ್ನಿಸಿದಳು

ಆಗ ಆ ಪುಣ್ಯಾತ್ಮಳು "ನನಗಾಗಿ ನೀನು ಬಾಳನ್ನು ಹಂಗಿನಿಂದ ಸಾಗಿಸ ಬೇಕಾಗಿಲ್ಲ ನಿಮ್ಮೀ ನಿನ್ನ ಒಳ್ಳೆಯದೇ ನನಗೆ ಆನಂದವನ್ನುಂಟ ಮಾಡುತ್ತದೆ ನೀನು ನನ್ನ ತಮ್ಮನ ಮಡದಿಯಲ್ಲವೇ ? ನಿನ್ನ ಕಷ್ಟವನ್ನು ನಾನು ಬಯಸು ವವಳೇ ? ಒಬ್ಬರಿಗೆ ಸುಖ ಸಿಗದಿದ್ದರೆ, ಸುಖದಿಂದ ಇದ್ದವರನ್ನು ಹಾಳು ಮಾಡಲು ಮನಸ್ಸು ಮಾಡುವುದೇ? ಛೇ, ನಾನೆಂದೂ ಹಾಗೆ ಬಯಸಲಾರೆ ನೀನು ಎಲ್ಲಿಯಾದರೂ ಸುಖದಿಂದ ಇದ್ದರೆ ನನಗೆ ಅದೇ ಸುಖ ನೀನು ಧಾರವಾಡಕ್ಕೆ ಹೋಗು, ಆದರೆ ಸಾದಾ ಜೀವನವನ್ನು ಸಾಗಿಸು ಎಷ್ಟೆಂದರೂ ನಾವು ಹೆಂಗಸರು" ಎಂದು ಹೃದಯ ಬಿಚ್ಚಿ ಅಂದಳ ಆ ಮಾತಿನಲ್ಲಿ ಕಪಟ ವಿರಲಿಲ್ಲ ಎಂದು ನಿಮ್ಮಿಗೂ ಅನಿಸಿತು ಅದಕ್ಕಾಗಿ ಅವಳ ಮೇಲಿನ

ಅಭಿಮಾನ ಹೆಚ್ಚಿತು

ದಾಸ ಧಾರವಾಡಕ್ಕೆ ಮುಟ್ಟಿದಾಗ, ಅಲ್ಲಿಂದ ಅಣ್ಣಪ್ಪಯ್ಯನವರ ಅಳಿಯ ಹೋಗಿ ಹತ್ತು ದಿನಗಳಾಗಿದ್ದವು ಈ ಸುದ್ದಿಯನ್ನು ಅಣ್ಣಪ್ಪಯ್ಯನವರೂ ಕೇಳಿದರು–ಪತ್ರಮುಖೇನ ಬೇರೆ ಯಾವ ಸಂಗತಿಯೂ ಅವರಿಗೆ ತಿಳಿಯಲಿಲ್ಲ "ಒಟ್ಟಾರೆ ನನಗೆ ಶನಿ ಹಿಡಿದಿದ್ದಾನೆ ಎಲ್ಲಿ ಹೋದರೂ ನಷ್ಟವೇ ಹೊರತು ಲಾಭವಿಲ್ಲ ಹಿಡಿದ ಕೆಲಸದಲ್ಲಿ ವಿಘ್ನಗಳು ಇದ್ದೇ ಇರುತ್ತವೆ" ಎಂದು ಅಣ್ಣಪ್ಪಯ್ಯ ಚಿಂತೆ ಮಾಡಿದರು

ದಾಸನಿಗೆ "ಇನ್ನು ಅಲ್ಲಿ ಬಹಳ ದಿನ ಕೂಡುವುದು ಬೇಡ" ಎಂದು ಪತ್ರವನ್ನು ಗೀಚಿ ಹಾಕಿದರು

ಆದರೆ ಮರುಟಪ್ಪಾಲಿಗೆ "ನನಗೆ ಇಲ್ಲಿಯೇ ತಿಂಗಳಿಗೆ ಒಂದು ನೂರು ರೂಪಾಯಿ ಸಂಬಳದ ನೌಕರಿಯನ್ನು ಮಾವನವರು ಗೊತ್ತುಮಾಡಿದ್ದಾರೆ ಆದ್ದರಿಂದ ನನ್ನ ಚಿ|| ಕುಂಕುಮ ಸೌಭಾಗ್ಯವತಿಯನ್ನು ಕರೆದೊಯ್ಯಲು ತಿ|ಸ| ಮಾವನವರು ಇನ್ನು ನಾಲ್ಕೆಂಟು ದಿವಸಗಳಲ್ಲಿ ಊರಿಗೆ ಬರುತ್ತಾರೆ ಅದಕ್ಕಾಗಿ ಸಂಪಿಗೆಯಲ್ಲಿ ಮೋಟರು ಬರುವಾಗ ನಮ್ಮ ಒಕ್ಕಲಿನವರನ್ನು ಕಳುಹಿಸುತ್ತ ಇರಬೇಕು" ಎಂದು ಬರೆದ ಚಿರಂಜೀವಿ ರಾಮದಾಸನ ಪತ್ರವನ್ನು ಅಣ್ಣಪ್ಪಯ್ಯ ಓದಿದರು

ಸಂತೋಷ—ಅಸಮಾಧಾನಗಳೆರಡೂ ಮನಸ್ಸಿನಲ್ಲಿ ಕುದಿಯುತ್ತಿದ್ದವು. "ಊರಲ್ಲಿ ನಾನೊಬ್ಬನೇ ದುಡಿದು ಸಾಯಬೇಕೋ! ಅವನು ಗಟ್ಟ ಹತ್ತುತ್ತಾನೆ ಅಂತೆ ನನಗಾದರೂ ಯಾಕೆಬೇಕು ಈ ಹೊಲಮನೆ? ನಾನೂ ಒಂದು ತಂಬಿಗೆ ಹಿಡಿದುಕೊಂಡು 'ಭವತಿ ಭಿಕ್ಷಾಂದೇಹಿ' ಎಂದು ಕಾಶಿಗೆ ಹೋಗುತ್ತೇನೆ" ಎಂದು ಅಣ್ಣಪ್ಪಯ್ಯ ಸಿಟ್ಟಿನಿಂದ ಮಗಳ ಮುಂದೆ ಹೇಳಿಯೇ ಹೇಳಿದರು

ಸಂಜೀವಿ ಅಪ್ಪನ ಸಿಟ್ಟು ಇಳಿಯುವ ತನಕ ಸುಮ್ಮನೆ ಇದ್ದಳು—ಆ ಮೇಲೆ ಬುದ್ಧಿ ಹೇಳಬೇಕು ಎಂದು

ಅಷ್ಟರಲ್ಲಿ ಗಡ್ಡಮೀಸೆ ಒಂದು ಫೂಟು ಬೆಳೆದ ಅಜಾನುಬಾಹುವಾದ ದೇಹಧಾರಿ ಕಾವಿವಸ್ತ್ರಧರಿಸಿಕೊಂಡು ಅಣ್ಣಪ್ಪಯ್ಯನವರ ಮುಂದೆ ಬಂದು ನಿಂತು, ಕಿಲ್ಲನೆ ಹಲ್ಲು ಬಿಟ್ಟು "ಆಶೀರ್ವಾದ!" ಎಂದು ಅವರ ಕಾಲುಗಳಿಗೆ

ವಂದಿಸಿದ ಅವನು ಯಾರು ಎಂಬುದು ಅವರಿಗೆ ತಿಳಿಯಿತು ಅವರು ಅಲ್ಲಿ ಬಹಳ ಹೊತ್ತು ನಿಲ್ಲದೆ ಅವನ ಸ್ವಾಗತ—ಸತ್ಕಾರಗಳಿಗೆ ಮಗಳನ್ನೇ ನೇಮಿಸಿದರು ಹೇಗೋ ಒಂದೆರಡು ಮಾತುಗಳನ್ನು ಅವನೊಡನೆ ಆಡಿದಂತೆ ಮಾಡಿದರು ತಟ್ಟನೆ ಮೂಡುಮನೆಯತ್ತ ಸಾಗಿದರು ಗಡಿಬಿಡಿಯಲ್ಲಿ ಹೊರಟವರು ಕೌಪೀನಾಲಂಕೃತರಾಗಿಯೇ ಇದ್ದರು ಇತ್ತ ಸಂಜೀವಿ ಸರ್ರನೆ ಬಂದು ಆ ಸಾಧುಪುರುಷನ ಕಾಲುಗಳಿಗೆ ಶುದ್ಧ ಸಲಿಲವನ್ನು ಹಾಕಿ, ವಂದಿಸಿದಳು

ಇದನ್ನೆಲ್ಲ ನಿಮ್ಮಿ ದಿಟ್ಟಿಸಿ ನೋಡುತ್ತಿದ್ದಳು ಸಂಜೀವಿಯ ನೋಟದಲ್ಲಿ ವ್ಯಂಗ್ಯಾರ್ಥವಿರಲಿಲ್ಲ

೭

ದೂರದಿಂದ ತಮ್ಮ ಮನೆಯತ್ತ ಬರುತ್ತಿರುವ ವ್ಯಕ್ತಿ ಯಾರೆಂದು ಹೊನ್ನಪ್ಪಯ್ಯನವರಿಗೆ ತಿಳಿಯಲಿಲ್ಲ ಅವರ ಹತ್ತಿರ ಸಾವಿತ್ರಿಯೂ ಕುಳಿತುಕೊಂಡು ವೀಳ್ಯ ಮೆಲ್ಲುತ್ತಿದ್ದಳು ಹೊನ್ನಪ್ಪಯ್ಯ ನಾಲ್ಕಾರು ಸಲ ಕೂತಲ್ಲಿಂದ ಬಗ್ಗಿ ಬಗ್ಗಿ ನೋಡಿದರು ಆದರೂ ಅವರಿಗೆ ತಮ್ಮ ಮನೆಯ ಮುಂದಿನಿಂದ ಬರುವ ಜನದ ಪರಿಚಯವಾಗಲಿಲ್ಲ

ಪತಿರಾಯರು ಹೊರಗೆ ನೋಡುವ ಭಂಗಿಯಲ್ಲಿ ಏನೋ ಒಂದು ವೈಚಿತ್ರ್ಯವನ್ನು ಕಂಡ ಸಾವಿತ್ರಿ, "ಯಾರನ್ನು ನೋಡುತ್ತಿದ್ದೀರಿ ?" ಎಂದು ಪ್ರಶ್ನಿಸಿದಳು ಎಲೆ ಅಡಿಕೆಯು ಬಾಯಿಯಲ್ಲಿ ತುಂಬಿತ್ತು ಕಾರಣ ಮಾತು ಸ್ಪಷ್ಟವಾಗಿ ಅವಳ ಬಾಯಿಯಿಂದ ಹೊರಡಲಿಲ್ಲ ಅದು ಹೊನ್ನಪ್ಪಯ್ಯನವರಿಗೂ ಕೇಳಿಸಲಿಲ್ಲ ಅಲ್ಲದೆ ಹೆಂಡತಿಯತ್ತ ಅವರ ಲಕ್ಷ್ಯವೂ ಇರಲಿಲ್ಲ ಹೀಗಾಗಿ ಅವರು ಆಶ್ಚರ್ಯದಿಂದ "ಹೌದೇ!" ಎಂದರು

"ಏನು ?" ಎಂದಳು ಸಾವಿತ್ರಿ

"ಅಕೋ, ಅಲ್ಲಿ ಓ ಅಲ್ಲಿಂದ ಬರುವವನು ನಮ್ಮ ಅಣ್ಣು ಅಲ್ಲವೇನು?"

"ಹಾಗೇಕೆ ಕೋವಣದಿಂದ ಬಂದಿದ್ದಾರೆ ? ಜೋರಿನಿಂದ ಜಿಗಿದು ಬರುತ್ತಿದ್ದಾರೆ ಏನಾಗಿದೆಯೋ ಮನೆಯಲ್ಲಿ!"

"ಅವನು ಅಣ್ಣು ಹೌದೋ ಅಲ್ಲವೋ ? ನಿನಗೆ ಗುರುತು ಸಿಕ್ಕಿತೋ ಇಲ್ಲ ಹೇಳು"

"ಹೌದು, ಅವರೇ!" ಎಂದು ಸಾವಿತ್ರಿ ಹೇಳುವಾಗ ಅಣ್ಣಪ್ಪಯ್ಯ ನವರು ಮೂಡುಮನೆಯ ಅಂಗಳ ಏರಿಯಾಗಿತ್ತು

ಇತ್ತ ಹೊನ್ನಪ್ಪಯ್ಯನವರೂ ಗಾಬರಿಯಾಗಿ ಅಂಗಳಕ್ಕೆ ಇಳಿದು ಬಂದು "ಏನು ? ಏನು ?" ಎಂದು ಅವಸರದಿಂದ ಕೇಳಿದರು ಆದರೆ ಅಣ್ಣಪ್ಪಯ್ಯ ನವರ ಮುಖದ ಮೇಲೆ ಅಂಥ ಗಾಬರಿಯಾಗಬೇಕಾದ ಚಿಹ್ನೆಗಳಾವುವು ಕಾಣಲಿಲ್ಲ—ಹೊನ್ನಪ್ಪಯ್ಯನವರಿಗೆ

"ಏನಿಲ್ಲ—ಏನಿಲ್ಲ" ಎನ್ನುತ್ತ ಅಣ್ಣಪ್ಪಯ್ಯ ಚಾವಡಿಯತ್ತ ನಡೆದರು ಅವರ ಹಿಂದಿನಿಂದ ಹೊನ್ನಪ್ಪಯ್ಯನವರೂ ಸಾಗಿದರು

"ಓಂ ನಮೋ ಶಿವಾಯ" ಎಂದು ಅಣ್ಣಪ್ಪಯ್ಯ ಚಾವಡಿಯಲ್ಲಿ ಕುಳಿತಾಯಿತು.

"ಇದೇನು ಆಶ್ಚರ್ಯ" ಎಂದು ಹೊನ್ನಪ್ಪಯ್ಯನವರು ಮೌನವಾಗಿಯೇ ತಮ್ಮ ಪತ್ನಿಯ ಮುಖ ನೋಡುತ್ತಿದ್ದರು ಸಾವಿತ್ರಿಯಾದರೂ ಒಮ್ಮೆ ಅಣ್ಣಪ್ಪಯ್ಯನವರನ್ನು ಮತ್ತೊಮ್ಮೆ ಅವರ ಅಣ್ಣನನ್ನು ನೋಡುವುದರಲ್ಲೇ ಇದ್ದಳು ಹೊನ್ನಪ್ಪಯ್ಯನವರೂ ಅಲ್ಲಿಯೇ ಕೂತುಕೊಂಡರು. ಸ್ವಲ್ಪ ಹೊತ್ತು ಯಾರೂ ಬಾಯಿ ತೆರೆಯಲಿಲ್ಲ ಆ ಮೇಲೆ ಸಾವಿತ್ರಿಯೇ ಮೊದಲು ಮಾತಿಗೆ ಪೀಠಿಕೆ ಹಾಕಿದಳು

"ಮನೆಯಲ್ಲಿ ಯಾರಿಗಾದರೂ ಸೌಖ್ಯವಿಲ್ಲವೋ ?"

"ಯಾಕೆ ?"

"ಇಲ್ಲದಿದ್ದರೆ ನೀವು ಬರುವವರಲ್ಲ" ಎಂದು ಸಾವಿತ್ರಿ ಹೇಳುವಾಗ ಅಣ್ಣಪ್ಪಯ್ಯನವರಿಗೆ ಆ ಮಾತು ವಿಷಪೂರಿತ ಶಲ್ಯದಂತ ನಟ್ಟಿತು ಮೈಯಲ್ಲಿ ಎಚ್ಚರವೂ ಬಂದಿತು ಆವಳಿಗೆ ಹೇಗೆ ಪ್ರತಿಕಾರ ಸಲ್ಲಿಸಬೇಕೆಂದು ಅವರಿಗೆ

ತಿಳಿಯಲಿಲ್ಲ ಸ್ವಲ್ಪ ಹೊತ್ತು ದೇಶಾವರಿ ನಗು ಬೀರುತ್ತ ಕುಳಿತರು

ಆಗ ಹೊನ್ನಪ್ಪಯ್ಯ "ಇದೇನು ಹಗಲಮೇಲೆ ಒಂದು ಎಲೆವಸ್ತ್ರವೂ ಇಲ್ಲದೆ ಬಂದಿ ?" ಎಂದು ಪ್ರಶ್ನಿಸಿದರು

"ಹೋ !" ಎನ್ನುತ್ತ ಅಣ್ಣಪ್ಪಯ್ಯ ಅತ್ತಿತ್ತ ನೋಡಿ, ಮೈಮೇಲೆ ಕೈಯಾಡಿಸಿದರು ಏನೋ ಹೇಳಲಿಕ್ಕೋ ಕೇಳಲಿಕ್ಕೋ ಬಂದ ಅವರಿಗೆ ಈಗ ಗೊತ್ತಾಯಿತು—ತಾನು ಮನೆಯಿಂದ ಅರಿವೆ ತೊಟ್ಟು ಬಂದಿಲ್ಲವೆಂದು

ಅದಕ್ಕಾಗಿ, "ತಲೆಯಲ್ಲಿ ಏನೋ ಬಂತು, ಹಾಗೇ ಹೊರಟು ಬಂದು ಬಿಟ್ಟೆ" ಎಂದು ಹೇಳಿದರು

"ಏನು ?" ಎಂದು ಹೊನ್ನಪ್ಪಯ್ಯ ಕೇಳಿದರು

"ನಿಮ್ಮ ಶಿವರಾಯನ ಪತ್ತೆ—ಗಿತ್ತೆ ಉಂಟೋ ?"

"ಇಲ್ಲ"

"ಅವನನ್ನು ಹುಡುಕಿ ತರಬೇಕೆಂಬ ಆಲೋಚನೆಯಾದರೂ ನಿಮಗೆ ಉಂಟೋ ಹೇಗೆ ?"

"ನಿಮ್ಮ ನಾರಾಯಣಯ್ಯನ ಪತ್ತೆ ಆಯಿತೋ ?" ಎಂದು ಸಾವಿತ್ರಿ ನಡುವೆ ಬಾಯಿ ಹಾಕಿ ಕೇಳಿದಳು

"ಇಬ್ಬರ ಪತ್ತೆಯನ್ನು ಮಾಡುವ ವಿಷಯದಿಂದ ನಾನು ಬಂದದ್ದು"

"ಎಲ್ಲಿದ್ದಾರಂತೆ ?" ಎಂದರು ಹೊನ್ನಪ್ಪಯ್ಯ

"ಅದೆಲ್ಲ ಮತ್ತೆ ಹೇಳುತ್ತೇನೆ ಮೊದಲು ನಿನಗೆ ಅಳಿಯನನ್ನು ಕರೆದು ತರಬೇಕೆಂಬ ವಿಚಾರ ಉಂಟೋ ಇಲ್ಲವೋ ತಿಳಿಸು"

"ಉಂಟು"

"ಹಾಗಾದರೆ ನೀನು—ಗಟ್ಟಕ್ಕೆ ಹೋಗಿಬರಲಿಕ್ಕೆ ಬೀಳುವ ಖರ್ಚಿನ ಅರ್ಧವನ್ನು ಕೊಡುತ್ತೀಯಾ?" ಎಂದು ಅಣ್ಣಪ್ಪಯ್ಯ ಕೇಳುವಾಗ ಸಾವಿತ್ರಿ ಹೇಳಿದಳು—"ಆ ವಿಷಯ ಸ್ವಲ್ಪ ವಿಚಾರ ಮಾಡಬೇಕು" ಎಂದು

"ವಿಚಾರ—ಆಲೋಚನೆ ಎಲ್ಲ ಸುಳ್ಳು" ಎಂದು ಕ್ಷಣದಲ್ಲೇ ಉತ್ತರಿಸಿದರು ಅಣ್ಣಪ್ಪಯ್ಯ 'ತಾನು ಬಂದ ಕೆಲಸ ಆಗವುದಿಲ್ಲ' ಎಂದು ಸಾವಿತ್ರಿಯ ಮಾತು ಕೇಳಿದ ಮೇಲೆ ಅಣ್ಣಪ್ಪಯನವರಿಗೆ ಹೊಳೆಯಿತು ಆದರೂ ಪ್ರಯತ್ನ ಮಾಡಬೇಕೆಂಬ ಉದ್ದೇಶದಿಂದ ಅಲ್ಲಿಯೇ ಕುಳಿತುಕೊಂಡು

ವಿಳ್ಯ ತಿನ್ನತೊಡಗಿದರು

"ನಿಮ್ಮ ದಾಸ ಗಟ್ಟಕ್ಕೆ ಹೋಗಿದ್ದಾನೆಯೋ ?" ಎಂದು ಸಾವಿತ್ರಿ ಕೇಳಿದಳು

"ಹೌದು ಅದಕ್ಕಾಗಿಯೇ ನಾನು ಬಂದದ್ದು ನಮ್ಮ ನಾರಾಯಣಯ್ಯ ನನ್ನು ಹಿಡಿದು ಕಳುಹಿಸಿದ್ದಾನೆ ನಿಮ್ಮ ಶಿವರಾಯನನ್ನೂ ಕರೆದು ತರಲಿಕ್ಕೆ ಹೇಳುತ್ತೇನೆ ಆದರೆ ನೀವು ದಾಸನ ಪ್ರಯಾಣದ ಅರ್ಧ ಖರ್ಚನ್ನು ನೋಡಿ ಕೊಳ್ಳಬೇಕು" ಎನ್ನುತ್ತ ಅಣ್ಣಪ್ಪಯ್ಯ ಎಲೆಅಡಿಕೆಯ ಪೆಟ್ಟಿಗೆಯನ್ನು ಬರಿದು ಮಾಡುವುದರಲ್ಲೇ ತೊಡಗಿದ್ದರು

ಮೈದುನನ ಮಾತುಗಳನ್ನು ಕೇಳಿ ಸಾವಿತ್ರಿಗೆ ಪಿತ್ತ ಕೆದರಿತು ಹೊನ್ನಪ್ಪಯ್ಯನವರಿಗೂ ತಮ್ಮನ ಕುಶಾಗ್ರ ಬುದ್ಧಿಯನ್ನು ನೋಡಿ ಆಶ್ಚರ್ಯ ವೆನಿಸಿತು. ಇಷ್ಟೆಲ್ಲ ಚಾಣಕ್ಯತಂತ್ರ ಕಲಿತಿದ್ದಾನೆ ತನ್ನ ತಮ್ಮ ಎಂದು ಅವರು ಕನಸಿನಲ್ಲಿಯೂ ಎಣಿಸಿರಲಿಲ್ಲ

ಅಣ್ಣಪ್ಪಯ್ಯನವರು ಹೂಡಿದ ಒಳಸಂಚು ಅವರಿಗೂ ಅರಿಯದೆ ಹೋಗಲಿಲ್ಲ ಮಗನನ್ನು ಗೊತ್ತಿಲ್ಲದೆ ಧಾರವಾಡಕ್ಕೆ ಕಳುಹಿಸಿದ್ದರೂ ಅವರಿಗೆ ಅದು ವಿದಿತವಾಗಿತ್ತು ಮಗನ ಕಾಗದದ ಮಜಕೂರೂ ಅವರಿಗೆ ಗೊತ್ತಾಗಿತ್ತು ಅಲ್ಲದೆ ಅಣ್ಣಪ್ಪಯ್ಯ ಮಾತಾಡುವ ಸರಣಿಯ ಅರ್ಥವೂ ಅವರಿಗಾಯಿತು

ಕಾರಣ ಸಾವಿತ್ರಿ ಚೆನ್ನಾಗಿ ಮೈದುನನನ್ನು ಮಾತಿನಿಂದ ತೊಳೆಯಲು ಪ್ರಾರಂಭಿಸಿದಳು

"ನೀವು ಇಷ್ಟು ಹಿಕಮತ್ತು ಮಾಡುತ್ತೀರೆಂದು ನಮಗೆ ಗೊತ್ತಿರಲಿಲ್ಲ. ನಾವೇನು ನಿಮ್ಮ ಮಗನಿಗೆ ಧಾರವಾಡಕ್ಕೆ ಹೋಗಿ ಬರುವ ಖರ್ಚನ್ನು ಕೊಡ ಲಿಕ್ಕೆ ಹಣ ಗಂಟು ಕಟ್ಟಿ ಇಟ್ಟಿಲ್ಲ ನಿಮ್ಮ ಅಳಿಯ ಬಂದ ಸುದ್ದಿ ನಮಗೂ ಗೊತ್ತಿದೆ ನೀವು ಬೇಕಾದಷ್ಟು ಅವತಾರ ತಾಳಿದರೂ ನಮಗೆಲ್ಲ ತಿಳಿಯು ತ್ತದೆ ಮನುಷ್ಯನಿಗೆ ಮುದುಕನಾಗುತ್ತ ಹೋದ ಹಾಗೆ ಬುದ್ಧಿ ಬೆಳೆಯ ಬೇಕು ಹೀಗೆಲ್ಲ ಆಗುವುದು— , ಸರಿಯಲ್ಲ. ನಿಮಗೆ ಇವತ್ತು ಗೊತ್ತಾ ಯಿತೇ ನಮ್ಮ ಮನೆಯ ಹಾದಿ ? ಅದೂ ಹಣ ಎತ್ತುವ ನೆವದಿಂದ— ಅಲ್ಲವೋ ? ದಾಸ ಧಾರವಾಡಕ್ಕೆ ಮುಟ್ಟಿದ ಮೇಲೆ ನಮ್ಮ ಅಳಿಯನ ನೆನಪು

ಆಯಿತೇ ನಿಮಗೆ ? ಅದರ ಮೊದಲು ನಾವು ಸತ್ತಿದ್ದೇವೆಂದು ನೀವು ಭಾವಿಸಿದಿರೇ ? ನೀವು ಮೊದಲೇ ಕರಾರು ಮಾಡುತ್ತಿದ್ದರೆ ನಾವು ಖರ್ಚಿನ ಅರ್ಧ ಹಣ ಕೊಡುತ್ತಿದ್ದೆವು ಆದರೆ ಈಗ ನಾವು ಕೊಡುವವರಲ್ಲ" ಎಂದು ಮುಂತಾಗಿ ಗಂಟೆಗಟ್ಟಳೆ ಸಾವಿತ್ರಿ ಹೇಳುವಾಗ ಅಣ್ಣಪ್ಪಯ್ಯ ತಲೆ ಕೆಳಗೆ ಹಾಕಿ ಸುಮ್ಮನೆ ಕುಳಿತಿದ್ದರು. ಅವಳು ಮಾತಾಡಿ ಸೋತಮೇಲೆ ಅಲ್ಲಿಂದ ಎದ್ದು ಮಾತಾಡದೆ ಎಡಹಿತ್ತಲಿಗೆ ನಡೆದರು

"ನಾನು ಏನು ಮಾಡಿದರೂ ನೀರಲ್ಲಿ ಹೋಮ ಇಟ್ಟ ಹಾಗೆ ಆಗುತ್ತದೆ" ಎಂದು ಮನಸ್ಸಿನಲ್ಲೇ ತಿಳಿದುಕೊಂಡರು

ಅಣ್ಣಪ್ಪಯ್ಯ ಹೋಗುವಾಗ ಅವರತ್ತ ನೋಡುತ್ತ ಹೊನ್ನಪ್ಪಯ್ಯ "ಅಂತೂ ನಮ್ಮ ಮನೆತನಕ್ಕೆ ಮಸಿ ಹಚ್ಚಿದ" ಎಂದು ಸಪ್ಪಗೆ ಮುಖ ಮಾಡಿದರು

"ಮನುಷ್ಯನ ಬುದ್ಧಿ ಹೀಗೇ ಇರುತ್ತದೆಂದು ಹೇಳಲಿಕ್ಕೆ ಸಾಧ್ಯವಿಲ್ಲ" ಎಂದು ಹೆಂಡತಿಯತ್ತ ನೋಡಿ ಹೇಳಿದರು

"ನಾಳೆ ನಮ್ಮ ಬುದ್ಧಿಯೂ ಹಾಗೇ ಆಗುತ್ತದೋ ಹೀಗೇ ಉಳಿಯುತ್ತದೋ ಎಂದು ಯಾರು ಬಲ್ಲರು ?" ಎಂದು ಅವಳೂ ಹೊನ್ನಪ್ಪಯ್ಯನವರಿಗೆ ಕೇಳಿದಳು

ಆಗ ಹೊನ್ನಪ್ಪಯ್ಯ, "ದೇಹ ಮೂಲೆ ಹಿಡಿದಾಗ ಮಾತಿನ ಮಾಲೆಗಳು ಹೊರಡುವುದು ಸಹಜ ನಿನ್ನಿಂದ ಈಗ ಯಾವ ಕಾರಭಾರವೂ ನಡೆಯುವುದಿಲ್ಲ ಅದಕ್ಕೆ ಬಹಳ ಮಾತಾಡಲಿಕ್ಕೆ ಪ್ರಾರಂಭಿಸಿದ್ದಿ ಅಳಿಯನ ಚಿಂತೆ ಹಾಗಾದರೆ ನಿನ್ನ ಗತಿ ಹೀಗಾಗಿದೆ ನಿನ್ನ ಕಾಯಲೆಗಾಗಿ ಎಷ್ಟು ಖರ್ಚು ಮಾಡಿದರೂ ಗುಣ ಕಾಣುವುದಿಲ್ಲ ಅತ್ತ ಅಳಿಯನನ್ನು ಹುಡುಕಲು ಖರ್ಚು ಮಾಡಿದ ಹಣಕ್ಕೆ ಇತಿಮಿತಿಯೇ ಇಲ್ಲ ಇವತ್ತು ಹೇಗಿದೆ ನಿನ್ನ ಆರೋಗ್ಯ" ಎಂದು ಕೇಳಿದರು

"ನನಗೆ ಯಾವ ಕಾಯಿಲೆಯೂ ಆಗಿಲ್ಲ ಚಿಂತೆ ಮನಸ್ಸಿಗೆ ಹತ್ತಿದರೆ ಅದಕ್ಕೆ ಯಾರಾದರೂ ಔಷಧ ಕೊಡಬಲ್ಲರೋ ? ನಾನು ಎಷ್ಟು ಹೇಳಿದರೂ ನೀವು ದುಡ್ಡು ಸುರಿದು ಔಷಧ ತರಿಸುತ್ತೀರಿ ನನಗೆ ಆ ಕಾಯಿಲೆ ಗುಣವಾಗುವುದು ಒಮ್ಮೆಲೇ" ಎನ್ನುತ್ತ ಸಾವಿತ್ರಿ ಹೋಗಿ ಮೂಲೆಯಲ್ಲಿ ಕುಳಿತು

ಕೊಂಡಳು ಅಣ್ಣಪ್ಪಯ್ಯನವರೊಡನೆ ವಾಗ್ವಾದ ಹೂಡಿ—ಅವಳು ದಣಿದು ಹೋಗಿದ್ದಳು

ಸಾವಿತ್ರಿಗೆ ಕಾಯಿಲೆ ಪ್ರಾರಂಭವಾಗಿ ಒಂದು ವರುಷದ ಮೇಲಾಯಿತು ಅವಳಿಗೆ ಎಂಥ ರೋಗವೆಂಬುದು ಯಾವ ವೈದ್ಯರಿಗೂ ಗೊತ್ತಿರಲಿಲ್ಲ

"ಎಂಥಾ ಸೀಕು ?" ಎಂದು ಕೇಳಿದರೂ ಡಾಕ್ಟರರು ಹೆಸರು ಹೇಳುತ್ತಿದ್ದಿಲ್ಲ

"ನಿಮಗೆ ಅದೆಲ್ಲ ಯಾಕೆ? ರೋಗ ಗುಣವಾದರೆ ಸಾಕಲ್ಲ?" ಎಂದು ಕೇಳುವುದು ಡಾಕ್ಟರರ ಕೆಲಸವಾಗಿತ್ತು ಆದರೆ ರೋಗಿಗೆ ಗುಣಾಂಶ ವೆಂದು ಕಂಡು ಬರುತ್ತಿರಲಿಲ್ಲ ಎಷ್ಟೋ ಜನರ ಔಷಧವಾಯಿತು ಸಾವಿತ್ರಿ ದಿನೇ ದಿನೇ ಸೊರಗುತ್ತ ಬಂದಳೇ ಹೊರತು ಗುಣಕೊಂದಲಿಲ್ಲ ಔಷಧ ಮಾಡಿ ಮಾಡಿ ಹೊನ್ನಪ್ಪಯ್ಯನವರಿಗೂ ಬೇಸರ ಬಂದಿತ್ತು ಒಂದೆರಡು ಸಲ ಕಲಾನಿಕೇತನದ ಶಂಕರನೂ ಬಂದು ಚಿಕಿತ್ಸೆಮಾಡಿ ಹೋಗಿದ್ದ ಆದರೆ ಅವನು ಔಷಧ ಕೊಟ್ಟಿರಲಿಲ್ಲ

"ಅವರಿಗ ವಿಶ್ರಾಂತಿ ಬೇಕು" ಎಂದಿಷ್ಟೇ ಶಂಕರ ಹೇಳಿದ್ದ. ಅವನ ಮಾತನ್ನು ನಂಬಿ—ಹೊನ್ನಪ್ಪಯ್ಯ ಒಬ್ಬಳು ದಾದಿಯನ್ನು ಕರೆಸಿ, ಅವಳಿಗೆ ಸಾವಿತ್ರಿಯ ಆರೈಕೆಯನ್ನು ಒಪ್ಪಿಸಿದರು ಅವಳ ವಸ್ತಿಯೂ ಮೂಡುಮನೆ ಯಲ್ಲೇ ಆಯಿತು

ಸುಮತಿಯೂ ತಾಯಿಯ ಸ್ಥಿತಿಯನ್ನು ನೋಡಿ ಹೆದರಿದ್ದಳು ಒಮ್ಮೆ ಶಂಕರನೊಡನೆ ಅವಳು ಆ ಬಗ್ಗೆ ಕೇಳಿಯೂ ಆಗಿತ್ತು

ಅದಕ್ಕೆ ಆತ "ಅದು ಕ್ಷಯ ನೀನು ಯಾರೊಡನೆಯೂ ಹೇಳಬೇಡ. ಆದಷ್ಟು ವಿಶ್ರಾಂತಿಯನ್ನು ಅವರಿಗೆ ದೊರಕಿಸಿಕೊಡಬೇಕು ಅದನ್ನು ಗುಣ ಪಡಿಸುವುದು ಅಸಾಧ್ಯ ಗುಣವಾಗುವ ಸ್ಥಿತಿಯಲ್ಲೂ ಇಲ್ಲ ಒಟ್ಟಾರೆ ದಿನ ಲೆಕ್ಕ ಮಾಡುವುದು ಮಾತ್ರ" ಎಂದು ಹೇಳಿದ್ದ. ಅಂದು ಸುಮತಿಯೊಂದು ಅತ್ತದ್ದು ಇದೆ ಅಷ್ಟಿಷ್ಟಲ್ಲ! ಶಂಕರನಿಗೆ ಅವಳನ್ನು ಸಮಾಧಾನ ಪಡಿಸ ಬೇಕಾದರೆ ಸಾಕು ಬೇಕಾಗಿ ಹೋಯಿತು

"ಹುಟ್ಟು-ಸಾವುಗಳು ಜಗತ್ತಿನಲ್ಲಿ ಸಾಮಾನ್ಯ" ಎಂದು ಹಾಗೆ ಹೀಗೆ ಹೇಳಿ ಅವಳನ್ನು ಆತ ಸಂತೈಸಿದ

ಮಗಳ ಸ್ಥಿತಿಯನ್ನು ನೆನೆದು ಸಾವಿತ್ರಿಗೆ ಕಾಯಿಲೆ ಹೆಚ್ಚಾಗುತ್ತ ಬರ ತೊಡಗಿತ್ತು ಮೈಯಲ್ಲಿ ನಿಶ್ಯಕ್ತಿ ತುಂಬಿದುದರಿಂದ ಅತ್ತಿತ್ತ ಹೆಚ್ಚು ನಡೆಯ ಲಿಕ್ಕೂ ಅವಳಿಂದ ಆಗುತ್ತಿರಲಿಲ್ಲ ಹೆಚ್ಚು ಮಾತಾಡಬಾರದೆಂದು ಹೇಳಿ ದರೂ ಅವಳು ಕೇಳುತ್ತಿರಲಿಲ್ಲ.

" ನನ್ನ ಸುಮತಿಗೆ ಒಮ್ಮೆ ದಾರಿಗೆ ಹಚ್ಚಿಸಿ ನಾನು ಸಾಯುತ್ತಿದ್ದರೆ— ಅಡ್ಡಿ ಇರಲಿಲ್ಲ ಪಾಪ, ಅವಳನ್ನು ನಾನು ಸತ್ತ ಮೇಲೆ ಇಲ್ಲಿಯವರೆಲ್ಲ ಹೇಗೆ ನಡೆಸುತ್ತಾರೋ ದೇವರೆ ಬಲ್ಲ! " ಎನ್ನುವುದು ಸಾವಿತ್ರಿಯ ನಿತ್ಯ ಮಂತ್ರವಾಗಿತ್ತು ಪತಿಯೊಡನೆ ಯಾವಾಗಲೂ " ಶಿವರಾಯನ ಸುದ್ದಿ ಸಿಕ್ಕಿತೋ ? " ಎಂದು ಕೇಳುತ್ತಲೇ ಇದ್ದಳು

" ನೀನು ಅದನ್ನೆಲ್ಲ ಮನಸ್ಸಿನಲ್ಲಿ ನೆನಸಿಕೊಳ್ಳಬೇಡ " ಎಂದು ಹೊನ್ನಪ್ಪಯ್ಯ ಔಷಧದ ಸುದ್ದಿ ತೆಗೆಯುತ್ತಿದ್ದರು

ದಿನಗಳು ಕಳೆದಂತೆ ಸಾವಿತ್ರಿಗೆ ಮಗಳದೇ ಜಪವಾಯಿತು

ಶಿವರಾಯನನ್ನು ಹುಡುಕಲು ಹೊನ್ನಪ್ಪಯ್ಯ ಸಾಕಷ್ಟು ಹಣ ವ್ಯಯ ಮಾಡಿದ್ದರು ಹಿಂದೊಮ್ಮೆ ಶಂಕರನೊಡನೆ ಕೂಡಿಕೊಂಡು ಪುಣೆಯವರೆಗೂ ಹೋಗಿ ಬಂದಿದ್ದರು ಶಿವರಾಯ ಸಿಕ್ಕಿರಲಿಲ್ಲ. ಆದರೆ ಶಂಕರ ಪುಣೆಗೆ ಹೋದವನು ಒಂದು ಒಳ್ಳೆಯ ಕೆಲಸ ಮಾಡಿ ಬಂದಿದ್ದ ಅಂದರೆ ಫಕ್ಕನೆ ಶಿವರಾಯ ಪುಣೆಗೆ ಬಂದನೆಂದರೆ, ಕೂಡಲೇ ಅವನನ್ನು ತನ್ನ ಎಡ್ರೆಸ್ಸಿಗೆ ಕರೆದು ತರಬೇಕೆಂದು ತನ್ನ ಒಬ್ಬ ಮಿತ್ರನಿಗೆ ಹೇಳಿ ಬಂದಿದ್ದ ಅವನಿಗೂ ಶಿವರಾಯನ ಪರಿಚಯವಿತ್ತು

"ಈ ವರುಷವಲ್ಲ, ಇನ್ನು ಹತ್ತು ವರುಷ ದಾಟಿ—ಬೇಕಾದರೆ ಶಿವರಾಯ ನನ್ನ ಕಣ್ಣಿಗೆ ಬೀಳಲಿ, ನಾನು ಅವನನ್ನು ನಿಮ್ಮ ಊರಿಗೆ ತಂದು ಒಪ್ಪಿಸು ತ್ತೇನೆ" ಎಂದು ಆ ಗೆಳೆಯನೂ ಆಶ್ವಾಸನವಿತ್ತಿದ್ದ

" ಹಾಗೆ ಮಾಡಿದರೆ ದೊಡ್ಡ ಉಪಕಾರ ಮಾಡಿದಂತಾಗುತ್ತದೆ ನಿಮಗೆ ಬಿದ್ದ ಖರ್ಚನ್ನು ನಾನು ಕೊಡುತ್ತೇನೆ " ಎಂದು ಹೊನ್ನಪ್ಪಯ್ಯ ನವರೂ ಹೇಳಿ ಬಂದಿದ್ದರು

ಅಂದಿನಿಂದ ಹೊನ್ನಪ್ಪಯ್ಯ ವಿಶೇಷವಾಗಿ ಶಿವರಾಯನ ಸಲವಾಗಿ ಖರ್ಚು ಮಾಡುವುದನು ತೊರೆದಿದ್ದರು ಆದರೆ ಧಾರವಾಡದಲ್ಲಿ ಇದ್ದ

ರಾಘವೇಂದ್ರರಾಯರು ವರುಷಕ್ಕೊಮ್ಮೆ ನೂರಿನ್ನೂರು ರೂಪಾಯಿಗಳನ್ನು ತಂಗಿಯ ಗಂಡನ ಸಂಶೋಧನೆಗಾಗಿ ನಿವಾಳಿಸಿ ಒಗೆಯುತ್ತಿದ್ದರು

ಅಳಿಯನ ಅನ್ವೇಷಣೆಗಿಂತ ಹೊನ್ನಪ್ಪಯ್ಯನವರಿಗೆ ಪತ್ನಿಯ ಕಾಯಿಲೆಯ ಬಗ್ಗೆ ಹೆಚ್ಚು ತಾಪ ಹುಟ್ಟಿತು ಲೆಕ್ಕವಿಲ್ಲದಷ್ಟು ಹಣವನ್ನು ಔಷಧ ಕುಡಿಯುತ್ತಿತ್ತು

ಆದರೆ ಮಗ ಧಾರವಾಡದಿಂದ "ಹಣಕ್ಕಾಗಿ ಹಿಂದೆ ಮುಂದೆ ನೋಡಬೇಡಿ ಒಳ್ಳೆಯ ಡಾಕ್ಟರರಿಂದ ಔಷಧ ಮಾಡಿಸಿರಿ" ಎಂದು ಕಾಗದ ಬರೆಯುತ್ತಿದ್ದ ಒಂದೆರಡು ಸಲ ಊರಿಗೆ ಬಂದೂ ಹೋಗಿದ್ದ

ಎರಡನೆಯ ಸಲ ಊರಿಗೆ ಬಂದಾಗ ಮನೆಯಲ್ಲಿ ಯಾರೋ ಒಬ್ಬರು ಹೊಸಬರು ಇದ್ದಂತೆ ಮಗನಿಗೆ ತೋರಿತು ಅವರ ವಸ್ತ್ರಿಯೂ ಅಲ್ಲೇ ಇದ್ದದ್ದನ್ನು ಅವನು ನೋಡಿದ ಅವರು ಯಾರು ಎಂದು—ಮನೆಯವರಿಂದ ತಿಳಿಯುವುದಕ್ಕಿಂತ ಮುಂಚೆ, ಪರಭಾರೆಯಿಂದ ಬೇರೆಯವರ ಮುಖಾಂತರ ಅವರ ವಿಷಯ ಅರಿತುಕೊಂಡಿದ್ದ ಅವರ ಸಲುವಾಗಿ ಹೆಚ್ಚಿನ ಲಕ್ಷ್ಯವನ್ನೂ ಆತ ಕೊಡಲಿಲ್ಲ

ಅವಳು ಅವನ ತಮ್ಮನ ಹೆಂಡತಿಯ ಬಳಗದವಳು ಎಂಬುದು ರಾಘವೇಂದ್ರನಿಗೂ ತಿಳಿದಿತ್ತು ಅಂಥವಳು ತನ್ನ ಮನೆಯಲ್ಲಿ ಇರುವುದು ಸರಿಯಲ್ಲವೆಂದು ಒಮ್ಮೆ ಅನಿಸಿದರೂ, ತಂದೆ-ತಾಯಿಗಳ ಒಪ್ಪಿಗೆ ಅವಳಿಗೆ ದೊರೆತಿದೆ ಎಂದು ತಿಳಿದ ರಾಘವೇಂದ್ರ ಸುಮ್ಮನೆ ಧಾರವಾಡಕ್ಕೆ ಹೋದ ಅವನಿಗಾದರೂ ತಂದೆಯೊಡನೆ ಹೆಚ್ಚಿಗೆ ಮಾತಾಡಿ ಪರಿಹಾರವಿರಲಿಲ್ಲ. ತಂದೆಯಂತೆ ನಡೆಯುವ ಅವನಿಗೆ ಆ ಧೈರ್ಯವೂ ಕಡಿಮೆ

ಸವತೀಕೆರೆಯ ಜಾನಕತ್ತೆ ಅನಾಥೆಯೇನೋ ಹೌದು ಅವಳು ಹಾಗೆ ಅನಾಥೆಯಾದದ್ದು ಬೇಕೆಂದೇ ಎಂದರೂ ತಪ್ಪಾಗದು ಯಾಕೆಂದರೆ ಅವಳ ಕುಲದವರೇ ಬಡಸ್ತಿಕೆಯಲ್ಲಿ ನರಳುತ್ತ ಜೀವನ ಸಾಗಿಸಿದ್ದರು ಅವರಿಗೆ ಸ್ವಂತ ಹೊಲಮನೆ ಇರಲಿಲ್ಲ ಮೊದಲಿನಿಂದಲೂ ಅವರು ಮೂಲಗೇಣಿಯ ಆಸ್ತಿಯಲ್ಲಿ ದುಡಿಯುತ್ತಿದ್ದರು

ದಿನಗಳು ಹೋದಂತೆ, ನಾಗರಿಕತೆಯ ಪಿತ್ತ ವಿಕಾರವಾದಂತೆ ಅವರು ವೈಗಳ್ಳರಾಗುತ್ತ ಬಂದುದರಿಂದಲೋ ಅವರಿಗೆ ಆ ಆಸ್ತಿಯಿಂದ ಜೀವನ

ಹೋಗದಾಯಿತು ಜಾನಕಮ್ಮನ ಪಾಲಿಗೆ ವೈಧವ್ಯವೂ ಪ್ರಾಪ್ತವಾಗಿತ್ತು ಹೀಗಾಗಿ ಅವಳ ಪಾಡು ಉಳಿದ ಆ ಮನೆತನದ ಜೀವಿಗಳಿಗಿಂತ ಹೀನಸ್ಥಿತಿಗಿಳಿಯಿತು ಅಲ್ಲದೆ ಅವಳಿಗೆ ಮನೆಯ ಹಿರಿಯರ ಮಾತುಗಳು ಸರಿಬೀಳಲೂ ಇಲ್ಲವಂತೆ ದಡಕ್ಕೆ ಬಿದ್ದ ಮರಿಮೀನಿನಂತೆ ಜಾನಕಿಯ ಪರಿಸ್ಥಿತಿಯಾಗಿತ್ತು—ಸವತೀಕೆರೆಯಲ್ಲಿ

ಮನೆಯ ಹಿರಿಯರು ಹೇಳಿದಂತೆ ಕೇಳುತ್ತ ಬಂದಿದ್ದರೆ ಅವಳನ್ನೇನು ಬಿಟ್ಟು ಹಾಕುತ್ತಿರಲಿಲ್ಲ ಆದರೆ ತನಗೆ ಸ್ವಾತಂತ್ರ್ಯವಿಲ್ಲದ ಜೀವನ ಬೇಡವೆಂದು ಎಣಿಸಿ ಜಾನಕಿ ನನ್ನ 'ಕೈರಟ್ಟೆ ಗಟ್ಟಿ ಇರುವತನಕ ದುಡಿದು ತಿನ್ನುತ್ತೇನೆ' ಎಂದು ಮನೆಬಿಟ್ಟಳು ಅನಾಯಾಸವಾಗಿ ಹೊನ್ನಪ್ಪಯ್ಯನವರೂ ತಮ್ಮ ಮನೆಗೆ ಒಬ್ಬಳು ತೊತ್ತು ಇರಲಿ ಎಂದು ಜಾನಕಿಯನ್ನು ತಮ್ಮಲ್ಲಿಗೆ ಸ್ವಾಗತಿಸಿದರು

ಅತ್ತ ಮನೆಯಲ್ಲಿ ಸಾವಿತ್ರಿಯ ಆರೋಗ್ಯವೂ ಕೆಟ್ಟಿತ್ತು ಅವಳ ಆರೈಕೆ ನೋಡಲಿಕ್ಕೂ ಆಗುತ್ತದೆಂದು ಹೊನ್ನಪ್ಪಯ್ಯ ಮುಂದಾಲೋಚನೆ ಹೂಡಿದ್ದರು ಅದೂ ಅಲ್ಲದೆ ಜಾನಕಿ ಏನು ದೂರದವಳಲ್ಲ ತನ್ನ ನೆಂಟರ ಮನೆಯವಳೇ ಸವತೀಕೆರೆಗೆ ಹೊನ್ನಪ್ಪಯ್ಯ ವರ ಷದಲ್ಲಿ ನಾಲ್ಕೆಂಟು ಬಾರಿ ಹೋದಾಗ ಜಾನಕೀಯೇ ಅವರನ್ನು ಸ್ವಾಗತಿಸುತ್ತಿದ್ದಳು ನಿರ್ಭೀತಿಯಿಂದ ಮಾತೂ ಆಡುತ್ತಿದ್ದಳು ನಕ್ಕೂ ನಲಿದು ನಾಟ್ಯ ಮಾಡುವುದು ಅವಳ ಸ್ವಭಾವವೇ. ಗಂಡಸರು–ಹೆಂಗಸರು ಎಂಬ ತಾರತಮ್ಯ ಭಾವನೆ ಇಲ್ಲದೆ ರಸವತ್ತಾದ ಸಂಭಾಷಣೆ ಬೆಳೆಸುವುದರಲ್ಲಿ ಜಾನಕಿ ಒಂದನೆ ಹೀಗೆಲ್ಲ ಇರಲು ಹೊನ್ನಪ್ಪಯ್ಯನವರಿಗೂ ಅವಳ ಮೇಲೆ ಕರುಣೆ ಹುಟ್ಟಿತು ಮುಂದೆ ಹೇಗೋ ಏನೋ ಮಾತುಕತೆಯೂ ನಡೆದು ಜಾನಕಿ ಮೂಡುಮನೆ ನೇರಿದಳು

ಅವಳ ಆಗಮನಕ್ಕೆ ಸಾವಿತ್ರಿಯೂ ಅಡ್ಡ ಬರಲಿಲ್ಲ "ಮಗೂ" ಎಂದು ಪ್ರೀತಿಯಿಂದಲೇ ಸಾವಿತ್ರಿ ಅವಳನ್ನು ಕರೆಯತೊಡಗಿದಳು

"ಅತ್ತೇ, ಅತ್ತೇ" ಎಂದು ಜಾನಕಿಯೂ ಅಪಾರವಾದ ಆರೈಕೆ ಉಪಚಾರಗಳನ್ನು ಸಾವಿತ್ರಿಗೆ ಮಾಡುತ್ತ ಬಂದಳು ಅವಳಿಗೂ ಜಾನಕಿಯ ಆರೈಕೆಯಿಂದ ಎಷ್ಟೋ ಸಮಾಧಾನವಾಯಿತು ಮನಸ್ಸೂ ನೆಮ್ಮದಿಯಿಂದ ಉಳಿಯಹತ್ತಿತು ಯಾಕೆಂದರೆ ಜಾನಕಿ ಮಾತಿಗೆ ಕುಳಿತಳೆಂದರೆ ರೇಡಿಯೋಕ್ಕಿಂತ

ಹೆಚ್ಚಿನ ಸೇವೆ ಸಲ್ಲಿಸುವವಳು ಸಾವಿತ್ರಿಯ ಬೆನ್ನಿಗೆ ಎಣ್ಣೆ ತಿಕ್ಕುತ್ತ, ಬಿಸಿ ನೀರು ಎರೆಯುತ್ತ ಆನಂದದಿಂದ ಜಾನಕಿಯೂ ದಿನಕಳೆಯುತ್ತಿದ್ದಳು

ಜಾನಕಿಯ ವಯಸ್ಸೂ ಬಹಳವಿಲ್ಲ ಇಪ್ಪತ್ತೈದು ಮೂವತ್ತು ವರುಷ ಗಳ ನಡುವೆ ಇರಬಹುದು ಸ್ವಲ್ಪ 'ಎಣ್ಣೆಗಪ್ಪು' ಬಣ್ಣದ ಮೈ ಅವಳದು ಸುದೃಢಕಾಯಳೂ ಆಗಿದ್ದಳು ಯಾವ ಕೆಲಸ ಮಾಡಲಿಕ್ಕೂ ಗಟ್ಟಿ ಅಂತೇ ಧೈರ್ಯವಂತಳೂ ಅಹುದು ಮೈಮುರಿದು ದುಡಿಯುವುದರಲ್ಲಿಯೂ ಹಿಂದು ಳಿದವಳಲ್ಲ ಇಂಥವಳ ಸೇವೆಯನ್ನು ಹೊನ್ನಪ್ಪಯ್ಯ ತಿರಸ್ಕರಿಸುತ್ತಾರೆಯೇ ? ಜಾನಕಿ ಮನೆ ಸೇರಿದ ಒಂದೆರಡು ತಿಂಗಳಲ್ಲೇ, "ಹೌದೇ" ಎಂದು ಹೆಂಡತಿ ಯನ್ನು ಹುರುಪಿನಿಂದ ಕರೆದರು

"ಯಾಕೆ?" ಎಂದಳು ಸಾವಿತ್ರಿ

"ಹೇಗಿದ್ದಾಳೆ ಜಾನಕಿ ?"

"ಕೆಲಸವೆಂದರೆ ಕೆಲಸ ಅವಳದು ! ಮೈಗಳ್ಳತನವೆನ್ನುವುದು ಅವಳ ಜನ್ಮಕ್ಕೆ ಗೊತ್ತಿಲ್ಲ" ಎಂದು ಸಾವಿತ್ರಿಯೂ ಜಾನಕಿಯ ಕೆಲಸಗಳ ನಾಜೂಕು ತನಗಳನ್ನು ಮನವಾರೆ ಹೊಗಳಿದಳು ಹೊನ್ನಪ್ಪಯ್ಯನವರೂ ತಾವು ಆರಿಸಿ ತಂದ ಆಳಿನ ಬಗ್ಗೆ ಹೆಂಡತಿಯ ಹೊಗಳಿಕೆಯನ್ನು ಕೇಳಿ ಮತ್ತೂ ಅಷ್ಟು ಉಬ್ಬಿದರು

ನಾಲ್ಕಾರು ತಿಂಗಳುಗಳು ದಾಟುವುದರೊಳಗೆ ಸವತೀಕೆರೆಯಿಂದ ಜಾನ ಕಿಯ ಅಣ್ಣ ಹತ್ತಾರು ಸಲ ಮೂಡುಮನೆಗೆ ಬಂದು ಹೋಗಿದ್ದ ಬಂದಬಂದಾ ಗಲೆಲ್ಲ ಸೋಲೇ ಅವನಿಗೆ ಕಟ್ಟಿಟ್ಟಿತ್ತು

"ನೋಡು ಜಾನಕಿ, ನಿನಗೂ ತಿಳಿಯುತ್ತದೆ ನೀನೇನು ಸಣ್ಣವಳಲ್ಲ ನೀನು ಈ ವಯಸ್ಸಿನಲ್ಲಿ—ಈ ಪರಿಸ್ಥಿತಿಯಲ್ಲಿ ಹೀಗೆ ಮತ್ತೊಬ್ಬರ ಮನೆಯಲ್ಲಿ ಇರುವುದು ಸರಿಯಲ್ಲ ನೀನು ಎಷ್ಟೇ ನೀತಿವಂತಳೆಂದು ಎನಿಸಿಕೊಳ್ಳಲು ಪ್ರಯತ್ನಿಸಿದರೂ ಲೋಕದ ಕಣ್ಣು ನಿನ್ನನ್ನು ದೂಷಿಸದೆ ಬಿಡದು ಬಡತನ ವಾಗಲಿ, ಸಿರಿತನವಾಗಲಿ ಇದ್ದದ್ದನ್ನು, ದೇವರು ಕೊಟ್ಟಷ್ಟನ್ನು ಸುಖವಾಗಿ ಉಣ್ಣೋಣ ಎಲ್ಲಿ ಇರಬೇಕೋ ಅಲ್ಲಿ ಇದ್ದರೆ ಅದಕ್ಕೆ ಮರ್ಯಾದೆ ಉಂಟು. ಅದನ್ನು ಕಳೆದುಕೊಂಡ ಜೀವನಕ್ಕೆ ಬೆಲೆ ಇಲ್ಲ ನಾನು ಹೇಳುವುದು ಸಾಕಾ ದರೆ ನನ್ನೊಡನೆ ಬಾ ಮನೆಯಲ್ಲೇ ಇರು ನಿನಗೂ ಮರ್ಯಾದೆ, ನಮಗೂ

ಯೋಗ್ಯವೆನಿಸೀತ—ಇಲ್ಲವಾದರೆ ನಮಗೂ ನಿನಗೂ ಕೂಡಿಯೆ ಅಪಮಾನ ವಾಗುತ್ತದೆ " ಎಂದು ಸಾರಿ ಸಾರಿ ಹೇಳಿದ್ದ—ಜಾನಕಿಯ ಅಣ್ಣ

ಜಾನಕಿ ದಿಟ್ಟತನದಿಂದ " ನಾನಿನ್ನು ಸವತೀಕೆರೆಯ ಮನೆಯ ಮೆಟ್ಟಲು ಹತ್ತುವುದಿಲ್ಲ ಅಲ್ಲಿ ನನಗೆ ಯಾರಿದ್ದಾರೆಂದು ಬರುವುದು ? ನನ್ನ ಸೌಭಾಗ್ಯ ವೆಲ್ಲ ಮುಗಿದು ಹೋಗಿದೆ " ಎಂದು ಹೇಳುತ್ತ ಅಳುವುದನ್ನು ಕೂಡ ಎಬ್ಬಿಸಿ—ಅಣ್ಣನನ್ನು ಹೆದರಿಸಿ ಹಿಂದೆ ಕಳುಹಿಸಿದ್ದಳು

ಜಾನಕಿಯ ಸಲವಾಗಿ ಮೂಡುಮನೆಯವರೂ ಆ ಘಟನೆಯಲ್ಲಿ ತಲೆ ಹಾಕಬೇಕಾಯಿತು ಆದರೆ ಹೊನ್ನಪ್ಪಯ್ಯ ಅವಳ ಅಣ್ಣನ ತಲೆ ಕಂಡೊಡನೆ ಅತ್ತ ಸುಳಿಯದೆ ಎಲ್ಲಿಗೋ ತಲೆ ತಪ್ಪಿಸುತ್ತಲೂ ಇದ್ದರು ಅಲ್ಲದೆ ಜಾನಕಿ ಯಾದರೂ " ಆ ವಿಷಯದಲ್ಲಿ ಅವರೇನು ಹೊಣೆಗಾರರಲ್ಲ ಅದು ನನ್ನ ಖುಷಿ ಅವರನ್ನು ನೀನೇನು ಪಂಚಾಯ್ತಿಕಗ ಕರೆಯುವುದು ಬೇಡ " ಎಂದು ಹೊನ್ನಪ್ಪಯ್ಯನವರ ಹೊಣೆಯನ್ನೂ ಹಾರಿಸುತ್ತಿದ್ದಳು

" ನೀನು ಹೇಳುತ್ತಿ ಸರಿ ಆದರೆ ನಾನು ನಿನ್ನ ಮಾತಿನಂತೆ ನಡೆಯು ವುದು ನ್ಯಾಯಕ್ಕೆ ವಿರುದ್ಧ ಅವರನ್ನೂ ಒಂದು ಮಾತು ಕೇಳದಿದ್ದರೆ ನಾನು ಅಪರಾಧಿಯಾಗುತ್ತೇನೆ " ಎಂದು ಅವಳ ಅಣ್ಣನೂ ಒಮ್ಮೆ ಹೊನ್ನಪ್ಪಯ್ಯ ನವರು ಮನೆಗೆ ಬರುವತನಕ ಮೂಡುಮನೆಯಲ್ಲೇ ಬಿಡಾರ ಹೂಡಿದ ಉಪಾ ಯ ವಿಲ್ಲದ ಹೊನ್ನಪ್ಪಯ್ಯನವರೂ ಅವನ ಮುಂದೆ ಪ್ರತ್ಯಕ್ಷರಾಗಬೇಕಾಯಿತು ಯಾರು ಏನು ಹೇಳಿದರೂ ಜಾನಕಿ ತನ್ನ ಛಲವನ್ನು ಬಿಡಲಿಲ್ಲ.

ಕೊನೆಗೆ ಅವಳ ಅಣ್ಣ " ನನ್ನ ಜವಾಬುದಾರಿ ತಪ್ಪಿತು ನನ್ನನ್ನು ಇನ್ನು ಮೇಲೆ ದೂರಬೇಡ " ಎಂದು ಹೇಳಿ ಸವತೀಕೆರೆಗೆ ಹೋದ ಹೋದ ವನು ಮತ್ತೆ ಬರಲಿಲ್ಲ ಇವಳೂ ಅಲ್ಲಿಗೆ ಹೋಗಲಿಲ್ಲ ಇಬ್ಬರದೂ ಅದೇ ಕೊನೆಯ ನಿರ್ಣಯವೆನಿಸಿತು ಅಂದಿನಿಂದ ಹೊನ್ನಪ್ಪಯ್ಯನವರಲ್ಲೇ ಸಾವಿ ತ್ರಿಯ ಆರೈಕೆ ಮಾಡುತ್ತ ಜಾನಕಿ ದಿನ ತೆಗೆಯತೊಡಗಿದಳು

ಇಲ್ಲದ ನಗೆ ಮಾತುಗಳನ್ನು ಆಡುತ್ತ ಹೊನ್ನಪ್ಪಯ್ಯನವರನ್ನು ಬೇಕೆಂದೇ ನಗಿಸುತ್ತಿದ್ದಳು ಅದೂ ಸಾವಿತ್ರಿಯ ಸಮಕ್ಷಮದಲ್ಲೇ ಅವರೊ ಡನೆ ಸರಾಗವಾಗಿ ಸಂಭಾಷಣೆ ನಡಿಸಿ ಕುಣಿದಾಡುತ್ತಿದ್ದಳು ! ಸಾವಿತ್ರಿಗೂ ಒಮ್ಮೊಮ್ಮೆ ಅವಳ ಸೋಗು ಸೇಲೆಗಳನ್ನು ನೋಡಿ ಅಸಹ್ಯವೆನಿಸುತ್ತಿತ್ತು

ಆದರೆ ಹೊನ್ನಪ್ಪಯ್ಯ ಅವುಗಳಿಗೆ ಅನುವು ಕೊಡುತ್ತಿದ್ದರೆಂದರೂ ತಪ್ಪಾಗದು ಅವಳ ಪ್ರತಿಯೊಂದು ಕೆಲಸಗಳೂ ಅವರಿಗೆ ಆದರ್ಶಪ್ರಾಯವಾಗಿ ಕಾಣುತ್ತಿದ್ದವು

"ನಿನಗೆ ಸಂಬಳ ಎಷ್ಟು ಕೊಡಲಿ ?" ಎಂದು ಹೊನ್ನಪ್ಪಯ್ಯನವರೂ ಒಮ್ಮೊಮ್ಮೆ ಕೇಳುತ್ತಿದ್ದರು

"ಸಂಬಳ ತೆಗೆದುಕೊಂಡು ಕೆಲಸ ಮಾಡಲಿಕ್ಕೆ ನಾನು ಇಲ್ಲಿ ಬಂದಿಲ್ಲ" ಎಂದು ಅವಳು ನಗುತ್ತ ಮಾತು ಹಾರಿಸುತ್ತಿದ್ದಳು

"ನೀನು ಬೇಡವೆಂದರೂ ನಾನು ಕೇಳಬೇಕಲ್ಲ !" ಎಂದು ಇವರೂ ಉತ್ತರ ಕೊಡುತ್ತಿದ್ದರು ಅವರು ಹೀಗೆಲ್ಲ ಮಾತಾಡುತ್ತಿರುವುದನ್ನು ನೋಡಿ ಸುಮತಿಗೆ ಸಿಟ್ಟು ಬಂದರೂ ಅದನ್ನು ನುಂಗಿ ಸುಮ್ಮನೆ ಕೂಡುತ್ತಿದ್ದಳು ದಿನೇ ದಿನೇ ಜಾನಕಿಯು ಸ್ವಾತಂತ್ರ್ಯದಿಂದ ವರ್ತಿಸುವುದನ್ನು ಕಡಿಮೆ ಮಾಡದೆ ತಾಟಕಿಯಂತಾಗುವುದನ್ನು ಕಂಡು ಸುಮತಿಯ ಮನಸ್ಸು ಸ್ಥಿಮಿತದಲ್ಲಿ ಉಳಿಯಲಿಲ್ಲ ತಾಯಿಯೊಡನೆ ಒಮ್ಮೆ ಈ ಬಗ್ಗೆ ಕೂಲಂಕಷವಾಗಿ ಮಾತಾಡಬೇಕೆಂದು ನಿರ್ಧರಿಸಿದಳು ಆದರೆ ಇತ್ತ ಸಾವಿತ್ರಿಯ ಜಾಡ್ಯ ಗುಣಮುಖಕ್ಕೆ ಇಳಿಯದೆ ದಿವಸ ಹೋದಷ್ಟಕ್ಕೆ ಹೆಚ್ಚಾಗುತ್ತ ಬರತೊಡಗಿತ್ತು

ಕಾಯಿಲೆ ಕಡಿಮೆಯಾಗದೆ ಸಾವಿತ್ರಿ ಚಾವಡಿಯ ಮೂಲೆಯಲ್ಲಿ ಹಾಸಿಗೆಯನ್ನು ಕಾಯಬೇಕಾಯಿತು ಎದ್ದು ಹೊರಗೆ ಹೋಗಲು ಕೂಡ ತ್ರಾಣವಿರಲಿಲ್ಲ ಬಹಳ ಹೊತ್ತು ಗಟ್ಟಿಯಾಗಿ ಮಾತಾಡುವುದೂ ಕಷ್ಟವಾಗಿತ್ತು ಜಾನಕಿಯು ಆವಳ ಹತ್ತಿರ ಕುಳಿತು ಪಾಲನೆ ನಡೆಸಿದ್ದಳು ಅವಳು ಇಲ್ಲದಾಗ ಸುಮತಿಯೇ ತಾಯಿಯ ರುಗ್ಣಶಯ್ಯೆಯ ಹತ್ತಿರವಿರಬೇಕಾಗುತ್ತಿತ್ತು ಹೊನ್ನಪ್ಪಯ್ಯನವರು ಮನೆಯಲ್ಲಿ ಇದ್ದಾಗ ಮಾತ್ರ ಜಾನಕಿ ಇಲ್ಲದ ಉಪಚಾರಗಳನ್ನು ಮಾಡುತ್ತ ಸಾವಿತ್ರಿಯ ಬಳಿ ಕೂಡುತ್ತಿದ್ದಳು ಅವರು ಇಲ್ಲದಾಗ ಅವಳೂ ಇರುತ್ತಿರಲಿಲ್ಲ

ತಾಯಿಯ ಹತ್ತಿರ ಸುಮತಿ ಕೂತುಕೊಂಡು ಅವಳ ಕೈ ಸವರುತ್ತಿದ್ದಳು ಆಗ ಸಾವಿತ್ರಿ ಮೆಲ್ಲನೆ ಕಣ್ಣು ತೆರೆದು ಮಗಳತ್ತ ದೃಷ್ಟಿ ಚೆಲ್ಲಿದಳು ಅಂದು [illegible] ಪರಿಸ್ಥಿತಿಯಾದರೂ ಚಿಂತಾಜನಕವಿತ್ತು, ಹಾಗೆ ಆಗಲಿಕ್ಕೆ ಹತ್ತಿ ಈಗ

ಒಂದೆರಡು ತಿಂಗಳಾಗಿದ್ದವು ಹತ್ತಾರು ದಿನಗಳಿಗೊಮ್ಮೆ ಕಾಯಿಲೆ ವಿಪರೀತ ವಾಗುತ್ತಿತ್ತು ಮತ್ತೆ ಮರುದಿನ ಸ್ವಲ್ಪ ಕಡಿಮೆಯಾದ ಹಾಗೆ ಅನಿಸುತ್ತಿತ್ತು ಆದರೆ ಸಂಪೂರ್ಣ ಗುಣವಾಗುವುದರೊಳಗೆ ಪುನಃ ಮರಕಳಿಸಿ ಎಲ್ಲರನ್ನೂ ಗಾಬರಿ ಮಾಡುತ್ತಿತ್ತು—ಸಾವಿತ್ರಿಯ ರುಜಿ ಸಾವಿತ್ರಿ ಅತ್ತ ಇತ್ತ ನೋಡಿ ದಳು ಅಲ್ಲಿ ಯಾರೂ ಇದ್ದಂತೆ ಕಾಣಲಿಲ್ಲ ಹತ್ತಿರ ಇದ್ದ ಸುಮತಿಯನ್ನು ಬಿಟ್ಟರೆ ಬೇರಾರೂ ಇಲ್ಲವೆಂಬುದನ್ನು ಖಾತ್ರಿ ಮಾಡಿಕೊಂಡಳು

"ಸುಮತೀ" ಎಂದಳು ಸಾವಿತ್ರಿ

"ಯಾಕಮ್ಮಾ?" ಎನ್ನಲು ಸುಮತಿಯ ಕಂಠ ಬರಲಿಲ್ಲ ಆದರೂ ಮನಸ್ಸು ಗಟ್ಟಿಮಾಡಿ ಕೇಳಿದಳು

"ಎಲ್ಲರೂ ಎಲ್ಲಿ ಹೋಗಿದ್ದಾರೆ ?"

"ಅತ್ತ ಇತ್ತ ಕೆಲಸದ ಮೇಲೆ ಹೋಗಿರಬೇಕು"

"ಹತ್ತಿರದಲ್ಲಿ ಯಾರೂ ಇಲ್ಲ ಹೌದೋ ಅಲ್ಲ ?"

"ಇಲ್ಲ"

"ಇತ್ತ ಬಾ" ಎಂದು ಸಾವಿತ್ರಿ ಕರೆದಳು

ಸುಮತಿ ಅಲ್ಲಿಯೇ ಕೂತಿದ್ದರೂ ತಾಯಿಯ ಮುಖದ ಹತ್ತಿರ ತಲೆ ಬಾಗಿಸಿ—ಕಿವಿಗೊಟ್ಟು ಕೇಳತೊಡಗಿದಳು

"ಏನಮ್ಮಾ—ಹೇಳು" ಎಂದಳು

"ನಾನು ಹೇಳಿದ್ದು ನಿನಗೆ ಅರ್ಥವಾಯಿತೇ ?"

"ಏನು ?"

"ಈ ಗಂಡುಹುಲಿ ಮನೆಗೆ .. ಬಂದಿದೆಯಲ್ಲ !"

"ಜಾನಕಿಯ ವಿಷಯವೇ ?"

"ಹೌದು"

"ಏನಾಯಿತು ?"

"ಏನಾಯಿತೆಂದು ಹೇಳುವುದು? ಎಲ್ಲ ನನ್ನ ಅದೃಷ್ಟ !"

"ಹಾಗೇಕೆ ಹೇಳುತ್ತಿ ಅಮ್ಮಾ ?"

"ದೇವರು ಸಾಯುವ ಕಾಲಕ್ಕೇ ನನ್ನ ಕಣ್ಣಿಗೆ ಆ ದೃಶ್ಯ ತೋರಿಸಬಾರ ದಿತ್ತು !" ಎಂದು ಸಾವಿತ್ರಿ ಅಳತೊಡಗಿದಳು

"ಅಯ್ಯೋ ನೀನು ಅಳಬೇಡ, ಅಳಬೇಡ" ಎಂದು ಸುಮತಿಯೂ ಅಳುತ್ತ ತಾಯಿಯನ್ನು ಸಮಾಧಾನಪಡಿಸಿದಳು ಅವಳಿಗೂ ತಾಯಿ ಹೇಳುವ ಮಾತಿನ ಅರ್ಥವಾಗಿತ್ತು ಹಿಂದೆ ಆ ರೀತಿ ಆಗಿ ಹೋದ ದೃಶ್ಯ ವನ್ನು ನೆನೆದಾಗ ಅವಳಗ ಮುಂದಿನ ಭವಿಷ್ಯದ ಮಾರ್ಗ ಸುಖಕರವಾಗಿ ಕಾಣಲಿಲ್ಲ ತನ್ನ ಪಾಡು ದಾರುಣ ದುಃಖಕ್ಕೆ ಒಳಗಾಗುವುದರಲ್ಲಿ ಸಂಶಯ ವಿಲ್ಲವೆಂದು ನಿರ್ಧರಿಸಿದಳು ಅಂತೇ ತನ್ನ ತಾಯಿಯ ಪರಿಸ್ಥಿತಿಯನ್ನು ನೆನೆದು ಅವಳ ಕರುಳು ದುಃಖದಿಂದ ಕೈಯಲ್ಲಿ ಬಂತು

ಮನುಷ್ಯ ಕಣ್ಣಿಲ್ಲದ ಕಾಮುಕ್ಕಾಗಿ ಬಗೆಯಲಾರದ ದ್ರೋಹ ಮಾಡು ತ್ತಾನಲ್ಲ—ಎಂದು ಅವಳಿಗೆ ಚಿಂತೆಯೂ ಆಯಿತು ತನ್ನ ತಂದೆ ಕುರುಡು ಕಾಮನ ಮೂಢ ಭಕ್ತರೆಂದು ಅವಳ ಚಿತ್ತ ನುಡಿಯತೊಡಗಿತು ಇಳಿವಯಸ್ಸಿ ನಲ್ಲೂ ತಂದೆಯ ವಿಷಯಲಾಲನೆಯನ್ನು ಎಣಿಸಿ ಸುಮತಿ ಮರುಗಿದಳು ಆದರೆ ಅವಳು ನಿರುಪಾಯಳಾಗಿದ್ದಳು ಅವಳ ಸ್ಥಾನ ಆ ಮನೆಯಲ್ಲಿ ಜಾನಕಿ ಗಿಂತ ಕಿರಿದಾಗಿತ್ತು ತಾಯಿ ತೀರಿದ ಮೇಲೆ ಅಲ್ಲಿ ದಿನ ಕಳೆಯುವ ಬಗೆ ಯನ್ನು ಆಲೋಚಿಸುವಾಗ ಸುಮತಿಗೆ ಘೋರ ನರಕ ಕಣ್ಣು ಮುಂದೆ ಕಟ್ಟು ತ್ತಿತ್ತು

ತಾನು ಹೇಳಬೇಕಂದು ಮನಸ್ಸಿನಲ್ಲಿಟ್ಟುಕೊಂಡು ಹೋದ ವಿಷಯ ವನ್ನೇ ತಾಯಿ ತನಗೆ ಹೇಳಿದುದನ್ನು ಕೇಳಿ ಸುಮತಿ ನೊಂದುಕೊಂಡಳು ತಾಯಿಯ ಮನಸ್ಸಿಗೆ ಎಂಥ ಘಾತವಾಗಿರಬಹುದೆಂದು ಕಲ್ಪಿಸತೊಡಗಿದಳು ಇತ್ತ ಸಾವಿತ್ರಿಯೂ ಮಗಳ ಚಿಂತಾಜನಕ ಭವಿಷ್ಯತ್ತನ್ನ ನೆನೆ—ನೆನೆದು ಕೊರಗುವುದನ್ನು ಬಿಡಲಿಲ್ಲ

ಹಗಲಲ್ಲಿ ಸುಬ್ಬಿಯೂ ಬಂದು ಅವಳ ಬೇನೆಯ ಹಾಸಿಗೆಯ ಹತ್ತಿರ ಕುಳಿತು ನಾಲ್ಕು ಸಮಾಧಾನದ ಮಾತುಗಳನ್ನು ಹೇಳಿ ಹೋಗುತ್ತಿದ್ದಳು ವಾರಕ್ಕೊಮ್ಮೆಯಾದರೂ ಶಂಕರ ತನ್ನ ಕೆಲಸಗಳಲ್ಲೇ ಬಿಡುವು ಸಾಧಿಸಿ ಕೊಂಡು ಸಾವಿತ್ರಿಯನ್ನು ನೋಡಿಕೊಂಡು ಹೋಗುತ್ತಿದ್ದ ಅವಳ ಕಾಯಿಲೆ ಪರಮಾವಧಿಯನ್ನು ಮುಟ್ಟಿ, ಇನ್ನು ತಾನು ಬದುಕುವುದಿಲ್ಲವೆಂಬ ಕಲ್ಪನೆ ಅವಳಿಗೇ ಬಂದ ಒಂದು ದಿನ, ಶಂಕರ ಅವಳ ಹತ್ತಿರ ಕುಳಿತಾಗ ಮೆಲ್ಲನೆ ಏನೋ ಹೇಳಿದಳು

"ಏನು?" ಎಂದು ಶಂಕರ ಕೈಮಾಡಿ ಕೇಳಿದ

"ಬಾ ಇಲ್ಲಿ" ಎಂದಳು ಶಂಕರ ಆವಳ ಸಮೀಪಕ್ಕೆ ಹೋಗಿ "ಏನು ಹೇಳಿ" ಎಂದ

"ನಾನು ಒಂದು ಮಾತು ಕೇಳುತ್ತೇನೆ"

"ಕೇಳಿ"

"ನೀನು ಅದನ್ನು ಪಾಲಿಸಬೇಕು"

"ಪಾಲಿಸುತ್ತೇನೆ"

"ನನ್ನ ಸುಮತಿಯನ್ನು ಕಷ್ಟ ಕಾಲದಲ್ಲಿ ಬಿಟ್ಟು ಹಾಕಬೇಡ"

"ಅಂದರೆ!" ಎಂದು ಶಂಕರ ಕೇಳಿದ್ದಕ್ಕೆ ಸಾವಿತ್ರಿ "ಅಷ್ಟೇ" ಎಂದು ಸುಮ್ಮನಾದಳು

ಮುಂದೆ ಶಂಕರನೂ ಸಂಭಾಷಣೆ ಬೆಳೆಸಲಿಲ್ಲ ಅಂದಿನಿಂದ ಸಾವಿತ್ರಿಯ ಸ್ಥಿತಿ ವಿಷಮಾವಸ್ಥೆಯಲ್ಲೇ ಇತ್ತು

ಸಾವಿತ್ರಿ ಸಾಯುವ ಒಂದು ತಿಂಗಳ ಮುನ್ನ ಪತಿಯೊಡನೆ ಹಾಗೂ ಜಾನಕಿಯೊಡನೆ ಮಾತಾಡುವುದು ಬಿಟ್ಟು, ಅವರಲ್ಲಿ ಒಬ್ಬರು ತನ್ನ ಹತ್ತಿರ ಬಂದರೂ ಕಣ್ಣು ತೆರೆದು ನೋಡುತ್ತಿರಲಿಲ್ಲ

ಹತ್ತಿರ ಕೂತಿದ್ದರೆ "ಸರಿಯಿರಿ" ಎಂದು ಕಣ್ಣು ಮುಚ್ಚಿಯೇ ತಲೆ ಅಲ್ಲಾಡಿಸುತ್ತಿದ್ದಳು—ಮೌನವಾಗಿಯೇ ಸ ಮತಿ ಇಲ್ಲವೆ ಸುಬ್ಬಿ, ಅವಳ ಆರೈಕೆಯನ್ನು ಕೊನೆಯ ದಿನಗಳಲ್ಲಿ ಮಾಡುತ್ತಿದ್ದರು ಸಾಯುವ ಕಾಲಕ್ಕೂ ಪತಿಯ ಕೈಯ ತುಳಸಿಯ ಗಂಗೋದಕವನ್ನೂ ಅವಳು ಸ್ವೀಕರಿಸಲಿಲ್ಲ! ತನ್ನ ಮಕ್ಕಳನ್ನು ಎಲ್ಲ ಕಣ್ಣು ತುಂಬ ನೋಡಿ "ನೀವು ಸುಖವಾಗಿ ಇರಬೇಕು" ಎಂದು ಹೇಳಿದ್ದಳೇ ಹೊರತು ಹೊನ್ನಪ್ಪಯ್ಯ ಹತ್ತಿರ ಹೋದೊಡನೆ ಕಣ್ಣು ಮುಚ್ಚುತ್ತಿದ್ದಳು

ಇದರ ಗುಟ್ಟು ರಾಘವೇಂದ್ರನಿಗೂ ಗೊತ್ತಾಗಿತ್ತು ಅವನು ತಂದೆಯ ಮುಂದೆ ಮೂಕನಾಗಿಯೇ ಉಳಿಯುತ್ತಿದ್ದ ಹೊನ್ನಪ್ಪಯ್ಯನವರಿಗೂ ತಾನು ಮಾಡುವುದು ಅಪರಾಧವೆಂದು ಅನಿಸುತ್ತಿತ್ತೋ ಏನೋ ಆದರೆ ತಾನು ಹೆಂಡತಿಯನ್ನು ನಿರಾಕರಿಸಿ ಯಾವ ಅಪರಾಧವನ್ನು ಮಾಡುತ್ತಲಿಲ್ಲವೆಂದೂ ಅವರ ಮನಸ್ಸು ಉತ್ತರಿಸುತ್ತಿತ್ತು ಜಾನಕಿಯಾದರೂ ಅದೇ ರೀತಿಯಿಂದ

ಧ್ವನಿ ನೇರಿಸುತ್ತಿದ್ದಳು

ಮಾತೆಯ ಉತ್ತರಕ್ರಿಯಾದಿಗಳನ್ನು ಮುಗಿಸಿ ಮರಳಿ ತಮ್ಮ ತಮ್ಮ ಠಾಣಗಳನ್ನು ಮಕ್ಕಳು ನೇರಿದರು ಸಮತಿಯ ಪಾಡು ಮಾತ್ರ ಅವಳು ಭವಿಷ್ಯ ನುಡಿದುಕೊಂಡಂತೆ ಆಗುವುದರಲ್ಲಿತ್ತು ಗಟ್ಟಕ್ಕೆ ಹೋಗುವಾಗ ರಾಘವೇಂದ್ರ ಪುನಃ ಸಮಾಧಾನ ಹೇಳಿ ಹೋಗಿದ್ದ

"ಎಷ್ಟು ಖರ್ಚಾದರೂ ಶಿವರಾಯನನ್ನು ಹುಡುಕಿ ತಾರದೆ ಬಿಡುವುದಿಲ್ಲ" ಎಂದು ಸುಮತಿಗೆ ಧೈರ್ಯವನ್ನು ಕೊಟ್ಟಾಗಿತ್ತು ಆತ ಇತ್ತ ಯಾವ ಖರ್ಚೂ ಇಲ್ಲದೆ ಅಣ್ಣಪ್ಪಯ್ಯನವರ ಅಳಿಯನ ಪತ್ತೆಯಾದದ್ದು, ಅವನೊಡನೆ ಸಂಜೀವಿ ಸಂಸಾರ ನಡೆಸುತ್ತಿದ್ದದ್ದು, ಸುಮತಿಯ ಕಣ್ಣಿಗೂ ಬಿದ್ದಿತ್ತು

ರಾಘವೇಂದ್ರನೂ ಅದನ್ನು ನೋಡಿ, "ನನ್ನ ತಂಗಿಯ ಬಾಳಿಗೆ ಹತ್ತಿದ ರಾಹು ಎಂದು ತೊಲಗುತ್ತಾನೋ" ಎಂದು ಮನದಲ್ಲಿ ಮರುಗಿಯೂ ಹೋಗಿದ್ದ

ಸಾವು ದಾಳಿ ಮಾಡಿ ಹೋದ ಮೂಡುಮನೆಯಲ್ಲಿ ಕೆಲವು ದಿವಸಗಳ ಪರ್ಯಂತ ನೆಂಟರು ಇಷ್ಟರು ತುಂಬಿದ್ದರು ಅವರೆಲ್ಲ ತಮ್ಮ ಮನೆಗೆ ಹೋದರು ಮನೆಯಲ್ಲಿ ಪುನಃ ಶೂನ್ಯತೆ ಕವಿಯಿತು ಮನೆ ಬರಿದಾದಂತೆಯೂ ಸುಮತಿಗೆ ಅನಿಸಿತು ಎಷ್ಟೋ ದಿನಗಳ ತರುವಾಯ ಹೇಗೋ ಅವಳು ಮನಸ್ಸಿಗೆ ನೆಮ್ಮದಿ ತಂದುಕೊಂಡು ತಾಯಿಯ ಮರಣವನ್ನು ಮರೆತಳು ಆದರೆ ಈ ಸವತೀಕೆರೆಯ ವಿಧವೆ ದಿನಗಳು ಉರುಳುತ್ತಿದ್ದಂತೆ ತನ್ನ ಯಜಮಾನಿಕೆಯನ್ನು ಅರಳಿಸುತ್ತ ಬಂದಳು ಮನೆಯಲ್ಲಿ ಅವಳದೇ ಹಿರಿಯತನ ನಡೆಯತೊಡಗಿತು ಸುಮತಿಗೂ ಅದನ್ನೆಲ್ಲ ನೋಡಿ ವ್ಯಸನವಾಯಿತು

ಜಾನಕಿ, ಸಾವಿತ್ರಿಯ ಸಾವಿನ ತರುವಾಯ 'ಮೂಡುಮನೆ ಯಲ್ಲಿ ಇರುವುದಿಲ್ಲವೆಂದು ಹೊನ್ನಪ್ಪಯ್ಯನವರಿಗೆ ಹೇಳಿದಳು. ತನಗೊಂದು ಬೇರೆ ಬಿಡಾರಬೇಕೆಂದು ಅರ್ಜಿಹಾಕಿದಳು ಹೊನ್ನಪ್ಪಯ್ಯನವರಿಗೆ ಅವಳದೊಂದು ಜಟಿಲ ಸಮಸ್ಯೆಯಾಗಿ ಕೆಲವು ದಿವಸಗಳ ತನಕ ತಲೆ ಕೆಡಿಸತೊಡಗಿತು

ಆದರೆ ಅಲ್ಲಿಯೇ ಹತ್ತಿರದ ಒಬ್ಬ ದುಡಿದು ತಿನ್ನುವ ಒಕ್ಕಲು "ಸಾವಿತ್ರಿ

ಸತ್ತಮೇಲೆ ನಾನಿಲ್ಲಿ ವಾಸಿಸುವುದಿಲ್ಲ" ಎಂದೋ ಏನೋ ಮೂಢಮನೆಯಿಂದ ಒಕ್ಕಲು—ಹೋದ! ಅವನ ಮನೆಯಲ್ಲಿ ಬೇರೆ ಯಾರಿಗೂ ಪ್ರವೇಶ ಕೊಡ ಲಿಲ್ಲ—ಹೊನ್ನಪ್ಪಯ್ಯ

"ಹತ್ತಿರ ಕೂಡ ಹನ್ನೊಂದಾಗಿ ನಮ್ಮಲ್ಲೇ ಇದ್ದ ಬಿದ್ದ ಕೆಲಸಗಳನ್ನು ಮಾಡುತ್ತ ಇರು" ಎಂದರೂ "ಸಾಧ್ಯವಿಲ್ಲ" ಎಂದು ಹಟತೊಟ್ಟ ಜಾನಕಿ ಯನ್ನು ಆ ಮನೆಗೆ ರವಾನಿಸಿದರು

ಅವಳು ಆ ಮನೆಯಲ್ಲಿ ಹೊಸ ಬಿಡಾರ ಹೂಡಿದಳೇನೋ ಸರಿ ಆಲ್ಲಿ ರಾತ್ರಿ ಮಲಗಲಿಕ್ಕ ಅವಳಿಗೆ ಭಯ ಬರತೊಡಗಿತು ಈ ವಿಚಾರ ಹೊನ್ನ ಪ್ಪಯ್ಯನವರ ಕಿವಿಗೂ ಬಿತ್ತು

"ರಾತ್ರಿ ಮಲಗಲು ನಮ್ಮ ಅಷ್ಟು ದೊಡ್ಡ ಮನೆ ಇದೆಯಲ್ಲ" ಎಂದು ಅವರು ನಗುತ್ತ ಹೇಳಿದರು

ಜಾನಕಿ ನಕ್ಕು ನಲಿದಾಡುತ್ತ "ನಿಮಗೇನು ಗೊತ್ತುಂಟು ಕಾಕಾ? ಲೋಕದ ಕಣ್ಣಿಗೆ ನಾನು ನಿಮ್ಮಲ್ಲಿ ಇರುವುದು ಸರಿ ಕಾಣುವುದಿಲ್ಲ ಅದ ಕ್ಕಾಗಿ ಹೆಸರಿಗೆ ಒಂದು ಬೇರೆ ಮನೆ ನಾನು ಮಾಡಿಸಬೇಕಾಯಿತು" ಎಂದು ತಿಳಿಸಿದಳು

"ನಿನ್ನ ಆಲೋಚನೆ ಸರಿಯೇ" ಎಂದು ಹೊನ್ನಪ್ಪಯ್ಯನವರೂ ಅವಳ ಮಾತಿಗೆ ದಸ್ಕತ್ತು ಹಾಕಿದರು

ಅಲ್ಲದೆ "ನೀನೇನು ಅಲ್ಲಿ ಅಡುಗೆ ಮಾಡಬೇಕೆಂಬ ಅವಶ್ಯಕತೆ ಇಲ್ಲ ನಮ್ಮಲ್ಲೇ ಅಡುಗೆ ಮಾಡುತ್ತ ಇರು" ಎಂದೂ ಕೇಳಿಕೊಂಡರು

ಜಾನಕಿಗೆ, ಅವರು ಅಷ್ಟು, ಹೇಳುವ ಅಗತ್ಯವೂ ಇರಲಿಲ್ಲ ಅವಳು ಮೊದಲು ಆ ರೀತಿ ವಿಚಾರಿಸಿದ್ದಳಂತೆ

ಊರಿನಿಂದ ಗಟ್ಟಕ್ಕೆ ಹೋಗುವ ಮುಂಚೆ, ತಂದೆಯೊಡನೆ ರಾಘವೇಂದ್ರ ತನ್ನ ತಮ್ಮನ ಆಗ್ರಹದ ಮೇರೆಗೆ 'ಜಾನಕಿ'ಯ ವಿಷಯದಲ್ಲಿ ಒಂದೆರಡು ಮಾತುಗಳನ್ನು ಆಡಿದ್ದ ಮಕ್ಕಳ ಮುಂದೆಯೂ ಹೊನ್ನಪ್ಪಯ್ಯ ಸವತೀ ಕೆರೆಯ ಜಾನಕಿಯನ್ನು ಬಾಯಿತುಂಬ ಹೊಗಳಿದ್ದರು ಅವಳು ರಾತ್ರಿ-ಹಗಲು ನಿದ್ದೆಗೆಟ್ಟು ಸಾವಿತ್ರಿಯ ಆರೈಕೆ ಮಾಡಿದುದರಿಂದಲೇ ಅಷ್ಟು ದಿನಗಳ ವರೆಗೆ ಬದುಕಿದಳು ಎಂದೇ ತಾಯಿಯ ಮುಖವನ್ನಾದರೂ ಅವರೆಲ್ಲ (ಮಕ್ಕಳು)

ನೋಡುವಂತಾಯಿತು. ಎಂದು ಮುಂತಾಗಿ ಜಾನಕಿಯ ನೇವೆಯನ್ನು ಹೊನ್ನಪ್ಪಯ್ಯ ಮಕ್ಕಳೊಡನೆ ಬಣ್ಣಿಸಿದ್ದರು

ಇತ್ತ ಸುಮತಿ "ಅಣ್ಣಾ, ಅವಳಿಂದಾಗಿಯೇ ನಮ್ಮ ಅಮ್ಮ ಅಷ್ಟು ಬೇಗ ಸತ್ತಳು" ಎಂದು ವೊದಲಾಗಿ ಹೇಳುತ್ತ ತನಗೆ ಗೊತ್ತಿದ್ದ ಜಾನಕಿಯ ಮೋಹದ ಬಲೆ ಬೀಸುವ ಕೃತ್ಯಗಳನ್ನೂ ತನ್ನ ಸಹೋದರರ ಮನಮುಟ್ಟುವಂತೆ ನಿವೇದಿಸಿದ್ದಳು

ಕಾರಣ, ರಾಘವೇಂದ್ರ "ಅಪ್ಪವರೇ, ಅವಳನ್ನು ನಮ್ಮ ಮನೆಯಲ್ಲಿ ಇರಗೊಡಬೇಡಿ ಮತ್ತೆ ಇಲ್ಲದ ಅಪವಾದ ಬಂದೀತು ನಾವು ಗಟ್ಟಿನ ಮೇಲೆ ಮುಖ ತೋರಿಸುವುದು ಅಸಾಧ್ಯವಾಗಬಹುದು ಒಟ್ಟಾರೆ ಅವಳನ್ನು ಮನೆಯಲ್ಲಿ ಇರಲಿಕ್ಕೆ ಬಿಡಬೇಡಿ ನಮ್ಮ ಚಿಕ್ಕಪ್ಪನ ತಿರ್ಮಾಲೆಯ ಪ್ರಕರಣದಿಂದ ನಮಗೆ ಸಾಕಷ್ಟು ಮಂಗಳಾರತಿಯಾಗಿದೆ ಆದ್ದರಿಂದ ಅವಳನ್ನು ಕಳುಹಿಸಿರಿ" ಎಂದು ಅಪಾರವಾದ ಧೈರ್ಯ ತಂದುಕೊಂಡು ಹೇಳಬೇಕಾಯಿತು

ಹೊನ್ನಪ್ಪಯ್ಯನವರೇನು ಸಿಟ್ಟಿಗೇಳಲಿಲ್ಲ "ಹಾಗೆ ಅಪವಾದ ಬರುತ್ತದೆಂದು ನನಗೂ ಗೊತ್ತಿದೆ ನೀನೇನು ಹೆದರುವುದು ಬೇಡ ನಾನು ಅವಳಿಗೆ ನಮ್ಮ ಮನೆಯಿಂದ ಹೋಗಲು ಈ ಮೊದಲೇ ಹೇಳಿದ್ದೇನೆ ಅತೀ ಮೀರಿ ಅವಳು ಕೇಳದಿದ್ದರೆ ಆ ಕೋಟಿಪಾಂಡ್ಯನ ಮನೆ–ಖಾಲಿಯಾಗುವುದಿದೆ, ಅದರಲ್ಲಿ ಇವಳಷ್ಟಕ್ಕೆ ಇರಲು ವ್ಯವಸ್ಥೆ ಮಾಡಿಸುತ್ತೇನೆ" ಎಂದು ಮಗನಿಗೆ ಸಮಾಧಾನ ಹೇಳಿದ್ದರು ಆದರಂತೆ ವ್ಯವಸ್ಥೆಯನ್ನೂ ಮಾಡಿದ್ದರು

ಅಂತೂ ಸಾವಿತ್ರಿಯ ಮರಣದ ದುಃಖಮಯ ದಿನಗಳು ಕಳೆದು ಹೋದುವು ಕಾಲಪುರುಷನಷ್ಟು ಪರಿಣಾಮಕಾರಿಯಾದ ಔಷಧವನ್ನು ದುಃಖದ ರುಜೆಗೆ ಕೊಡುವವನು ಬೇರೆ ಯಾವ ವೈದ್ಯನೂ ಇಲ್ಲ ದಿನಗಳು, ತಿಂಗಳುಗಳು ಉರುಳಿದಂತೆ ದುಃಖ, ವ್ಯಥೆ, ಕಷ್ಟನಷ್ಟಗಳೂ ಹಳೆಯದಾಗುತ್ತ ಹೋಗುತ್ತವೆ ಅಂತೇ ಹೊನ್ನಪ್ಪಯ್ಯನವರು ಪತ್ನಿಯ ಮರಣದ ದುಃಖವನ್ನು ಮರೆತೇ ಬಿಟ್ಟರು ಜಾನಕಿ ಇಲ್ಲದಿದ್ದರೆ ಅಷ್ಟು ತೀವ್ರದಿಂದ ಅವರ ಮಡದಿಯ ವಿಯೋಗದ ಗಾಯ ಮಾಯವಾಗುತ್ತಿತ್ತೋ ಇಲ್ಲವೋ ಎಂದು ಹೇಳುವುದು ತೊಡಕಿನ ಸಮಸ್ಯೆ.

"ಹಾಗೆಲ್ಲ ಸತ್ತವರ ಸಲುವಾಗಿ ಚಿಂತೆ ಮಾಡುತ್ತ ಕುಳಿತರೆ, ಜೀವಂತ ಇದ್ದವರ ದೇಹ ಸುಟ್ಟು ಹೋಗುತ್ತದೆ ಸತ್ತವರು ಎಲ್ಲಿ ಹೋದರೋ ಏನೋ! ಅವರೊಡನೆ ನಾವೂ ಸಾಯಲಿಕ್ಕೆ ಸಾಧ್ಯವಿದೆಯೇ?" ಎಂದು ಜಾನಕಿ ಹೊನ್ನಪ್ಪಯ್ಯನವರನ್ನು ಸಂತೈಸುತ್ತಿದ್ದಳು ಅಷ್ಟೇ ಅಲ್ಲ, ದಿನಗಳು ಕಳೆದಂತೆ ಅವರ ಮೇಲೆ ಅವಳು ಮಾಡುವ ಉಪಚಾರಗಳು ಬೆಳೆಯತೊಡಗಿದುವು ವಾರಕ್ಕೊಮ್ಮೆ ಬೆಚ್ಚಗಾಗಿ ಎಣ್ಣೆಯನ್ನು ಇಡೀ ಮೈಗೆಲ್ಲ ತಿಕ್ಕಿ-ತಿಕ್ಕಿ ತೈಲಾಭ್ಯಂಗ ಮಾಡಿಸುವ ಒಂದು ಹೊಸ ಕಾರ್ಯವನ್ನೂ ಕೈಕೊಂಡಳು ಸುಮತಿಯಿಂದ ಬಾವಿಯ ನೀರನ್ನು ಎಳೆದು ತರಸಿ ಹಂಡೆ ತುಂಬಿಸಿ—ಕುದಿಯುವ ನೀರನ್ನು ತಯಾರು ಮಾಡುತ್ತಿದ್ದಳು

"ನೀವೀಗ ಇಳಿವಯಸ್ಸಿನವರು ಕಾಕಾ ಚಿಂತೆ ಮಾಡಬಾರದು ವಾರಕ್ಕೊಮ್ಮೆಯಾದರೂ ಬಿಸಿನೀರಿನ ಜಳಕ ಮಾಡಿಸಿಕೊಳ್ಳಬೇಕು ಎಂದರೆ ಮೈ ಹಗುರವಾಗುತ್ತದೆ ಮನಸ್ಸಿಗೆ ಉಲ್ಲಾಸವೆನಿಸುತ್ತದೆ ಕಣ್ಣಿಗೆ ನಿದ್ರೆ ಬರಲೂ ತೈಲಾಭ್ಯಂಗ ಒಳ್ಳೆಯದು ಪಿತ್ತ ಕರಗಲಿಕ್ಕಂತೂ ಈ ಉಪಚಾರಕ್ಕೆ ಸರಿಯಾದದ್ದು ಬೇರೆ ಇಲ್ಲ ಇದರಿಂದ ಯಾವುದಕ್ಕೂ ಕಡಿಮೆಯಿಲ್ಲ" ಎಂದು ಮಾತು ಹಾರಿಸುತ್ತ ಹೊನ್ನಪ್ಪಯ್ಯನವರಿಗೆ ಬಿಸಿನೀರಿನ ಮಂಗಳಾಭಿಷೇಕ ಮಾಡಿಸುತ್ತಿದ್ದಳು—ಜಾನಕಮ್ಮ ಅವರಿಗೂ ಅವಳು ಹೇಳಿದಂತೆ ಉಲ್ಲಾಸವೆನಿಸುತ್ತಿತ್ತಂತೆ

ಮನೆಯ ಯಜಮಾನಿಕೆಯ ಪಟ್ಟ ಜಾನಕಿಗೇ ಸ್ಥಿರವಾಯಿತು ಅವಳ ಸ್ವಂತದ ಮನೆಗೆ ಯಾವಾಗಲೂ ದೊಡ್ಡ ಬೀಗವೇ ಇರುತ್ತಿತ್ತು ಹೆಸರಿಗೆ ಮಾತ್ರ ಅದು 'ಜಾನಕಿಯ ಆಶ್ರಮ' ಎಂದು ಹಲವಾರು ಜನರಿಂದ ಟೀಕಿಸಲ್ಪಡುತ್ತಿತ್ತು ಹೊನ್ನಪ್ಪಯ್ಯನವರೂ ಅವಳು ಹೇಳಿದಂತೆ ನಡೆಯತೊಡಗಿದರು ತಮ್ಮ ಬಾಳಿನ ಕೊನೆಯ ಭಾಗವನ್ನು ಆದಷ್ಟು ಆನಂದದಿಂದ ಕಳೆಯಬೇಕೆಂಬುದು ಅವರ ಆಸೆ ಅದಕ್ಕಾಗಿ ಮನೆಯಲ್ಲಿ ನಾನಾ ತರಹದ ಬದಲಾವಣೆಗಳನ್ನು ಕೈಕೊಂಡರು ಅಲ್ಪಸ್ವಲ್ಪವಾದರೂ ಮಾಡುತ್ತಿದ್ದ ಸ್ವಂತ ಸಾಗುವಳಿಗೂ ತರ್ಪಣ ಬಿಡಲಾಯಿತು ಮನೆಯ ಜನರ ಸಂಖ್ಯೆಯೂ ನಿರ್ದಿಷ್ಟವಾದ ಅಂಕೆಗೆ ಇಳಿಯಿತು ಮೊದಲಿನಂತೆ ಹೊನ್ನಪ್ಪಯ್ಯ ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸುವುದನ್ನೂ ಬಿಟ್ಟರು ಕಲಾನಿಕೇತನದತ್ತ

ಕಾಲೇ ಹಾಕಲಿಲ್ಲ ಶಂಕರನಾದರೂ ಅವರ ಮನೆಯತ್ತ ಬರುವುದನ್ನು ನಿಲ್ಲಿಸಿದ್ದ ಶಂಕರನೇ ಯಾಕೆ ?--ಹಲವಾರು ಜನರು ಅಲ್ಲಿಗೆ ಬರುವುದನ್ನು ಬಿಟ್ಟರು ಅಂತೇ ಅಣ್ಣತಮ್ಮಂದಿರಲ್ಲಿಯ ವೈಮನಸ್ಸು ಬೆಳೆಯಿತು ಎರಡೂ ಮನೆಯವರು ತೋಡು ದಾಟಿ ಅತ್ತ—ಇತ್ತ ಹೋಗಲಿಲ್ಲ ಅವರ ಮನಸ್ಸಿನಲ್ಲೂ ಅಮರವಾದ ಬಿರುಕು ಬಿದ್ದಿತು

ಮುಂದೆ ಅದು ಕೂಡಲೂ ಇಲ್ಲ

ಜೀವನ ಸುಖಮಯವಾದಾಗ ಹೊನ್ನಪ್ಪಯ್ಯನವರಿಗೆ ಯಾವ ಚಿಂತೆಯೂ ಇದೆ ಎಂದು ಅನಿಸಲಿಲ್ಲ ಜಾನಕಿಯ ಆಗಮನದಿಂದ ಅವರ ಮನಸ್ಸು ಬೇರೆ ಕಡೆಗಳಿಗಲ್ಲ ಚಲಿಸುವುದನ್ನು ತೊರೆದುಬಿಟ್ಟಿತು ಸುಮತಿಯ ಗಂಡನ ವಿಷಯದಲ್ಲೂ ಅವರು ಮನಸ್ಸು ಹಾಕಲಿಲ್ಲ "ಬಂದಾಗಬರಲಿ" ಎಂದು ನಿರ್ಧಾರಮಾಡಿರಬೇಕು ಅವರು

"ಅವನನ್ನು ಹಿಡಿದು ತರಲಿಕ್ಕೆ ಅವನೇನು ಸಣ್ಣ ಮಗುವೇ ?" ಎಂದು ಜಾನಕಿಯೂ ತನ್ನ ಮೂಗನ್ನು ಆ ವಿಷಯದಲ್ಲಿ ಮುಳುಗಿಸಿದ್ದಳು ಸುಮತಿಯ ಗಂಡನನ್ನು ಪತ್ತೆ ಹಚ್ಚುವುದಕ್ಕಾಗಿ ನೀರಾದ ಹಣದ ಲೆಕ್ಕವೂ ಜಾನಕಿಗೆ ವರದಿ ಮಾಡಲ್ಪಟ್ಟಿತ್ತು ಕಾರಣ ಅವಳು ತನ್ನ ಮಾತುಗಳಲ್ಲಿ ಮತ್ತೊಂದು ಮಾತನ್ನು ಹೆಚ್ಚು ಸೇರಿಸಿ, ಹೊನ್ನಪ್ಪಯ್ಯನವರ ಪಕ್ಷವನ್ನು ಎತ್ತಿ ಹಿಡಿದಳು

"ನೀವೇನು ಖರ್ಚು ಮಾಡಿಲ್ಲ, ಪ್ರಯತ್ನ ಪಡಲಿಲ್ಲ—ಸುಮ್ಮನೆ ಕೂತಿರಿ—ಅನ್ನಲಿಕ್ಕೆ ಇದೆಯೋ ಕಾಕಾ ? ನಿಮ್ಮಿಂದ ಏನೆಲ್ಲ ಸಾಧ್ಯವಿದೆ ಅದನ್ನೆಲ್ಲ ಮಾಡಿ ಮುಗಿಸಿದಿರಿ ! ಲೆಕ್ಕವಿಲ್ಲದಂತೆ—ಹುಣಿಸೆ ಬೀಜಗಳಂತೆ—ಹಣ ನೀರು ಮಾಡಿದಿರಿ ಇನ್ನೇನು ಮಾಡಲಿಕ್ಕೆ ಸಾಧ್ಯವಿದೆ ? ಅವಳ ಹಣೆಯ ಬರಹವೇ ಹಾಗಿದ್ದರೆ—ನಿಮ್ಮಿಂದ ಅದನ್ನು ಉಜ್ಜಲಿಕ್ಕೆ ಅದೇನು ಪೆನ್ಸಿಲಿನಿಂದ ಬರೆದ ಕಾಪಿಯೇ ? ಅವಳ ಹಣೆಯಲ್ಲಿ ಇದ್ದಂತೆ ಆಗುತ್ತದೆ" ಎಂದು ಜಾನಕಿ ತನ್ನ ಮಾತಿನ ಸರಣಿಯನ್ನು ಬೆಳೆಸಲು ಹೊನ್ನಪ್ಪಯ್ಯ ಅನುಕೂಲ ಮಾಡಿಕೊಟ್ಟಿದ್ದರು

"ಗಟ್ಟಿಕ್ಕೆ ಹುಡುಗರಿಗೂ ಕಾಗದ ಬರೆದು ತಿಳಿಸಿರಿ—ಇನ್ನು ಅಳಿಯನ ವಿಷಯದಲ್ಲಿ ಖರ್ಚು ಮಾಡುವುದು ಬೇಡಾ—ಎಂದು" ಎನ್ನುವುದು ಜಾನಕಿಯ ಉಪದೇಶವಾಗಿತ್ತು

ದಿನಗಳು ಹೋದಂತೆ ಜಾನಕಿ ಸುಮತಿಯನ್ನು ತೊತ್ತಿನಂತೆ ಭಾವಿಸ ತೊಡಗಿದಳು. ದಿವಸಕ್ಕೆ ಇಂತಿಷ್ಟು ಕೆಲಸಗಳನ್ನು ಮಾಡಬೇಕೆಂಬ ಆಜ್ಞೆಯನ್ನು ಅವಳಿಗೆ ವಿಧಿಸಿಯಾಯಿತು ಅದಕ್ಕೆ ಹೊನ್ನಪ್ಪಯ್ಯನವರ ಅನುಮತಿಯೂ ಇತ್ತು

"ಕೆಲಸ ಮಾಡದೆ ಕೂಳು ಕತ್ತರಿಸಿದರೆ ಮೈ ಜಡವಾಗುತ್ತದೆ" ಎಂದು ತತ್ವಗಳನ್ನೂ ಜಾನಕಿ ಸುಮತಿಗೆ ಬೋಧಿಸುತ್ತಿದ್ದಳು

ಒಂದೊಂದು ದಿನ ಸುಮತಿ ಗುಡ್ಡೆಯಿಂದ ಸೊಪ್ಪಿನ ಕಟ್ಟಿಗೆಯೋ ಹೊತ್ತು ತರುವಾಗ ಮಧ್ಯಾಹ್ನ ಮೀರಿ ಹೋಗುತ್ತಿತ್ತು ಮನೆಯಲ್ಲಿ ಎಲ್ಲರ ಊಟವಾಗುತ್ತಿತ್ತು ಅವಳಿಗೆ ಹಲವಾರು ಸಲ ಅನ್ನವೇ ಉಳಿಯುತ್ತಿರಲಿಲ್ಲ ಅನ್ನ ಇದ್ದ ದಿನವಾದರೂ, ಮಡಿಕೆಯ ಬುಡದಲ್ಲಿ ಮೆತ್ತಿದ ಅನ್ನ' ಎಂಬ ಹೆಸರಿನ ಅನ್ನ ಮಾತ್ರ ಇರುತ್ತಿತ್ತು ಅದನ್ನೇ ಅವಳು ಉಣ್ಣುವ ದಿನಗಳು ಬಂದವು ಇಲ್ಲದಿದ್ದರೆ ಒಮ್ಮೊಮ್ಮ ಉಪವಾಸವೂ ಬೀಳುತ್ತಿದ್ದಳು

ಹೀಗಿರಲು, ಅವಳ ದೇಹ ಸೊರಗಿ ಸುಣ್ಣವಾಯಿತು 'ಹೀಗೆ ಆಗಿದ್ದಿ?' ಎಂದು ಕೇಳುವ ಜನ ಮನೆಯಲ್ಲೇ ಇಲ್ಲವೆಂದ ಮೇಲೆ ಹೊರಗಯೂ ಇರುವುದಿಲ್ಲವೆಂದು ಹೇಳಲಿಕ್ಕೆ ಸಾಧ್ಯವಿಲ್ಲ ಮುದುಕಿಯಾದ ಸುಬ್ಬಿ ಸುಮತಿಯನ್ನು ಕರೆದು ಕೇಳಿದಳು "ಮಗೂ ನೀನೇಕೆ ಕಣ್ಣಿನಿಂದ ಜೀವ ಬಿಡುವವರ ಹಾಗ ಆಗಿದ್ದಿ? ಯಾತಕ್ಕಾಗಿ ಚಿಂತೆ ಮಾಡುವುದು?"

"ನಾನೇನೆಂದು ಹೇಳಲಿ ಮಾಮೀ! ಎಷ್ಟೆಂದರೂ ನಾನು ಹೆಂಗಸು ಅಲ್ಲವೆ? ಕಷ್ಟ–ದುಃಖ–ದಾರಿದ್ರ್ಯಗಳು ನಮ್ಮ ಪಾಲಿಗೆ ಕೊಟ್ಟು ಕಳುಹಿಸುತ್ತಾನೋ ಏನೋ ದೇವರು" ಎಂದು ಕಣ್ಣೀರು ತುಂಬಿಸಿಕೊಂಡು ಹೇಳಿದಳು ಸುಮತಿ

"ಹಾಗೇಕೆ ಹೇಳುತ್ತಿ ಮಗೂ ನೀನೇನು ಚಿಂತಿಸಬೇಡ ನಿನಗೇನಾಗಿದೆ ಹೇಳು ನಿನ್ನ ಮೇಲೆ ನಮ್ಮ ಶಂಕರನಿಗೆ ಬಹಳ ಜೀವ ಅವನಿಗೆ ಈಗ ಶಾಲೆಯ ಕೆಲಸದಲ್ಲಿ ಒಂದು ನಿಮಿಷವೂ ಬಿಡುವು ಸಿಗುವುದಿಲ್ಲ ಆಗಾಗ ನನ್ನೊಡನೆ 'ಸುಮತಿ ಇಲ್ಲಿಗೆ ಬರುವುದು ಬಿಟ್ಟಿದ್ದಾಳೇನಮ್ಮ' ಎಂದು ಕೇಳುತ್ತಲೇ ಇರುತ್ತಾನೆ ನಿನಗೆ ಏನಾಗಿದೆ ಹೇಳು ಮಗೂ ನಾನು ಶಂಕರನಿಗೆ ಹೇಳಿ ಏನಾದರೂ ಉಪಾಯ ಮಾಡಿಸುತ್ತೇನೆ ಸಂಕೋಚ

ಪಡಬೇಡ ”

“ ಅಮ್ಮ ತೀರಿಕೊಂಡ ಮೇಲೆ—ನನಗೆ ನಮ್ಮ ಮನೆ ಅತ್ತೆಯ ಮನೆ ಗಿಂತ ಘೋರವಾಗಿ ಕಾಣುತ್ತದೆ ಮಾವೀ” ಎಂದು ಹೇಳಲು ಸುಮತಿಗೆ ಕಂಠ ಬರಲಿಲ್ಲ ಬಿಕ್ಕಿ ಬಿಕ್ಕಿ ಅಳುತ್ತ ಹೇಳಿದಳು ಅವಳು

“ ಹೊಟ್ಟೆಗೆ ಸರಿಯಾಗಿ ಅನ್ನವಾದರೂ ಹಾಕುತ್ತಾರೋ ಇಲ್ಲವೋ ಮಗೂ ? ” ಎನ್ನುತ್ತ ಆ ಮುದುಕಿ ಪ್ರೀತಿಯಿಂದ ಸುಮತಿಯ ಕಣ್ಣುಗಳನ್ನು ತನ್ನ ಕೆಂಪು ಸೀರೆಯ ಸೆರಗಿನಿಂದ ಒರಸಲು ಪ್ರಯತ್ನಿಸಿದಳು ಅವಳ ಹತ್ತಿರವೇ ಹೋಗಿ ಆಸನ ಹಾಕಿದಳು ಅವಳ ಮೈಯನ್ನು ವಾತ್ಸಲ್ಯದಿಂದ ತೀಡಿದಳು

ಅಂದು ಸುಮತಿಯು ಮಧ್ಯಾಹ್ನ ಊಟ ಮಾಡದೆ ಸುಬ್ಬಿಯ ಮನೆಗೆ ಹೋಗಿದ್ದಳು ಊಟಕ್ಕೆ ಅನ್ನವೂ ಗಡಿಗೆಯಲ್ಲಿ ಇರಲಿಲ್ಲ ಬೆಳಿಗ್ಗೆಯಾದರೂ ‘ಕಾಫಿ’ ಎಂಬ ಹೆಸರಿನ ಕಪ್ಪು ನೀರು ಅವಳ ಬಾಯಿಯನ್ನು ಕಹಿ ಮಾಡಿತ್ತು ಅಷ್ಟರಿಂದಲೇ ಅವಳು ಅಷ್ಟು ಹೊತ್ತಿನವರೆಗೆ ಇದ್ದುದರಿಂದ ಅವಳ ಅವಯವ ಗಳೆಲ್ಲ ಬಳಲಿಹೋಗಿದ್ದವು ಹೊಟ್ಟೆ ಹಸಿಯುತ್ತಲೂ ಇತ್ತು

ಅದೇ ಹೊತ್ತಿಗೆ ಸುಬ್ಬಿ, “ಊಟ ಆಗಲಿಲ್ಲವೆಂದು ಕಾಣುತ್ತದೆ ಏಳು ಮಗೂ ಮೊದಲು ಉಣ್ಣು ಆ ಮೇಲೆ ಮಾತಾಡೋಣವಂತೆ ಸಂಕೋಚ ಗೊಳ್ಳಬೇಡ ನಿನ್ನ ಮುಖವೇ ಹೇಳುತ್ತದೆ ಊಟವಾಗಿಲ್ಲವೆಂದು ಮೊದಲು ಊಟ ಮಾಡು ಊಟ ಮಾಡಿದ್ದಕ್ಕೆ ಯಾರಾದರೂ ಏನಾದರೂ ಮಾಡು ತ್ತಿದ್ದರೆ ನಾನು ನೋಡಿಕೊಳ್ಳುತ್ತೇನೆ ಅನ್ನ, ಪಲ್ಯ, ಮಜ್ಜಿಗೆ ಎಲ್ಲವೂ ಉಳಿದಿದೆ ಹೊಟ್ಟೆ ತುಂಬ ಉಣ್ಣು ಮಗೂ ” ಎಂದು ಅವಳನ್ನು ಉಪ ಚರಿಸಿದಳು

ಮುಂದೆ ಸುಮತಿಯನ್ನು ಅಳಲಿಕ್ಕೆ ಬಿಡಲಿಲ್ಲ ಮುಖ ತೊಳೆಯಲು ನೀರು ತಂದು ಕೊಟ್ಟಳು ಒಳಗೆ ಹೋಗಿ ಊಟಕ್ಕೆ ಸಿದ್ಧಪಡಿಸಿದಳು. ಹತ್ತಿರವೇ ಕೂತು ಅವಳನ್ನು ಊಟ ಮಾಡಿಸಿಯೂ ಆಯಿತು—ಸುಬ್ಬಿ

ಆ ಮೇಲೆ ಸುಮತಿ ಆದಿಯಿಂದ ಅಂತ್ಯದ ವರೆಗಿನ ತನ್ನ ಕಥೆಯನ್ನು ಸುಬ್ಬಿಗೆ ನಿರೂಪಿಸಿದಳು ಮರುಕ ಪಡುತ್ತ ಆ ಮುದುಕಿಯೂ ಕಿವಿದೆರೆದು ಕೇಳಿದಳು. ಜಾನಕಿಯ ಕ್ರೂರ ಕೃತ್ಯಗಳನ್ನು ಕೇಳುವಾಗಂತೂ ಸುಬ್ಬಿ

ಕಿವಿಯೊಳಗೆ ಬೆರಳು ತುರುಕಿ, 'ರಾಮಾ—ರಾಮಾ' ಎಂದು ಉದ್ಗಾರ ತೆಗೆದಳು

"ನೀನು ಎಷ್ಟೆಂದರೂ ಅನಾಥೆ ವ ಗೂ ನೀನೂ ನನ್ನ ಮತ್ತೊಬ್ಬಳು ಮಗಳು ಇದ್ದಂತೆ ಎಂದು ನಾನು ತಿಳಿದುಕೊಳ್ಳುತ್ತೇನೆ—ಯಾಕೆ ತಿಳಿದು ಕೊಂಡಿದ್ದೇನೆ ಆದ್ದರಿಂದ ನಿನಗೆ ಯಾವಾಗ ಅಲ್ಲಿ ಊಟ ಸಿಗುವುದಿಲ್ಲವೋ ಆವಾಗ ಇಲ್ಲಿ ಬಾ ಅನ್ನ ಇದ್ದರೆ ಬಡಿಸುತ್ತೇನೆ ಇಲ್ಲವಾದರೆ ನೀನೇ ಅಡುಗೆ ಮಾಡಿ ಉಣ್ಣಬಹುದು ಅಥವಾ ನಾನು ಮುದುಕಿಯಾದರೂ— ನಿಮಿಷದಲ್ಲಿ ಒಂದು ಅನ್ನ ಬೇಯಿಸಿ ಹಾಕುತ್ತೇನೆ ನಮ್ಮಲ್ಲಿ ಯಾವಾಗಲೂ ಒಬ್ಬವರು ಉಣ್ಣುವಷ್ಟು ಅನ್ನ ಶೇಷವಾಗಿ ಎಲ್ಲರದೂ ಊಟವಾದ ಮೇಲೆ ಉಳಿದೇ ಉಳಿಯುತ್ತದೆ" ಎಂದು ಸುಮತಿಗೆ ದಯೆತೋರಿಸಿ ಪ್ರೀತಿಯಿಂದ ಕರುಣಿಸಿದಳು—ಆ ಮುದುಕಿ

"ಆದೀತು" ಎನ್ನುವ ಶಬ್ದ ಸುಮತಿಯ ಬಾಯಿಯಿಂದ ಬರುವ ತನಕ ಸುಬ್ಬಿ ಅವಳ ಹತ್ತಿರದಿಂದ ಏಳಲಿಲ್ಲ "ಮಾವೀ ನೀನು ಪೂರ್ವ ಜನ್ಮದಲ್ಲಿ ನನ್ನ ತಾಯಿಯಾಗಿ ಹುಟ್ಟಿದ್ದಿಯೆಂದು ಕಾಣುತ್ತದೆ ಇಲ್ಲದಿದ್ದರೆ ನಿನಗೆ ಇಷ್ಟು ಕರುಣೆ ಬರುತ್ತಿರಲಿಲ್ಲ" ಎಂಬ ನೈಜವಾದ ಕಾವ್ಯವಾಣಿ ಸುಮತಿಯ ವದನದಿಂದ ಹೊರಹೊಮ್ಮಿತು

ಸುಬ್ಬಿಯ ಮಾತುಗಳಿಂದ ಸುಮತಿ ಸ್ವಲ್ಪ ಧೈರ್ಯ ತಾಳಿದ್ದಳೆನ್ನ ಬಹುದು ಯಾಕೆಂದರೆ ಅವಳ ಬಾಯಿ ಇಲ್ಲಿಯ ವರೆಗೆ ಜಾನಕಿಯ ಸಮಕ್ಷಮದಲ್ಲಿ ಸೊಲ್ಲು ಹೊರಡಿಸುತ್ತಿರಲಿಲ್ಲ ಈಗೀಗ ಹಾಗೇ ಒಂದೆರಡು ಪ್ರತ್ಯುತ್ತರಗಳನ್ನೂ ಜಾನಕಿಗೆ ಕೊಡಲು ಪ್ರಾರಂಭಿಸಿದಳು

"ನಿನಗಿಂತ ಮೊದಲು ನಾನು ನಮ್ಮ ಅಪ್ಪನಿಗೆ ಮಗಳಾಗಿ ಹುಟ್ಟಿದ್ದೇನೆ" ಎಂದು ಅಭಿಮಾನದಿಂದ ಒಮ್ಮೆ ಸುಮತಿ ಹೇಳಿದ್ದಳಂತೆ ಅಂದಿನಿಂದ ಜಾನಕಿಯೂ ತನ್ನ ದರ್ಪಗಳ ರೀತಿಯನ್ನು ಬಲಪಡಿಸುತ್ತ ಒಂದಳು.

ಹೊನ್ನಪ್ಪಯ್ಯನವರೊಡನೆಯೂ ಇಲ್ಲದ ಮಾತುಗಳನ್ನು ಸೇರಿಸಿ ದೂರು ಕೊಡುತ್ತಿದ್ದಳು—ಜಾನಕಿ ಒಮ್ಮೆಯಂತೂ ಒಂದು ಹೊಸ ಮಾತನ್ನು ಕಟ್ಟಿ—ಸುಮತಿ ಹೀಗೆ ಹೇಳಿದಳೆಂದು ಹೊನ್ನಪ್ಪಯ್ಯನವರನ್ನು ಕೆರಳಿಸಿದಳು ಆ ಮಾತನ್ನು ಕೇಳಿ ಅವರಿಗೂ ಸಿಟ್ಟು ಬಂದಿತು

ಇನ್ನು ಸುಮ್ಮನೆ ಕೂತರೆ—ಮಗಳು ಅಟ್ಟಕ್ಕೆ ಏರುತ್ತಾಳೆಂದು ಬಗದು ಅವರು ತಕ್ಕ ಕ್ರಮವನ್ನೂ ಕೈಕೊಂಡರು ರಾತ್ರಿ ಊಟವಾದ ಮೇಲೆ ಸುಮತಿಯನ್ನು ಒಳಗೆ ಕರೆದೊಯ್ದರು ಜಾನಕಿಯೂ ಅಲ್ಲಿಂದ ಅತ್ತ ಇತ್ತ ಸುಳಿದಾಡುತ್ತಿದ್ದಳು

ಅವಳ ಮನಸ್ಸಿನಲ್ಲಿ ಸುಮತಿಗೆ ಚೆನ್ನಾಗಿ ಹುಣಸೆ ಅಡರಿನ ಪೂಜೆಯಾಗಬೇಕೆಂದು ಇತ್ತು ಅದಕ್ಕಾಗಿ ಐದು ಶಾಖೆಗಳುಳ್ಳ ಹುಣಸೆಯ ಅಡರನ್ನು ಮಧ್ಯಾಹ್ನ ಅವಳೇ ತಯಾರು ಮಾಡಿದ್ದಳು

ತಂದೆ, ತನ್ನನ್ನು ಎಂದೂ ಕರೆಯದವರು—ಇವತ್ತೇಕೆ ಮನೆಯೊಳಗೆ ಕರೆಯುತ್ತಾರೆ—ಎಂದು ಸುಮತಿ ಒಳಗೆ ಹೋದಳು ಹೊನ್ನಪ್ಪಯ್ಯ ಅಲ್ಲಿ ನಿಂತಿದ್ದರು ಅವರ ಮುಖದಲ್ಲಿ ಸಿಟ್ಟು ಉರಿಯುತ್ತಿತ್ತು ಇಲ್ಲಿಯ ವರೆಗೆ ಆ ತರಹದ ಅವರ ಮುಖ ಅವಳು ಕಂಡಿರಲಿಲ್ಲ ಅವರ ಹತ್ತಿರ ಹೋಗಲಿಕ್ಕೂ ಅವಳಿಗೆ ಕಾಲು ಬರಲಿಲ್ಲ

ದೂರ ನಿಂತೇ " ಬಂದೆ " ಎನ್ನುವ ಸೂಚನೆ ಕೊಟ್ಟಳು

"ಸುಮತೀ" ಎಂದರು ಹೊನ್ನಪ್ಪಯ್ಯ

ಆ ಹೆಸರು ಕಟುಕನ ಧ್ವನಿಯಂತೆ ಅವಳ ಕಿವಿಯನ್ನು ಇರಿಯಿತು

"ಓ" ಎಂದು ಅಳುಧ್ವನಿಯಲ್ಲಿ ನುಡಿದಳು

"ಏನು ಭಾರೀ ರಾಪುಲಿಕ್ಕೆ ಹತ್ತಿದೆಯಾ ?"

ಸುಮತಿಯ ಉತ್ತರವಿಲ್ಲ

"ಗಂಡನಿಲ್ಲದೆಯೇ ಇಷ್ಟು ಮೆರೆಯಲಿಕ್ಕೆ ಹತ್ತಿದ್ದೀಯಾ?"

ಅದಕ್ಕೂ ಸುಮತಿಯ ಸದ್ದು ಇಲ್ಲ

"ಊರಲ್ಲಿ ಎಲ್ಲ ಏನೇನು ಡಂಗುರ ಸಾರಿಕೊಂಡು ಹೋಗುತ್ತಿ?"

"ನಾನೇನು ಹೇಳಲಿಲ್ಲ" ಎಂದು ಸುಮತಿ ಅಳುತ್ತ ಬೊಗಸೆಯಲ್ಲಿ ಮುಖ ಬಚ್ಚಿಟ್ಟಳು

"ನಿಜ ಹೇಳುತ್ತೀಯಾ—ಇಲ್ಲವಾದರೆ ನಿನ್ನನ್ನು ಒದ್ದು ಒದ್ದು—ಮೂರು ಸೀಳು ಮಾಡಿ ಬಾಗಿಲಿಗೆ ಕಟ್ಟುತ್ತೇನೆ" ಎನ್ನುವ ಕರ್ಣಕಠೋರವಾದ ನುಡಿಗಳು ಆ ತಂದೆಯ ಬಾಯಿಯಿಂದ ಕ್ರೂರವಾದ ಸರಣಿಯಿಂದ ಹೊರಬಿದ್ದವು

" ಅಯ್ಯೋ ! ಎಂಥ ಮಾತಿದು ಅಪ್ಪಾ " ಎಂದು ಸುಮತಿ ಅಲ್ಲಿಯೇ

ಕುಸಿದು ಬಿದ್ದಳು ಅವಳ ಇಡೀ ದೇಹ ದುಃಖದ ಗೇಹವಾಗಿತ್ತು

"ಎಂಥ ಮಾತು? ಹ ಹ್ಹಾ! 'ಅಪ್ಪ ಬೇಕಾದರೆ ಸಾಕಲಿ ನನ್ನನ್ನು! ಕೋರ್ಜಿಗಟ್ಟಳೆ ಹುಟ್ಟುವಳಿ ಬರುತ್ತದೆ—ಮತ್ಯಾರಿಗೆ ತಿನ್ನಲಿಕ್ಕೆ? ನಾನೊಬ್ಬಳು ತಿಂದು ಎಷ್ಟು ಹೋದೀತು? ಆ ಗಂಡ ಸತ್ತವಳು ಮನೆಯ ಯಜಮಾನಿ—ಅಪ್ಪನ ಸಾನಿ! ಅವಳಂಥವರಿಗೆ ತಿನ್ನಲಿಕ್ಕೆ ಎಷ್ಟು ಹೋದರೂ ಅವನಿಗೆ ಸಂತೋಷ!' ಎಂದು ಊರು ತುಂಬೆಲ್ಲ ಪ್ರಚಾರ ಮಾಡಿ ಬರುತ್ತಿಯಲ್ಲ ಅವಳು ನನ್ನ ಸಾನಿಯಲ್ಲವೋ? ಮೂರು ಕಾಸಿನವಳೇ ನಿಜಾ ಹೇಳು" ಎಂದು ಹೊನ್ನಪ್ಪಯ್ಯ ಕಾಲಿನಿಂದ ನಾಲ್ಕೆಂಟು ಸಲ ಸುಮತಿಗೆ ಒದ್ದರು ಬೈಗಳ ಶಬ್ದಕೋಶವನ್ನೇ ಪಠಿಸಿದರು

"ಅಯ್ಯೋ! ದೇವರಾಣೆಯೆಂದರೂ ನಾನು ಹೇಳಲಿಲ್ಲ ಅಪ್ಪಾ—ಅಂಥ ಮಾತುಗಳನ್ನು ನಾನು ಹಾಗೆ ಹೇಳಿದ್ದರೆ ನನ್ನ ನಾಲಗೆ ಕೊಳೆತು ಹೋಗಲಿ" ಎನ್ನುತ್ತ ಸುಮತಿ ಬಿದ್ದಲ್ಲಿಂದಲೇ ಅಳುತ್ತ ಹೇಳಿಕೊಂಡಳು

"ನೀನು ಹಾಗೇ ಎಲ್ಲಿ ಹೇಳುತ್ತಿ? ನಿನ್ನ ಬೆನ್ನು ಪುಡಿಯಾದ ಮೇಲೆಯೇ ಬಾಯಿ ಬಿಡುವವಳು ನೀನು" ಎನ್ನುತ್ತ ಹೊನ್ನಪ್ಪಯ್ಯ ಕೋಪದಿಂದ ಕಿಡಿಕಿಡಿಯಾಗಿ ನಡುಗಿದರು

"ಜಾನಕೀ, ಆ ಹುಣಸೆಯ ಅಡರು ತಾ ಇಲ್ಲಿ" ಎನ್ನುತ್ತ ಜಾನಕಿಯನ್ನು ಕರೆದರು

"ನಾನು ತರುವುದಿಲ್ಲ! ಮತ್ತೆ ನಾಳೆ ಊರಲ್ಲೆಲ್ಲ ನಾನೇ ಮಗಳ ಬೆನ್ನು ಪುಡಿ ಮಾಡಿಸಿದೆ ಎಂಬ ಮಾತು ಬಂದೀತು" ಎಂದು ಜಾನಕಿ ಉತ್ತರಿಸಿ—ಬಾಗಿಲಿನ ಹತ್ತಿರ ಬಂದು ಇಣಿಕಿ ನೋಡಿ—ನೋಡಿ ಹೋಗುವುದನ್ನು ಬಿಡಲಿಲ್ಲ

ಆಗ ಹೊನ್ನಪ್ಪಯ್ಯ ಹೊರಗೆ ಬಂದರು ಅವರ ಹಿಂದಿನಿಂದ ಜಾನಕಿಯೂ ಮೆಲ್ಲನೆ ಸಾಗಿದಳು ಸ್ವಲ್ಪ ದೂರ ಹೋದ ಮೇಲೆ, ಅವರ ಭುಜವನ್ನು ಮೆಲ್ಲಗೆ ಮುಟ್ಟಿದಳು ಆ ಸುಖಸ್ಪರ್ಶ ಯಾರ ಕೈಯದ್ದೆಂದು ಹೊನ್ನಪ್ಪಯ್ಯನವರ ವಿಲಾಸಪ್ರಿಯ ದೇಹಕ್ಕೆ ವಿಚಾರ ಮಾಡುವ ಪ್ರಸಂಗವೇ ಬರಲಿಲ್ಲ ಚಕ್ಕನೆ ಅವರು ಹಿಂದೆ ಹೊರಳಿ ನಿಂತರು

"ಏನು?" ಎಂದು ರಸಭರಿತವಾಗಿ ಕೇಳಿದರು

"ಹುಣಸೆಯ ಅಡರು ಅಲ್ಲಿಯೇ ಹೊರಗೆ ಇದೆ" ಎನ್ನುತ್ತ ಅವಳೂ ಅವರ ಮೈಗೆ ತಾಗುತ್ತ ಹೊರಗೆ ನಡೆದಳು ಹೊರಗಿನಿಂದ ಹುಣಸೆಯ ಅಡರನ್ನೂ ಹುಡುಕಿ ತಂದು ಕೊಟ್ಟಾಯಿತು

ಅಲ್ಲದೆ "ಒಳಗೆ 'ಮರಿಗ' ಯಲ್ಲಿ ಇವತ್ತೇ ತೆಗೆದಿಟ್ಟ ಉಪ್ಪಿನಕಾಯಿಯ ರಸವೂ ಇದೆ ಅದರ ಉಪಯೋಗವೂ ಬೀಳಲಿ" ಎಂದು ಉಪದೇಶವಿತ್ತಳು ನಗುತ್ತ

ಹೊನ್ನಪ್ಪಯ್ಯ ಒಳಗೆ ಹೋದವರೇ 'ಸಡ್' 'ಸಡ್' ಎಂದು ಸುಮತಿಗೆ ಹತ್ತಾರು ಏಟು ಬಿಟ್ಟರು ಅಡುಗೆ ಮನೆಯಿಂದ ಉಪ್ಪಿನಕಾಯಿಯ ಮರಿಗೆಯನ್ನೂ ತಂದರು ರಸವನ್ನು ಸುಮತಿಯ ಕಣ್ಣಿಗೆ ತುಂಬಿಸಿ, ಪುನಃ ಹುಣಸೆಯ ಅಡರಿನ ಪೆಟ್ಟುಗಳನ್ನು ಕೊಡಲು ಪ್ರಾರಂಭಿಸಿದರು ಸುಮತಿ ಪೆಟ್ಟಿನಿಂದ ಹಣ್ಣಾಗಿ ಹೋದಳು

"ನನ್ನ ಜೀವವಾದರೂ ಹೋದರೆ ಒಳ್ಳೆಯದಿತ್ತು" ಎಂದು ಮನಸ್ಸಿನಲ್ಲೇ ಮೊರೆ ಇಟ್ಟಳು

"ನನ್ನನ್ನು ಒಂದೇ ಪೆಟ್ಟಿಗೆ ಕೊಂದು ಬಿಡು" ಎಂದು ತಂದೆಯನ್ನು ಕೇಳಿದಳು ಆದರೂ ಹೊನ್ನಪ್ಪಯ್ಯ ಹೊಡೆಯುವುದನ್ನು ಬಿಡಲಿಲ್ಲ

"ನೀನು ಹೇಳಿದ್ದು ಹೌದೋ ಅಲ್ಲವೋ ಹೇಳು" ಎನ್ನುವುದೇ ಅವರ ಪ್ರಶ್ನೆಯಾಗಿತ್ತು

"ನನ್ನನ್ನು ಬೇಕಾದರೆ ನುಚ್ಚು ನೂರು ಮಾಡು ನಾನು ಹಾಗೆ ಹೇಳಲಿಲ್ಲ" ಎಂದು ಅಸ್ಪಷ್ಟವಾಗಿ ಹೇಳಿ ಸುಮತಿ ಮೂರ್ಛೆ ಹೋದಳು

ಮುಂದಿನ ಪರಿಸ್ಥಿತಿ ವಿಕೋಪಕ್ಕೆ ತೆರಳಿತು ಹೊನ್ನಪ್ಪಯ್ಯ, ಮಗಳು ಮೂರ್ಛೆ ಹೋದೊಡನೆ ಹೊರಗೆ ಬಂದರು ಸ್ವಲ್ಪ ಹೊತ್ತು ಜಾನಕಿಯೂ ಒಳಗೆ ಹೋಗಲಿಲ್ಲ ಅವರು ತಮ್ಮ ಜೀವಮಾನದಲ್ಲಿ ಆ ರೀತಿಯಲ್ಲಿ ಯಾರಿಗೂ ಹೊಡೆದವರಲ್ಲ ಆ ಒಂದು ಹೆಣ್ಣಿನ ಮಾತಿಗೆ ಮರುಳಾಗಿ ಅಂಥ ಹೇಯ ಕಾರ್ಯ ಮಾಡಿದರು ಅವರ ಮನಸ್ಸಿನಲ್ಲಿ ಹೋರಾಟ ಪ್ರಾರಂಭಿಸಿತು

"ನೀನು ಪಶು" ಎನ್ನುತ್ತ ಅವರ ಮನಸ್ಸಿನ ಮನೆಯ ಸಂಬುದ್ಧಿ ಅವರನ್ನು ಪೀಡಿಸತೊಡಗಿದ ಹೊನ್ನಪ್ಪಯ್ಯನವರಿಗೆ ಏನು ಮಾಡಬೇಕೆಂಬುದು

ತಿಳಿಯಲಿಲ್ಲ ಚಾವಡಿಯಲ್ಲಿ ಬಂದು ತಣ್ಣಗಾದ ನೆಲದ ಮೇಲೆ ಡಬ್ಬ ಮಲಗಿ ಕೊಂಡರು.

ಅಲ್ಲಿಗೆ ಜಾನಕಿಯೂ ಬಂದಳು ಅವರ ಹತ್ತಿರವೇ ಕೂತು, "ಹಾಗೇಕೆ ಮಲಗಿಕೊಂಡೆ ಕಾಕಾ ? " ಎನ್ನುತ್ತ ಅವರನ್ನು ಉಪಚರಿಸಿದಳು

"ಏನಿಲ್ಲ ಬಿಡೇ ಒಂದು ತಂಬಿಗೆ ನೀರು ಒಂದು ಅಚ್ಚು ಬೆಲ್ಲ ತಾ ಮಹಾರಾಯಳೇ, ನನಗೆ ಯಾಕೋ ಎದೆಯಲ್ಲಿ ಸಂಕಟವಾಗುತ್ತಿದೆ " ಎಂದು ಅಂಗಾತ ಮಲಗಿಕೂಂಡು "ಅಯ್ಯಪ್ಪ ರಾಮಾ" ಎಂದು ನಿಟ್ಟುಸುರುಗರೆದರು

"ನೀನು ಹೀಗೆಲ್ಲ ಗಾಬರಿ ಮಾಡಿದರೆ ನನಗೂ ಸಂಕಟವಾಗುತ್ತದೆ ಕಾಕಾ ! " ಎನ್ನುತ್ತ ಜಾನಕಿ ಅವರಿಗೆ ಗಾಳಿ ಹಾಕತೊಡಗಿದಳು

ಅವಳ ಗಾಳಿಯ ಉಪಚಾರದಿಂದ ಹೊನ್ನಪ್ಪಯ್ಯನವರಿಗೆ ಸ್ವಲ್ಪ ಆರಾ ಮಾಯಿತು " ಹಾ ! ಶಿವಶಿವಾ " ಎಂದು ಇನ್ನೊಮ್ಮೆ ಉಸಿರು ತೆಗೆದರು

"ಈಗ ಸ್ವಲ್ಪ ಕಡಿಮೆಯಾಯಿತೇ ಕಾಕಾ ಸಂಕಟ " ಎನ್ನುತ್ತ ಜಾನಕಿ ಹೊನ್ನಪ್ಪಯ್ಯನವರ ಹತ್ತಿರದಿಂದ ಎದ್ದಳು

" ಎಲ್ಲಿಗೆ ಹೋಗುತ್ತಿ ಜಾನಕೀ ನನ್ನನ್ನು ಬಿಟ್ಟು ? ನನ್ನ ತಲೆ ಯನ್ನು ನಿನ್ನ ತೊಡೆಯ ಮೇಲೆ ಇಟ್ಟುಕೋ ನೀನು ಇಲ್ಲದಿದ್ದರೆ ನಾನು ಉಳಿಯುವುದಿಲ್ಲ . " ಎನ್ನುತ್ತ ಹೊನ್ನಪ್ಪಯ್ಯ ಅವಳ ಕೈಗಳನ್ನು ತನ್ನ ಕೈಗಳಿಂದ ಅಪ್ಪಿಕೊಂಡರು

" ಇಲ್ಲ ಕಾಕಾ—ನಾನೆಲ್ಲಿಗೂ ಹೋಗುವುದಿಲ್ಲ ನೀನು ಆಗ ನೀರು ಬೆಲ್ಲ ಕೇಳಿದೆಯಲ್ಲ ಸ್ವಲ್ಪ ಶರಬತ್ತು ಮಾಡಿ ಕೊಡುತ್ತೇನೆ ಅಂದರೆ ಸಂಕಟ ಕಡಿಮೆಯಾಗುತ್ತದೆ ಅದನ್ನು ಮಾಡಿ ತಂದ ಮೇಲೆ ನಿನ್ನ ಹತ್ತಿ ರವೇ ಕೂಡುತ್ತೇನೆ , ಒಳಗೆ ನಿಂಬೆಹುಳಿಯೂ ಇದೆ .. ಬಿಡು ನನ್ನನ್ನು" ಎಂದಳು

ಅವಳು ಹೇಳಿದಂತೆ ಹೊನ್ನಪ್ಪಯ್ಯ ಮಾಡಿದರು " ಬಾ ಬೇಗ ಜಾನಕೀ " ಎನ್ನುವುದಕ್ಕೂ ಮರೆಯಲಿಲ್ಲ

ಮಧ್ಯರಾತ್ರಿಯ ಹೊತ್ತಾಗಿರಬಹುದು ಮನುಷ್ಯ ಸ್ವರ ಅಡಗಿಹೋಗಿತ್ತು ಹೊರಗೆ ದಟ್ಟವಾದ ಕತ್ತಲು ಆದರೂ ಸ್ವಚ್ಛವಾದ ಮೋಡವಿಲ್ಲದ ಆಕಾಶ ನಕ್ಷತ್ರಗಳ ಮಿನುಗುವಿಕೆ ಬೆರಗುಪಡಿಸುತ್ತಿತ್ತು ಒಟ್ಟಿನಲ್ಲಿ—ಪ್ರಶಾಂತವಾದ

ಆಕಾಶ ಕದಲದೆ ನಕಾಶದಲ್ಲಿ ಕಾಣುವಂತೆ ಶೋಭಿಸುತ್ತಿತ್ತು  ಅಂದು ಅಮ ವಾಸೆಯೋ ಗೊತ್ತಿಲ್ಲ  ಎಲ್ಲ ಮೃಗ-ಪಕ್ಷಿ ಪ್ರಾಣಿಗಳು ಬಾಯಿಗೆ ಬೀಗ ಜಡಿ ದುಕೊಂಡಿದ್ದವು

ಇಂಥ ಮೌನದಲ್ಲಿ ಮುಳುಗಿದ ಜಗತ್ತಿನೊಳಗೆ ಸುಮತಿಯೂ ಇಹ ಲೋಕದ ಪರಿವೆ ಇಲ್ಲದೆ ಮಲಗಿದ್ದಳು  ಅವಳ ಅವಯವಗಳು ಚಲಿಸುತ್ತಿರ ಲಿಲ್ಲ  ಒಳಮನೆಯ ಬಾಗಿಲಿನ ಹೊಸ್ತಿಲದ ಮುಂದೆ ಮುದ್ದೆಯಾಗಿ ಬಿದ್ದಿ ದ್ದಳು  ಮೈಮೇಲಿನ ಸೀರೆಯೂ ಅಸ್ತವ್ಯಸ್ತವಾಗಿತ್ತು  ಅಲ್ಲಿಯೇ ಸ್ವಲ್ಪ ದೂರದಲ್ಲಿ ಜರ್ಜರಿತವಾದ ಹುಣಸೆಯ ಅಡರೂ ಅವಳಂತೆ ಬಿದ್ದುಕೊಂಡಿತ್ತು ಅತ್ತ ಕಿಂಚಿತ್ ದೂರದಲ್ಲಿ ಉಪ್ಪಿನಕಾಯಿಯ ರಸವೂ ಸಿಮೆಂಟಿನ ನೆಲದ ಮೇಲೆ ಹರಡಿತ್ತು

ಶರಬತ್ತು ತಯಾರಿಸುವ ಆವೇಶದಿಂದ ಜಾನಕಿ ಒಳಗೆ ಅವಸರದಿಂದ ಬಂದಳು. ಹೊಸ್ತಿಲ ಬಳಿಯಲ್ಲಿ ಬಿದ್ದಿದ್ದ ಸುಮತಿಯ ಮೇಲೆ ಕಾಲೂ ಇಟ್ಟಳು  ಸಿಟ್ಟು ಬಂದಿತು ಅವಳಿಗೆ

"ಅತ್ತ ಬೀಳಲಿಕ್ಕೆ ಮಂಡೆ ಮಾರಿಯೇ ನಿನಗೆ ? ದಾರಿಯಲ್ಲೇ ಬಿದ್ದು ಸತ್ತಿದಿಯಲ್ಲ" ಎಂದು ಬೈದು ನಾಲ್ಕು ಹಾಗೇ ಒದ್ದು ಒಳಗೆ ಪ್ರವೇಶಿಸಿದಳು

ತೂಗು ಬಿದ್ದ "ಕಾಲದೀಪ"ವೂ ಕುರುಡಾಗಿತ್ತು  ಅದನ್ನು ದೊಡ್ಡದು ಮಾಡುವ ಭರದಲ್ಲಿ ಮುಂದೆ ಸಾಗಿದಳು ಜಾನಕಿ ಎರಡೂ ಕಾಲು ಗಳು ಕೆಳಗೆ ಬಿದ್ದಿರುವ ಉಪ್ಪಿನಕಾಯಿಯ ರಸದ ಮೇಲೆ ನಿಂತವು  ದೇಹದ ತೂಕ ತಪ್ಪಿ—ಕಾಲು ಜಾರಿದವು! 'ಬಡ್ಡನೆ' ಗುಜ್ಜೆ ಬಿದ್ದ ಹಾಗೆ ನೆಲಕ್ಕೆ ಬಿದ್ದಳು

"ಆಯ್ಯೋ ಸುನ್ಯಾ" ಎಂದು ಸುಮತಿಯನ್ನು ಬಯ್ದು, ಬಿದ್ದಲ್ಲಿಂದ ಎದ್ದು, ನೋವಾದ ಭಾಗವನ್ನು ಕೈಯಿಂದ ಸವರುತ್ತ ಒಳಗ ಹೋಗಿಯೂ ಆಯಿತು—ಅವಳು ದೀಪವನ್ನು ದೊಡ್ಡದು ಮಾಡಿದಳು. ಮೊದಲು ಶರ ಬತ್ತು ಮಾಡಿ ಒಯ್ದು ಹೊನ್ನಪ್ಪಯ್ಯನವರಿಗೆ ಕುಡಿಸಿ ಒಳಗೆ ಬಂದಳು ಹಿಂದೆ ಇದ್ದ ಸ್ಥಿತಿಯಲ್ಲೇ ಇರುವ ಸುಮತಿಯನ್ನು ನೋಡಿ ಜಾನಕಿಗೆ ಏನೊ ಸಂಶಯ ಬಂತು

"ಇಲ್ಲಿ ಬಾ ಕಾಕಾ" ಎಂದು ಒದರಿದಳು.

'ಕಾಕ' ರು ಬಂದೇ ಬಿಟ್ಟರು

ಸುಮತಿಯನ್ನು ಇಬ್ಬರೂ ಹಿಡಿದುಕೊಂಡು ಚಾವಡಿಗೆ ತಂದು ಹಾಕಿದರು ಅವಳ ಮೂಗಿನಿಂದ ಶ್ವಾಸವೂ ಚೆನ್ನಾಗಿ ಆಡದಿದ್ದದ್ದು ಕಂಡು ಅವರಿಗೆ ಎದೆ ನಡುಗಿತು

"ಈಗೇನು ಮಾಡುವುದು?" ಎಂದರು ಹೊನ್ನಪ್ಪಯ್ಯ

"ನೀವೇನು ಹೆದರುವುದು ಬೇಡ" ಎಂದಳು ಜಾನಕಿ ಒಳಗೆ ಕ್ಷಣದಲ್ಲೇ ಓಡಿದಳು ಅಲ್ಲಿ ಬಿದ್ದಿದ್ದ ಹ ಣಸೆಯ ಅಡರನ್ನು ಮಾಯಕ ಮಾಡಿದಳು ಅಂತೇ ಉಪ್ಪಿನಕಾಯಿಯ ರಸವನ್ನು ಒರಸಿ—ಎಲ್ಲ ಸ್ವಚ್ಛ ಮಾಡಿಯೂ ಮುಗಿಸಿದಳು ಹೊರಗೆ ಬರುವಾಗ ಒಂದು ಬೋಗೋಣಿ ನೀರೂ ತಂದಳು ಅದರಿಂದ ಸುಮತಿಯು ಕಣ್ಣುಗಳನ್ನು ತೊಳೆದಾಯಿತು ಆ ಮೇಲೆ ಅವಳನ್ನು ಎತ್ತಿ ಒಯ್ದು ಒಳಗೆ ಅವಳ ಹಾಸಿಗೆಯ ಮೇಲೆ ಮಲಗಿಸಿದರು ಹೊನ್ನಪ್ಪಯ್ಯ ಜಾನಕಿಯ ಮಾತಿನಂತೆ ವರ್ತಿಸಿದರು

"ನೀನು ಇಲ್ಲಿಯೇ ಕೂತುಕೋ, ನಾನು ಶಂಕರ ದಾಕದಾರನನ್ನು ಕರೆದು ತರುತ್ತೇನೆ ಕಾಕಾ" ಎನ್ನುತ್ತ ಜಾನಕಿ ಕಲಾನಿಕೇತನದತ್ತ ವೇಗವಾಗಿ ಕತ್ತಲಲ್ಲೇ ಸಾಗಿದಳು "ಸುಮತಿಗೆ ಎಚ್ಚರವಿಲ್ಲ" ಎಂಬುದನ್ನು ಕೇಳಿದೊಡನೆ ಶಂಕರ ದಿಗಿಲು ಬಿದ್ದು ರಾತ್ರಿಯಲ್ಲೇ ಜಾನಕಿಗಿಂತ ಮುಂದೆ ಓಡಿ ಬಂದ

ನೋಡುವುದೇನು! ಹೊನ್ನಪ್ಪಯ್ಯ ಚಾವಡಿಯಲ್ಲಿ ದೀಪದ ಬೆಳಕಿನಲ್ಲಿ ತಲೆಯ ಮೇಲೆ ಕೈ ಇಟ್ಟುಕೊಂಡು ಚಿಂತಿಸುತ್ತಿದ್ದರು ಅವರೊಡನೆ ಮಾತಾಡಲಿಕ್ಕೂ ಶಂಕರ ನಿಲ್ಲಲಿಲ್ಲ ಒಳಗೆ ಓಡಿದ ಅವನ ಹಿಂದಿನಿಂದ ಹೊನ್ನಪ್ಪಯ್ಯ ಹಾಗೂ ಜಾನಕಿ ಬರುತ್ತಿದ್ದರು ಒಳಗೆ ಹೋಗುವಾಗ ಜಾನಕಿ ಅವರ ಕಿವಿಯಲ್ಲಿ ಏನೋ ಗುಟ್ಟು ಹೇಳಿದಳು

"ಹೂಂ" ಎಂದರು ಹೊನ್ನಪ್ಪಯ್ಯ

ಶಂಕರನಿಗೆ ಸುಮತಿಯ ಚಿಕಿತ್ಸೆ ಮಾಡಲು ಕೈಯೇ ಬರಲಿಲ್ಲ ಅವಳ ಕಣ್ಣು ಬಾತಿದ್ದವು ಕೈ—ಮೈತುಂಬೆಲ್ಲ ಬೆತ್ತದ ಬಾವುಗಳೂ ಕಂಡವು ತುಂಬ ಮರುಕ ಪಟ್ಟಿದ್ದನಾತ

"ಏನಾಗಿದೆ?" ಎಂದು ಮನಸ್ಸಿಲ್ಲದೆ ಹೊನ್ನಪ್ಪಯನವರಿಗೆ ಕೇಳಿದ ಅವರು ಮೂಕರಂತೆ ನಿಂತಿದ್ದರು

ಅವರ ಬದಲಿಗೆ ಜಾನಕಿ, "ಏನಾಗಿದೆಯೋ ನಮಗೆ ಗೊತ್ತಿಲ್ಲ! ಇವತ್ತು ಸಂಜಗೆ ಕತ್ತಲಾದ ಮೇಲ ಮನೆಗೆ ಬಂದು, ಊಟಮಾಡಿ 'ನನಗೇಕೋ ಮೈ ನೋವು' ಎಂದು ಮಲಗಿದ್ದಳು ಈಗ ಒಂದು ಗಂಟೆಯ ಮುಂಚೆ ಕನಸಿನಲ್ಲಿಯೋ ಏನೋ—ಅತ್ತೇ ಅತ್ತಳು ಏನಾಯಿತೆಂದು ನೋಡಲು ದೀಪ ಹಚ್ಚಿದೆವು ಅವಳ ಹತ್ತಿರ ಹೋಗುವಾಗ ಶ್ವಾಸವೂ ಚೆನ್ನಾಗಿ ಆಡುತ್ತಿರಲಿಲ್ಲ ಗಾಬರಿಯಿಂದ ನಿಮ್ಮನ್ನು ಕರಯಲು ಓಡಿ ಬಂದೆ" ಎಂದು ತನ್ನ ವಕಾಲತು ಹೇಳಿದಳು

ಹೊನ್ನಪ್ಪಯ್ಯ ಮನಸ್ಸಿನಲ್ಲೇ ಹಿಗ್ಗಿದರು—ಜಾನಕಿಯ ಚಾಣಾಕ್ಷ ತನದ ಮಾತು ಕೇಳಿ ಆದರೆ ಏನಾಗಿದೆ ಅವಳಿಗೆ ಎಂಬುದು ಶಂಕರನಿಗೆ ತಿಳಿಯಲಿಕ್ಕೆ ಬಹಳ ಹೊತ್ತು ಹಿಡಿಯಲಿಲ್ಲ ವಾಸನೆಯಿಂದಲೇ ವಸ್ತು ವೆಂತಹದ್ದೆಂದು ಗುರುತಿಸುವ ಚತುರನಾದ ಅವನಿಗೆ ಅವಳಿಗಾದ ಕಾಯಿಲೆ ಏನೆಂದು ಕ್ಷಣದಲ್ಲೇ ಹೊಳೆಯಿತು ಹೊನ್ನಪ್ಪಯ್ಯನವರ ಬಾಡಿದ ಮುಖವೂ ತಮ್ಮ ಅಪರಾಧ ಹೇಳುತ್ತಿತ್ತು ಜಾನಕಿಯ ಮಾತಿನ ಸ್ವರದಲ್ಲೂ ಕೃತಕ ಏರಾಟ ಇಳಿದಾಟ ಕೇಳಿತ್ತು ಶಂಕರನಿಗೆ

"ರೋಗ ಇಂತಹದ್ದೆಂದು ನಿಮಗೂ ಗೊತ್ತಿದೆ! ಅದನ್ನು ನಾನು ಬಿಚ್ಚಿ ಹೇಳುವ ಅವಶ್ಯಕತೆಯಿಲ್ಲವಷ್ಟೆ ಇವಳ ಜೀವ ಉಳಿಸಲು ನಾನು ಶತ ಪ್ರಯತ್ನ ಮಾಡಿದರೂ. ಏನಾಗುತ್ತದೆಯೋ ಏನೋ . ಎದೆಗೆ ಬಿದ್ದ ಪೆಟ್ಟಿನಿಂದ ಶ್ವಾಸಕೋಶಗಳಿಗೆ ಬೇನೆಯಾಗಿದೆ. . ಏನು ಮಾಡು ವುದು? ಕೂಡಲೇ ಒಕ್ಕಲುಗಳನ್ನು ಕರೆದು ಇವಳನ್ನು ನಮ್ಮ ನಿಕೇ ತನಕ್ಕೆ ರವಾನಿಸಬೇಕು ಅಲ್ಲಿಯೇ ಚಿಕಿತ್ಸೆ ಮಾಡುತ್ತೇನೆ ಇಲ್ಲಿ ಸಾಧ್ಯ ವಿಲ್ಲ ಅವಳ ಜೀವ ಉಳಿದರೆ ನಾವೆಲ್ಲ ಧನ್ಯರು" ಎಂದು ಏನೇನೋ ಶಂಕರ ಮಾತಾಡಿದ

ಅದರಂತೆ—ಸುಮತಿಯನ್ನು ರಾತ್ರಿಯಲ್ಲೇ ಸಾಲೆಗೆ ಸಾಗಿಸಲಾಯಿತು ಅಲ್ಲಿಯೇ ಶಂಕರ ಆಯುರ್ವೇದದ ಪ್ರಕಾರ ಚಿಕಿತ್ಸೆ ಮಾಡತೊಡಗಿದ

"ಒಂದು ಇಂಜಕ್ಷನ್ನೇನಾ ಕೊಡುತ್ತಿದ್ದರೆ ಎಚ್ಚರ ಬರುತ್ತದೋ ಏನೋ" ಎಂದು ಹೊನ್ನಪ್ಪಯ್ಯ ಉಪದೇಶ ಹೇಳಿದರು ಇಂಜಕ್ಷನ್ನು ಚುಚ್ಚಿ ಹಣ ಬಿಚ್ಚಿಸುವ ಮೋಸಗಾರ ಶಂಕರನಲ್ಲ

"ಇಂಜಕ್ಷನ್ನು ನಿಮಗೆ ಬೇಕಾದರೆ ಮಾಡುವ" ಎಂದು ಶಂಕರ ನಗುತ್ತ ಹೇಳಿದ ಆಗ ಸುಮತಿಯ ದೇಹಸ್ಥಿತಿ ಶಂಕರನ ಹಿಡಿತಕ್ಕೆ ಬಂದಂತೆ ಇತ್ತು ಆದ್ದರಿಂದ ಅವನ ಮುಖದಲ್ಲಿ ಗೆಲುವು ನಲಿಯುತ್ತಿತ್ತ

"ಇದರಿಂದ ನೀವು ಜೈಲು ಯಾಕೆ ಪಾಸಿಗೂ ಹೋಗುತ್ತಿದ್ದಿರಿ" ಎಂದು ಅವನು ಹೇಳುವಾಗ ಹೊನ್ನಪ್ಪಯ್ಯನವರ ಮುಖ ಅಡಿಕೆಯಷ್ಟಾಯಿತು ಎಷ್ಟೋ ಹೊತ್ತು ಅವರು ತಲೆ ತಗ್ಗಿಸಿಯೇ ಕೂತಿದ್ದರು ಹಾಗೆ ಕೆಳಗೆ ಹಾಕಿದ ತಲೆಯನ್ನು ಮೇಲೆ ಎತ್ತದೆ ಮನೆಗೆ ಸೀದಾ ನಡೆದರು

"ಹೇಗಿದೆ" ಎಂದು ಜಾನಕಿ ಬೆರಳು ಮುರಿಯುತ್ತ ಅವರ ನೈಗೆ ಕಾಗುತ್ತ ಕೇಳಿದಳು

"ಎಲ್ಲ ನಾಳೇಸಾಯಿತು" ಎಂದರು ಹೊನ್ನಪ್ಪಯ್ಯ

ದಿನಗಳು ಉರುಳುತ್ತಲೇ ಇದ್ದವು ಸುಮತಿಯನ್ನು ಮಾತ್ರ 'ಕಲಾ ನಿಕೇತನ' ದಿಂದ ಕರೆದು ತಂದಿರಲಿಲ್ಲ—ಹೊನ್ನಪ್ಪಯ್ಯ

೮

ಮಗ ಮತ್ತು ಸೊಸೆ ಮನೆಯಿಂದ ಕಡಿಮೆಯಾದರು ಮೊದಲು ಮನಸ್ಸಿನಲ್ಲಿ ಅಸಮಾಧಾನ ಪಟ್ಟುಕೊಂಡಿದ್ದರೂ ಅಣ್ಣಪ್ಪಯ್ಯ ವಕೀಲರ ಮಾತಿಗೆ ಪ್ರತ್ಯುತ್ತರ ಕೊಡಲಿಲ್ಲ ಅವರು "ನಮ್ಮ ನಿಮ್ಮೀನ್ನ ಕಳಸರೀ" ಎಂದೊಡನೆ, "ನನ್ನಿಂದ ಏನೂ ಅಡ್ಡಿ ಇಲ್ಲ ಎಲ್ಲಿಯಾದರೂ ಒಟ್ಟಿಗೆ ಸುಖದಿಂದ ಇದ್ದು ಮನೆತನಕ್ಕೆ ಹೆಸರು ತಂದರಾಯಿತು 'ಇಂಥವರ ಮಗ' ಎಂದು ಜನರು ಆಡಿಕೊಂಡಾಗ ನನಗೂ ತೃಪ್ತಿಯಾಗುವುದಿಲ್ಲವೇ ?" ಹೆಮ್ಮೆ ಪಡುತ್ತ ಸೊಸೆಯನ್ನು ಧಾರವಾಡಕ್ಕೆ ಕೊಟ್ಟು ಕಳುಹಿಸಿದ್ದರು—ಅಣ್ಣಪ್ಪಯ್ಯ.

ರಾಮದಾಸ, ಗಟ್ಟದ ಮೇಲೆಯೇ ನಿಮ್ಮಿಯೊಡನೆ ಸಂಸಾರ ಹೂಡಿದ ಕೆಲವು ದಿವಸಗಳ ಮಟ್ಟಿಗಷ್ಟೆ ವಕೀಲರ ಮನೆಯಲ್ಲಿ ಇದ್ದ ಅಂದರೆ ಒಂದು

ಮನೆ ಸಿಗುವ ತನಕ ಮುಂದೆ ನಿಮ್ಮಿಯ ಒತ್ತಾಯದಿಂದ ಅವನು ಮನೆ ಹುಡುಕಬೇಕಾಯಿತು "ಬಹಳ ದಿನ ಮಾವನ ಮನ್ಯಾಗ ನೀವು ನನ್ನ ಕಟ್ಟಿಕೊಂಡು ಇರೋದು ಚಂದಲ್ಲ" ಎಂದು ನಿಮ್ಮಿ ಅವನಿಗೆ ಬುದ್ಧಿ ಹೇಳ ತೊಡಗಿದಳು ಅವಳ ಮಾತು ನಿಜವೆಂದು ಅವನಿಗೂ ಅನಿಸಿರಬೇಕು

ಸಂಜೀವಿಯ ಜೀವನ ನೋಡಿ, ಅವಳ ಮಾತುಗಳನ್ನು ಕೇಳಿ ನಿಮ್ಮಿಯ ಸ್ವಭಾವ ಪರಿವರ್ತನೆ ಹೊಂದಿತ್ತು ಕೊನೆಗೆ ರಾಮದಾಸನಿಗೆ ಮಾಳಮಡ್ಡಿಯಲ್ಲಿ ಒಂದು ಮನೆ ಸಿಕ್ಕಿತು ಅಲ್ಲಿ ಅವನ ಸಂಸಾರಿಕ ಜೀವನ ಬೆಳೆಯತೊಡಗಿತು

ಇಲ್ಲಿ ಅಣ್ಣಪ್ಪಯ್ಯನವರ ಎಷ್ಟೋ ಚಿಂತೆಗಳು ಕಳಚಿಹೋದವು ಅವರ ಮೈಗೆ ಕಲೆಯಂತೆ ಅಂಟಿಕೊಂಡಿದ್ದ ಎವರ್ಾಲಿನ ತಿವರ್ಾಲೆ ಬೇರೆ ಗೆಳೆಯ ನನ್ನು ಹುಡುಕಿಕೊಂಡಳು "ಅಂಥವಳಿಗೆ ಬ್ಯಾರಿಯಾದರೇನು? ಬ್ರಾಹ್ಮಣ ರಾದರೇನು ?" ಎನ್ನುತ್ತಿದ್ದ ಕಾಂತಪ್ಪ

ತಿವರ್ಾಲೆಯಾದರೂ ಒಳ್ಳೆಯ ರೀತಿಯಿಂದ ಅಣ್ಣಪ್ಪಯ್ಯನವರ ಸಂಬಂಧ ಕಳೆದುಕೊಂಡಳೊ ? ತಾನು ಬೇರೆಯವರೊಡನೆ ಸ್ನೇಹ ಬೆಳೆ ಸಿದ್ದೇನೆ, ನೀವು ಇನ್ನು ಇತ್ತ ಬರಬೇಡಿ ಎಂಬ ಯಾವ ಸೂಚನೆಯನ್ನೂ ಅಣ್ಣಪ್ಪಯ್ಯನವರಿಗೆ ಕೊಡಲಿಲ್ಲ ಆದರಿಂದಾಗಿ ಅವರು ಒಮ್ಮೆ ಎವರ್ಾಲಿಗೆ ಹೋದಾಗ ಶೇಕ್ರ ಬ್ಯಾರಿಯಿಂದ ಬಡಿಸಿಕೊಳ್ಳದೆ ಮನೆಗೆ ಮುಟ್ಟಿದ್ದು ಅವರ ಮಕ್ಕಳ ಪುಣ್ಯವೆಂದೇ ಹೇಳಬೇಕು ಅಷ್ಟು ಏಕೆ ? ಅವರ ಜೀವ ಕೂಡಾ ಕಾಂತಪ್ಪ ಒಬ್ಬನು ಇಲ್ಲದಿದ್ದರೆ ಉಳಿಯುವುದು ಕಷ್ಟವಾಗಿತ್ತು—ಆ ಬ್ಯಾರಿಗಳ ಪಡೆಯಲ್ಲಿ

ಎಂದಿನಂತೆ ಎವರ್ಾಲಿನ ಸಂತೆಗೆ ಕಾಂತಪ್ಪ ಮತ್ತು ಅಣ್ಣಪ್ಪಯ್ಯ ಕೂಡಿಕೊಂಡೇ ಹೋಗಿದ್ದರು ಆದರೆ ಬರುವಾಗ ಅಣ್ಣಪ್ಪಯ್ಯ ಸ್ವಲ್ಪ ಬೇಗ ತಮ್ಮ ತಿವರ್ಾಲೆಯ ಮನೆಗೆ ಹೋದರು ಸೂರ್ಯ ಮುಳುಗಿ ಸಂಜೆ ಗತ್ತಲು ಕವಿದಿತ್ತು

ತಿವರ್ಾಲೆಯ ಮನೆಯ ಚಾವಡಿ ಹತ್ತುವಾಗ ಅಣ್ಣಪ್ಪಯ್ಯನವರ ಎದೆಯ ಬಡಿತ ನಾಲ್ಮಡಿಸಿತು ಚಾವಡಿಯಲ್ಲಿ ಕೆಂಪು ರಂಗಿನ ಗೆರೆಗೆರೆಯ 'ಬ್ಯಾರಿಮುಂಡು' ಉಟ್ಟುಕೊಂಡ ಬಾರಿಯೊಬ್ಬ ಚಾಪೆಯ ಮೇಲೆ ಕೂತು

ಕೊಂಡಿದ್ದ ಅವನ ಬಳಿಯಲ್ಲಿ ತಿರ್ಮಾಲೆಯೂ ಆಸನ ಹಾಕಿದ್ದಳು ಅವಳ–ಮುಖದಲ್ಲಿ ಮುಗುಳು ನಗೆ ಸೂಸುತಿತ್ತು ಬ್ಯಾರಿ ಹರ್ಷಚಿತ್ತ ನಾಗಿ ನಗುತ್ತಿದ್ದ

ಇಷ್ಟರಲ್ಲೇ ಬ್ಯಾರಿ ಭಾಷೆ ಕಲಿತ ತಿರ್ಮಾಲೆ ಅವನೊಡನೆ ಆ ಭಾಷೆ ಯಲ್ಲಿ ಸಂಭಾಷಣೆ ನಡೆಸಿದ್ದೂ ಅಣ್ಣಪ್ಪಯ್ಯನವರಿಗೆ ಕೇಳಿಸಿತ್ತು ಮುಂದೆ ಕಾಣುವ ದೃಶ್ಯವನ್ನು ನೋಡಿ ಅವರಿಗೆ ಏನು ಮಾಡಬೇಕೆಂದು ತಿಳಿಯ ಲಿಲ್ಲ ಧೈರ್ಯ ಮಾಡಿಕೊಂಡು ಚಾವಡಿ ಹತ್ತಿದರು ಆದರೆ ಬ್ಯಾರಿ ಚಾಪೆಯಿಂದ ಸರಿಯಲಿಲ್ಲ ತಿರ್ಮಾಲೆ ಇವರತ್ತ ಲಕ್ಷ್ಯವೀಯಲಿಲ್ಲ ಸಿಟ್ಟು ಬಂತು ಅವರಿಗೆ ಅದನ್ನು ಮನಸ್ಸಿನಲ್ಲೆ ನುಂಗಿಕೊಂಡರು ನೆಲದ ಮೇಲೆ ಕುಳಿತರು

ಆಗ ತಿರ್ಮಾಲೆ ಬ್ಯಾರಿಯ ಬಳಿಯಿಂದ ಸ್ವಲ್ಪದೂರ ಸರಿದು ಕೂತಳು ಬ್ಯಾರಿಗೂ ಸಿಟ್ಟು ಬಂತು ಅಂಥ ವೇಳೆಯಲ್ಲಿ ಅವನಿಗೆ ಕ್ರೋಧ ಉಕ್ಕೇರು ವುದು ಅಸ್ವಾಭಾವಿಕವೇನಲ್ಲ ಅವನ ಕಣ್ಣು ಕೆಂಪಾದವು

ಇತ್ತ ಅಣ್ಣಪ್ಪಯ್ಯ "ಅವನನ್ನು ಕಳುಹಿಸು ಅವನಿಗೇನು ಇಲ್ಲಿ ಕೆಲಸ?" ಎಂದು ತಿರ್ಮಾಲೆಯತ್ತ ನೋಡಿದರು ಅವಳತ್ತ ಅವರ ದೃಷ್ಟಿ ಹೋಗದಂತೆ ಬ್ಯಾರಿಯೂ ಅಡ್ಡ ಗುಂಡುಕಲ್ಲಿನಂತೆ ಕೂತಿದ್ದ

"ಏನು ?" ಎಂದು ಬ್ಯಾರಿಯೂ ತನ್ನ ಭಾಷೆಯಲ್ಲಿ ಅವರಿಗೆ ಪ್ರಶ್ನಿಸಿದ

ಅಣ್ಣಪ್ಪಯ್ಯ ತಮ್ಮ ಸೊಂಟಕ್ಕೆ ಸಿಕ್ಕಿಸಿದ ಅರ್ಧಗಜ ಉದ್ದದ ಚೂರಿಯನ್ನು ತೆಗೆದರು ಅದರ ಹಿಂದೆ ಕೀಲಿಕೈಗಳ ಗೊಂಚಲವೂ ನೇತಾಡುತ್ತಿತ್ತು ಬ್ಯಾರಿ ಆ ಚಾಕು ನೋಡಿಯಾದರೂ ಹೆದರಲೆಂದು ಅವರು ಅದನ್ನು ತೆಗೆದರೋ ಗೊತ್ತಿಲ್ಲ ಆದರೂ ಅದನ್ನು ಬಿಡಿಸಿರಲಿಲ್ಲ

ಬಹುಶಃ ಅವರ ಅರ್ಥ "ನನ್ನಲ್ಲಿ ಚೂರಿಯಿದೆ—ಜಾಗ್ರತೆ!" ಎಂಬುದೋ ಏನೋ! ಹೀಗೆ ಅವರು ಚೂರಿ ಪ್ರದರ್ಶಿಸುವಾಗ ಬ್ಯಾರಿಯೂ ಮೌನವಾಗಿದ್ದ

"ಬೆರಣಿ ಚಾಕು" ಎಂದು ಮನಸ್ಸಿನಲ್ಲೇ ಅಂದುಕೊಂಡ

"ಏನು ತಿರ್ಮಾಲೆ? ಅವನನ್ನು ಕಳುಹಿಸುವುದಿಲ್ಲವೋ ನೀನು?" ಎಂದು ಅಣ್ಣಪ್ಪಯ್ಯ ಚಾಕನ್ನು ಕೈಯಲ್ಲಿ ಅತ್ತಿತ್ತ ತಿರುಗಿಸುತ್ತ ಕೇಳಿದರು ತಾನಿನ್ನು ಇಲ್ಲಿ ನಿಲ್ಲುವುದು ಒಳ್ಳೆಯದಲ್ಲ ಎಂದು ಬಗೆದ ತಿರ್ಮಾಲೆ ಓಡಿದಳು

ಆಗ ಅವರು ಅವಳ ಹಿಂದೆ ಹೋಗಲು ಅಣಿಯಾಗಿ ಎದ್ದು ನಿಂತರು

ಬ್ಯಾರಿಗೆ ಎಲ್ಲಿಂದ ಕೋಪ ಬಂತೋ ದೇವರಿಗೆ ಗೊತ್ತು. ಕಿಸೆಯೊಳಗಿನಿಂದ ಒಂದು ಚೂರಿ ಚಕ್ಕನೆ ಹೊರತೆಗೆದ 'ಪಟ್' 'ಪಟ್' ಎಂದು ಎರಡು ಸಲ ಚಾಕು ಬಿಡಿಸುವಾಗ ಸಪ್ಪಳವಾದದ್ದು ಅಣ್ಣಪ್ಪಯ್ಯನವರಿಗೆ ಕೇಳಿಸಿತು ಝುಳಪಳನೆ ಮಿಂಚುವ ಒಂದು ಮೊಳದ ಚೂರಿ ಬಿಡಿಸಿ ಕೈಯಲ್ಲಿ ಎತ್ತಿ ಹಿಡಿದುಕೊಂಡು ಬ್ಯಾರಿ ಬಾಯಿಯಿಂದ "ನಾಯಿರಂಡ್ರಮುನಾ" ಎಂದು ಬೈದು ಬಿಟ್ಟ

ಅಣ್ಣಪ್ಪಯ್ಯ ಭೂಮಿಗಿಳಿದರು ಮಡಚಿಕೊಂಡ ಚಾಕುವನ್ನು ಹಿಡಿದುಕೊಳ್ಳುವುದಕ್ಕೂ ಅವರಿಗೆ ಧೈರ್ಯ ಸಾಲಲಿಲ್ಲ ಕೈ ನಡುಗಿತು ಚಾಕು ಕೈಯಿಂದ ಕೆಳಗೆ ಬೀಳುವದರಲ್ಲಿಯೂ ಇತ್ತು

"ಇನ್ನು ಕಾಲಿಗೆ ಬುದ್ಧಿ ಹೇಳುವುದೇ ಲೇಸು" ಎಂದು ಮನಸ್ಸಿನಲ್ಲಿ ನೆನಸಿಕೊಂಡು ಹೊರಗೆ ಹೋಗುವುದೆಂದು ಮುಂದ ಸರಿದು ಹೊರಳುವಾಗ "ಹೂಂ" ಎಂದನು ಬ್ಯಾರಿ! ಅವನ ಧ್ವನಿ—ಅವನ ರಾವಣ ಶರೀರ ಎಲ್ಲವನ್ನು ನೋಡಿ ಅಣ್ಣಪ್ಪಯ್ಯ ಬೆದರಿ ಬೆವರಿನಿಂದ ಸ್ನಾನ ಮಾಡಿಸಿದಂತಾದರು ಅವನಾದರೂ ಇವರನ್ನು ಒಳಗೆ ಹೋಗಲಿಕ್ಕೆ ಬಿಡಲಿಲ್ಲ ಹೊರಗೂ ಹೋಗಲಿಕ್ಕೆ ಬಿಡಲಿಲ್ಲ

"ಇವನ ಕೈಯಿಂದ ಜೀವ ಉಳಿಸಿಕೊಂಡು ಹೋಗುವುದು ಕಠಿಣ" ಎಂದು ಅವರಿಗೂ ಅನಿಸಿತು. ಹೊರಗೆ ಕತ್ತಲಾಗುತ್ತ ಬಂತು ಒಳಗೂ ಅದೇ ಕತ್ತಲು ಕವಿದಿತ್ತು ಬೊಬ್ಬೆ ಹಾಕಿದರೂ ಆ ಅಪರಿಚಿತ ಊರಲ್ಲಿ ಪಾರಾಗುವುದು ಸುಲಭವಲ್ಲ ಹಾಗೆ ಬಾಯಿ ತೆರೆಯುವುದೂ ಬ್ಯಾರಿಯ ಚೂರಿ ನೋಡಿದಾಗ ಕಷ್ಟಕರವಾಗಿತ್ತು—ಅವರಿಗೆ

ಕತ್ತಲಲ್ಲಿ ಮನುಷ್ಯರಿಗೆ ಮನುಷ್ಯರು ಮಸಕು ಮಸಕಾಗಿ ಕಾಣುತ್ತಿದ್ದರು ಆಗ ಕಾಂತಪ್ಪ ಸಂತೆ ಮುಗಿಸಿಕೊಂಡು ಮನೆಯತ್ತ ನಡೆದು ಬರುತ್ತಿದ್ದ ತಿರ್ಮಾಲೆಯ ಮನೆಯ ಅಂಗಳದಲ್ಲಿ ಅಣ್ಣಪ್ಪಯ್ಯನವರು ಸಂತೆಯಿಂದ ತಂದ ಒಂದು ಮಣ್ಣಿನ ಹೊಸ ಹಂಡೆ ಅವನಿಗೆ ಕಾಣಿಸಿತು

"ಮನೆಗೆ ಎಂದು ಖರೀದಿ ಮಾಡಿದ ಹಂಡೆಯನ್ನು ತಿರ್ಮಾಲೆಯ ಮನೆಯ ಅಂಗಳದಲ್ಲಿ ಯಾಕೆ ಇಟ್ಟಿದ್ದಾರೆ? , ಇನ್ನೂ ಇವರು ಇವಳ

ಮನೆ ಬಿಡಲಿಲ್ಲವೋ—ಕತ್ತಲಾಗುತ್ತ ಬಂದಿದೆ . ಇರಲಿ, ಹೋಗಿ ಕೇಳಿ ಬರುವ ಇದ್ದರೆ ಒಟ್ಟಿಗೆ ಹೋದರಾಯಿತು ನನಗೂ ಜೋಡಿಯಾಯಿತು ಹೇಗೂ ಕತ್ತಲಾಗಿದೆ ... ಮುದುಕರಾದರೂ ಎಂಟು ದಿವಸಕ್ಕೊಮ್ಮೆ ಇವಳ ಮನೆಗೆ ಭೇಟಿ ಕೊಡದಿದ್ದರೆ—ಇವರಿಗೆ ನಿದ್ದೆ ಬೀಳುವುದಿಲ್ಲ" ಎಂದು ಆಲೋಚಿಸುತ್ತ ಕಾಂತಪ್ಪ ತಿರ್ಮಾಲೆಯ ಮನೆಯ ಅಂಗಳಕ್ಕೆ ತಲುಪಿಯಾಯಿತು

ಚಾವಡಿಯಲ್ಲಿ ಬ್ಯಾರಿಯ ಚೂರಿ ಮೊದಲು ಅವನಿಗೆ ಕಂಡಿತ್ತು ಅತ್ತ ಅವನ ಮುಂದೆ ಅಣ್ಣಪ್ಪಯ್ಯನವರೂ ನಿಂತಿದ್ದು ನೋಡಿದ ಸ್ವಲ್ಪ ಆಲೋಚನೆಯನ್ನು ಮಾಡಿದ ಕಾಂತಪ್ಪ ಕೂಡಲೇ ಒಂದು ಉಪಾಯವನ್ನು ಹೂಡಿದ

ಚಾವಡಿಗೆ ಹೋಗಿ, "ಇದೇನು ಬ್ಯಾರಿಗಳೇ ?" ಎಂದು ಕೇಳಿದ

" ನೋಕೋ ನಾಯಿ ರಂಡ್ರಮುನಾ ! " ಎಂದು ಬ್ಯಾರಿ ಚಾಕು ಮಡಚಿದ

"ಇಲ್ಯೆ—ಇಲ್ಯೆ" ಎನ್ನುತ್ತ ಕಾಂತಪ್ಪ ಬ್ಯಾರಿಯನ್ನು ಸಮಾಧಾನದಿಂದ ಹಿಡಿದು ಅಲ್ಲಿಯೇ ಕೂಡಿಸಿದ

ಅಣ್ಣಪ್ಪಯ್ಯ ಬೆವರಿ ಮೂಕರಾಗಿದ್ದರ ಅವರೂ ಕೂತರು—ಪ್ರಯಾಸದಿಂದ

ಬ್ಯಾರಿಯೊಡನೆ ಅವನ ಭಾಷೆಯಲ್ಲೇ " ನೀವು ಪೋಕ್ರಿ ಬ್ಯಾರಿಯ ಅಳಿಯರೇ ?" ಎಂದು ಕೇಳಿದ ಯಾಕಂದರೆ ಒಮ್ಮೆ ಸಂತೆಯಲ್ಲಿ ಎರಡು ಮುದಿ ಕೋಣಗಳನ್ನು 'ಚರ್ಮಕ್ಕಾಗಿ' ವ್ಯಾಪಾರ ಮಾಡುವಾಗ ಪೋಕ್ರಿ ಬ್ಯಾರಿಯ ಬಳಿಯಲ್ಲಿ ಈ ಬ್ಯಾರಿಯೂ ನಿಂತಿದ್ದ. ಅಂದು ಅವನಿಗೂ ಪೋಕ್ರಿ ಬ್ಯಾರಿಗೂ ಏನು ಸಂಬಂಧ ಎಂಬುದನ್ನು ಕಾಂತಪ್ಪ ಪರಭಾರೆಯಾಗಿ ತಿಳಿದುಕೊಂಡಿದ್ದ ಆ ನೆನಪಿನ ಮೇಲೆ ಇಂದು ಈ ಶೇಕ್ರೆ ಬ್ಯಾರಿಯ ಗುರ್ತುಮಾಡಿಕೊಂಡ

ಕಾಂತಪ್ಪನ ಭೀಮ ದೇಹ ಹಾಗೂ ಅವನ ಶೌರ್ಯಗಳನ್ನು ಬಲ್ಲ ಶೇಕ್ರೆಯೂ ಸಮಾಧಾನದ ಮಾರ್ಗಕ್ಕೆ ಇಳಿದಾಯಿತು

ಅಣ್ಣಪ್ಪಯ್ಯನವರು ಆಗ ಸರಾಗವಾಗಿ ಅಲ್ಲಿಯ ಗಾಳಿಯನ್ನು ಉಸಿರಾಡಿಸತೊಡಗಿದರು

ಆಮೇಲೆ "ನೀವು ಎಷ್ಟು ದಿವಸವಾಯಿತು ಇಲ್ಲಿಗೆ ಹಾಜರಿ ಹಾಕಲಿಕ್ಕೆ

ಹತ್ತಿ?" ಎಂದು ಕಾಂತಪ್ಪ ಆವನಿಗೆ ಕೇಳಿ ಎಲ್ಲ ಇತಿಹಾಸವನ್ನು ಅರಿತು ಕೊಂಡ ತರುವಾಯ "ಇವರು ಇಲ್ಲಿಗೆ ಇನ್ನು ಮುಂದೆ ಕಾಲಿಡದಂತೆ ನಾನು ಮಾಡುತ್ತೇನೆ ಇವರು ಇಲ್ಲಿಗೆ ಬಾರದಂತೆ ನಾನು ಜವಾಬ್ದಾರಿ! ನೀವು ಇನ್ನು ಇವರಿಗೆ ತೊಂದರೆ ಕೊಡಬಾರದು" ಎಂದು ಬ್ಯಾರಿಗೆ ಹೇಳಿದ ಕಾಂತ ಪ್ಪನ ಪಂಚಾಯತಿಕೆಯ ಮಾತುಗಳಿಗ ಬ್ಯಾರಿ ಒಪ್ಪಿದ

ಚಾವಡಿಯ ಹಿಂದಿನ ಬಾಗಿಲದ ಹತ್ತಿರ ಯಾರೋ ಕೂತಿದ್ದರು ಅಲ್ಲಿಗೆ ಕಾಂತಪ್ಪ ತನ್ನ ಬ್ಯಾಟ್ರಿಯ ಬೆಳಕು ತೂರಿದ

"ಯಾರದು ಕಾಂತಪ್ಪಣ್ಣನೋ?" ಎನ್ನುತ್ತ ತಿರ್ಮಾಲೆ ಹೊರಗೆ ಬಂದಳು

"ನೀನೇನು ಇವರ 'ಕೋಳಿಯಾಟ' ನೋಡಲಿಕ್ಕೆ ಅಲ್ಲಿ ಕೂತದ್ದೋ?" ಎಂದು ಆವಳಿಗೂ ಮಾತಿನಿಂದ ಮಡಿ ಮಾಡಿದ

"ಧನಿಗಳು ಆವರಿಗೆ ಚೂರಿ ತೋರಿಸಿದರು! ಆಗ ಬ್ಯಾರಿಗಳಿಗೆ ಸಿಟ್ಟು ಬಂತು" ಎಂದು ತಿರ್ಮಾಲೆ ಹೇಳುವಾಗ, "ನಾನು ಚೂರಿ ಬಿಡಿಸಲಿಲ್ಲ' ಎಂದು ಉತ್ತರಿಸಲಿಕ್ಕೆ ಅಣ್ಣಪ್ಪಯ್ಯನವರಿಗ ಬಾಯಿ ಬರಲಿಲ್ಲ ಅವರ ಮುಖ ಕೆಳಗೆ ಹಾಕಿ ಸುಮ್ಮನೆ ಕೂತಿದ್ದರು

"ನೀನು ದೊಡ್ಡವಳು ಮಹಾರಾಯಳೇ! ನಿನಗೆ ಈಗ ಈ ಮುದು ಕರು ಹೇಗೆ ಕಣ್ಣಿಗೆ ಕಂಡಾರು? ಮೊದಲು ಅವರೇ ನಿನಗೆ ಬೇಕಾದರು ಆವರಿಂದಲೇ ನಿನಗ ಒಂದು ಆಸ್ತಿ ಸಿಕ್ಕಿತು ನಿನಗೆ ಇನ್ನು ಅವರಿಂದ ಏನೂ ಉಪಯೋಗವಿಲ್ಲ ಬಿಡು ಇನ್ನು ಮುಂದೆ ಅವರ ತಳ್ಳಿಗೆ ನೀನು ಹೋಗ ಬೇಡ ಅವರು ನಿನ್ನ ತಳ್ಳಿಗೆ ಬರುವುದಿಲ್ಲ ಅದಕ್ಕೆ ನಾನು ಜವಾಬುದಾರಿ ಇದ್ದೇನೆ ನೀನು ಏನಾದರೂ ಅವರಿಗೆ ಕಡ್ಡಿ ಮಾಡಲಿಕ್ಕೆ ಬಂದಿಯಾದರೆ— ಮತ್ತೆ ನಿನ್ನ ಪರಿಣಾಮ ನೆಟ್ಟಗಾಗದು ತಿಳಿಯಿತೇ? ನೀನು ಆಯಿತು, ನಿನ್ನ ಈ ಊರಿನ ಬ್ಯಾರಿಗಳೂ ಆಯಿತು ಸುಖವಾಗಿ ಇದ್ದುಕೊಳ್ಳಿ ಆದರೆ ಈ ರೀತಿ ನೀನು ಮುದಿ ಬ್ರಾಹ್ಮಣನಿಗೆ ಮೋಸ ಮಾಡಬಾರದಿತ್ತು ಆಯಿತು— ಮಾಡಿದಿ ಏನು ಮಾಡುವುದು? ಅದರ ಫಲ ನೀನು ಉಣ್ಣುತ್ತಿ!" ಎಂದು ಚೆನ್ನಾಗಿ ಮಾತಿನಿಂದ ಅವಳನ್ನು ತೊಳೆದು, ಎಲ್ಲ ವಿಲಾವರಿ ಮಾಡಿ ಕೊಂಡು, ಅಣ್ಣಪ್ಪಯ್ಯ ಇನ್ನು ಮುಂದೆ ಎರ್ಮಾಲಿಗೆ ಹೋಗದಂತೆ ಮಾಡಿ

ಬಿಟ್ಟ

ಆ ದಿನ ರಾತ್ರಿ ಅಣ್ಣಪ್ಪಯ್ಯನವರನ್ನು ಮುಂದಿನಿಂದ ನಡೆಯಿಸಿಕೊಂಡು ಅವರ ಸಂತೆಯ ಸಾಮಾನುಗಳನ್ನೆಲ್ಲ ತಾನು ಹೊತ್ತುಕೊಂಡು ಅವರ ಕೈ-ಯಲ್ಲೇ ಬ್ಯಾಟ್ರಿ ಕೊಟ್ಟು, "ನೀವೇನು ಹೆದರುವುದು ಬೇಡ" ಎಂದು ಧೈರ್ಯ ಹೇಳಿ ಕಾಂತಪ್ಪ—ಎಡಹಿತ್ತಲಿಗೆ ಮುಟ್ಟುವಾಗ ಮಧ್ಯರಾತ್ರಿ ಸಮೀಪಿಸಿತ್ತು

ಅಂದಿನಿಂದ ಅಣ್ಣಪ್ಪಯ್ಯನವರಿಗೆ ತಮ್ಮ ಒಕ್ಕಲು ಕಾಂತಪ್ಪನೆಂದರೆ ತುಂಬ ಅಭಿಮಾನ ಎಷ್ಟೋ ದಿನಗಳ ಪರ್ಯಂತ ಬ್ಯಾರಿಗಳ ಹೆದರಿಕೆ ಯಿಂದ ಕಾಂತಪ್ಪನನ್ನೂ ಹಿಂದಿನಿಂದ ಕರೆದುಕೊಂಡೇ ಮನೆ ಬಿಡುತ್ತಿದ್ದರು ರಾತ್ರಿ ಕೂಡಾ ಅವನಿಗೆ ತಮ್ಮಲ್ಲಿಗೇ ಮಲಗಲು ಬರಲು ಅಪ್ಪಣೆ ಕೊಡಲಾಗಿತ್ತು ಎರ್ಮಾಲ ಸಂತೆಗೆ ಹೋಗುವುದನ್ನು ತೊರೆದೇ ಬಿಟ್ಟರು ಹಿಂದೆ ಹೋಗುತ್ತಿದ್ದ ಸಂಪಿಗೆ ಸಂತೆಗೇ ವಾರಕ್ಕೊಮ್ಮೆ ಹೋಗುವುದನ್ನೂ ಬಿಟ್ಟು ಬಿಟ್ಟರು ಎಲ್ಲಾದರೂ ತಿಂಗಳಿಗೊಮ್ಮೆ ಮೂಡುಬಿದ್ರೆ ಸಂತೆಗೆ ಕಾಂತಪ್ಪನನ್ನು ಕರೆದುಕೊಂಡು ಹೋಗುತ್ತಿದ್ದರು. ಫಕ್ಕನೆ ಎಲ್ಲಿಯಾದರೂ ಬ್ಯಾರಿ ಮುಂಡು' ಉಟ್ಟುಕೊಂಡವರನ್ನು ಕಂಡೊಡನೆ, ಅವರ ಮುಖ ನೋಡುವ ವರೆಗೆ ಅಣ್ಣಪ್ಪಯ್ಯನವರ ಜೀವದಲ್ಲಿ ಜೀವವಿರುತ್ತಿರಲಿಲ್ಲ

ಐದಾರು ತಿಂಗಳು ಕಳೆದ ನಂತರ ಅಣ್ಣಪ್ಪಯ್ಯನವರ ಹೆದರಿಕೆ ಹೋ-ಯಿತು ಅಲ್ಲಿಯ ವರೆಗೆ ಅವರು ಮನೆಯಲ್ಲಿ ಇದ್ದದ್ದೇ ಹೆಚ್ಚು ಆಮೇಲೆ ತಿರ್ಮಾಲೆಯೂ ಯಾವ ರಗಳೆಯನ್ನು ಮಾಡಲಿಲ್ಲ ಅಲ್ಲಿಗೇ ಅವಳ ಸ್ನೇಹ ಕಡಿದುಹೋಯಿತು

ಅಣ್ಣಪ್ಪಯ್ಯ ಪುನಃ ಧೈರ್ಯ ತಾಳಿದರು ಅವರ ವಿಷಯ ಲಾಲಸೆ ಕೊನೆಗೊಂಡಿತು ಅಂತೇ ಅವರ ಮಿಕ್ಕ ಕಿತಾಮತಿಗಳು ಚಿಗುರತೊಡಗಿದವು ಅಣ್ಣತಮ್ಮಂದಿರ ವೈಮನಸ್ಸು ಹೆಚ್ಚಾಗುತ್ತ ಬಂತು ಒಬ್ಬರನ್ನೊಬ್ಬರು ದೂಷಿಸಿ, ಬೇರೆಯವರ ಮುಖಾಂತರ ಮಾತಾಡಿಕೊಳ್ಳಲಿಕ್ಕೂ ಪ್ರಾರಂಭಿಸಿದರು ಮುಕ್ತೇಶ್ವರರ ಗೆಳೆತನವನ್ನು ಬಿಡಲಿಲ್ಲ ಶಂಕರನ ಮೇಲಿನ ದ್ವೇಷ ಕಡಿಮೆ ಮಾಡಲಿಲ್ಲ ಆ ಬಗ್ಗೆ ಕಾಂತಪ್ಪ ಎಷ್ಟು ಹೇಳಿದರೂ ಅವರು ಕಿವುಡರಾಗಿಯೇ ಕುಳಿತಿದ್ದರು ಒಟ್ಟಿನಲ್ಲಿ ಕುಯುಕ್ತಿಯ ಚಟುವಟಿಕೆಗಳಲ್ಲಿ ಗುಪ್ತವಾಗಿ ಭಾಗ ವಹಿಸುವುದರಲ್ಲಿ ಅಣ್ಣಪ್ಪಯ್ಯ ಮುಂದಾಳಾಗುತ್ತ ಬಂದರು

"ಗಂಡನಿಲ್ಲದ ಸಕೇಶಿಯನ್ನು ತಂದು ಮನೆಯಲ್ಲಿ ಇಟ್ಟುಕೊಂಡು ಹೆಂಡತಿಯನ್ನು ಕೊಂದ ಮುದುಕನಾಗುತ್ತ ಬಂದಂತೆ ಅವನಿಗೆ ಮದ ಏರುತ್ತ ಬಂದ ಹಾಗೆ ಕಾಣುತ್ತದೆ ಇಲ್ಲದಿದ್ದರೆ ಆ ವಿಧವೆಯನ್ನು ಯಾಕೆ ತಂದು ಮನೆಯಲ್ಲಿ ಇಡಬೇಕು?" ಎಂದು ಅಣ್ಣಪ್ಪಯ್ಯನವರು ಹೊನ್ನಪ್ಪಯ್ಯ ನವರನ್ನು ಟೀಕಿಸುತ್ತ ನಡೆದರು

"ನಾನೇನು ಅವನ ಹಾಗೆ ಪರಜಾತಿಯವಳನ್ನು ಇಟ್ಟುಕೊಂಡು, ಬ್ಯಾರಿಯಿಂದ ಹೊಡೆಸಿಕೊಳ್ಳಲಿಲ್ಲ ನಮ್ಮ ಜಾತಿಯವಳನ್ನೇ ಇಟ್ಟುಕೊಂಡಿದ್ದೇನೆ ಅದೂ ಹೆಂಡತಿ ಸತ್ತಮೇಲೆ! ಆ ತಿರ್ವಾಳೆಯ ಜಾತಿ ಯಾವುದು? ಇವನ ಜಾತಿ ಯಾವುದು? ನಮ್ಮ ಜಾತಿಯ ಮರ್ಯಾದೆಯನ್ನೇ ಕಳೆದು ಬಿಟ್ಟ' ಎಂದು ಹೊನ್ನಪ್ಪಯ್ಯನವರೂ ತಮ್ಮನ ಮಾತಿಗೆ ಸರಿಯಾದ ಉತ್ತರ ಕೊಟ್ಟು ಕಳುಹಿಸಿದರಂತೆ

ಹೀಗೆ ಅಣ್ಣತಮ್ಮಂದಿರಲ್ಲಿ ತುರುಸಿನ ವಾಗ್ವಾದಗಳೂ ನಡೆಯುತ್ತಿದ್ದವು. ಅವುಗಳಿಗೆ ತುದಿಬುಡಗಳು ಇರಲಿಲ್ಲ ಹಾಗೆ ಮಾತು ಹಾರಿಸಲಿಕ್ಕೆ ಅಣ್ಣಪ್ಪಯ್ಯನವರಿಗೆ ಹುರುಪೂ ಇತ್ತು ಯಾಕಂದರೆ ಅಣ್ಣನ ಮನೆಯಂತೆ ಅವರ ಮನೆಯ ಪರಿಸ್ಥಿತಿ ಹದಗೆಟ್ಟಿರಲಿಲ್ಲ ಅವರ ಅಳಿಯ—ನಾರಾಯಣಯ್ಯನೂ ಬಂದಿದ್ದಾನೆ ಹೀಗಾಗಿ ಅಣ್ಣಪ್ಪಯ್ಯ ನಿಶ್ಚಿಂತೆಯಿಂದ ಇದ್ದರು ಮುಕ್ತೇಶ್ವರರ ಗೆಳೆತನವೂ ಬಲವಾಗಿತ್ತು ಅವರಿಬ್ಬರೂ ನೇರಿ ಶಂಕರನಿಗೆ ಬುದ್ಧಿ ಕಲಿಸುವ ಕಾರ್ಯವನ್ನೂ ಇದೇ ಜಾತ್ರೆಯ ಸಮಯದಲ್ಲಿ ಮಾಡುವವರಿದ್ದರು

ತಮ್ಮ ಪಕ್ಷಕ್ಕೆ ಎಂಟು ಜನ ಬಂಟರನ್ನು ನೇಮಿಸಿಕೊಂಡಿದ್ದರು. ಒಬ್ಬೊಬ್ಬರಿಗೆ ಇಪ್ಪತ್ತೈದು ರೂಪಾಯಿಗಳ ಇನಾಂ ಕೊಡುವುದೆಂದು ಊರ ಜಾತ್ರೆಗೆ ಒಂದು ತಿಂಗಳ ಮುಂಚೆ ಕರಾರು ಆಗಿತ್ತು ಆ ಕೆಲಸವನ್ನೆಲ್ಲ ಮುಕ್ತೇಶ್ವರರೇ ಮಾಡಿದ್ದರು ಹಣವನ್ನು ಅಣ್ಣಪ್ಪಯ್ಯ ಉಚ್ಚುವವರಲ್ಲ. ಆದರೆ ಮುಕ್ತೇಶ್ವರರ ಕೆಲವು ಗುಪ್ತ ಕೆಲಸಗಳು ಅಣ್ಣಪ್ಪಯ್ಯನವರಿಂದಲೇ ಆಗಬೇಕಿದ್ದವು ಹಣದ ವಿಷಯ ಒಂದು ಬಿಟ್ಟು ಉಳಿದೆಲ್ಲ ರೀತಿಯಿಂದಲೂ ಅವರು ಮುಕ್ತೇಶ್ವರರಿಗೆ ನೆರವಾದರು

ದಿನಗಳು ಕಳೆಯುತ್ತ ಹೋದಂತೆ ನಾಲ್ಕಾರು ಸಲ ಮುಕ್ತೇಶ್ವರರು ಅಣ್ಣಪ್ಪಯ್ಯನವರನ್ನು ತಮ್ಮ ಮನೆಗೆ ಬರಮಾಡಿಸಿಕೊಳ್ಳುವುದಕ್ಕೂ ಪ್ರಾರಂಭಿಸಿದರು ಯಾಕಂದರೆ ಎಡಹಿತ್ತಲಲ್ಲಿ ನಾರಾಯಣಯ್ಯ ಮಾವನ ಮನೆ

ಕಾಯುತ್ತಿದ್ದ ಅವನಮೇಲೆ ಅಣ್ಣಪ್ಪಯ್ಯನವರಿಗಾಗಲಿ, ಮುಕ್ತೇಶ್ವರರಿಗಾಗಲೀ ವಿಶ್ವಾಸವಿರಲಿಲ್ಲ ಹಾಗೆಲ್ಲ ಒಬ್ಬರ ಹತ್ತಿರವಿದ್ದಾಗ ಮಾತಾಡುವ ವಿಷಯವೂ ಅದಲ್ಲವಷ್ಟೆ ಊರ ಜಾತ್ರೆಗೆ ಹದಿನೈದು ದಿವಸಗಳ ಮುಂಚೆ, ಅಣ್ಣಪ್ಪಯ್ಯ ನವರ ಮನೆಗೆ ಎಪ್ಪತ್ತು ಡಬ್ಬಿ ಚಿಮಣಿ ಎಣ್ಣೆ ಬಂದು ಬಿದ್ದದ್ದು ನೋಡಿ, ಅವರ ಅಳಿಯ ಆಶ್ಚರ್ಯದಿಂದ "ಇದೇನು ಮಾವಾ? ಚಿಮಣಿ ಎಣ್ಣೆಯ ಬ್ಲ್ಯಾಕ್ ಮಾರ್ಕೇಟ ಮಾಡುತ್ತೀರೊ?" ಎಂದು ಕೇಳಿದ್ದ

"ನನ್ನದಲ್ಲ ಮಹಾರಾಯಾ ಅದು, ನಮ್ಮ ಊರ ಶ್ರೀಮಂತ ಮುಕ್ತೇಶ್ವರರದ್ದು" ಎಂದು ಅಣ್ಣಪ್ಪಯ್ಯ ಉತ್ತರಿಸಿದ್ದರು

ಮುಂದೆ ಅಳಿಯನೂ ಅದರ ಬಗ್ಗೆ ಹೆಚ್ಚಿಗೆ ತಿಳಿಯಲು ಹವಣಿಸಲಿಲ್ಲ

"ಇದೆಲ್ಲ ಏನು ಅಪ್ಪಾ? ಯಾರ್ಯಾರ ಚಿಮಣಿ ಡಬ್ಬಿಗಳು ನಮ್ಮಲ್ಲಿಗೆ ತಂದಿಡುವುದು? ಈಗ ಚಿಮಣಿ ಎಣ್ಣೆ ಸಿಗದ ಕಾಲದಲ್ಲಿ ಇಷ್ಟು ಡಬ್ಬಿ ಗಳನ್ನು ಅವರು ಹೇಗೆ ತಲಾಸು ಮಾಡಿದರೋ! ಮತ್ತೆ ನಮ್ಮ ಮೇಲೇ ನಾದರೂ ಅಪವಾದ ಬರುವುದಿದ್ದರೆ ಅವುಗಳನ್ನು ಇವತ್ತೇ ಒಯ್ಯಲಿಕ್ಕೆ ಹೇಳು" ಎಂಬುದು ಸಂಜೀವಿಯ ಎಚ್ಚರಿಕೆಯಾಗಿತ್ತು

"ಯಾರೊಡನೆಯೂ ಈ ಸುದ್ದಿ ಹೇಳಬೇಡ" ಎಂದು ಅವಳಿಗೆ ಅಣ್ಣಪ್ಪಯ್ಯನವರೂ ಎಚ್ಚರಿಕೆ ಕೊಟ್ಟಿದ್ದರು ಅವಳು ಯಾರೊಡನೆಯೂ ಆ ಸುದ್ದಿ ಹೇಳಲಿಲ್ಲ ಚಿಮಣಿ ಎಣ್ಣೆಯ ಡಬ್ಬಿಗಳು ಯಾರಿಗೂ ಕಾಣದಂತೆ ಕೋಣೆಯೊಳಗೆ ಮುಚ್ಚಿ ಇಡುವ ಕೆಲಸವನ್ನು ಅಣ್ಣಪ್ಪಯ್ಯ ಮಾಡಬೇಕಾಗಿತ್ತು, ಮಾಡಿದ್ದರು ಎನ್ನಿ

ಮನೆಯಲ್ಲಿ ಚಿಮಣಿ ಎಣ್ಣೆಯ ಡಬ್ಬಿಗಳು ಬರುವ ತನಕ ಅಣ್ಣಪ್ಪಯ್ಯ ಅಳಿಯನೊಡನೆ ಚೆನ್ನಾಗಿ ಪಟ್ಟಾಂಗ ಕೊಚ್ಚುತ್ತಿದ್ದರು ಆದರೆ ಈಗೀಗ ಅವರು ಯಾವುದೋ ವಿಚಾರದಲ್ಲಿ ಇದ್ದಂತೆ ಅವರ ಮುಖಚರ್ಯೆ ಹೇಳು ತ್ತಿತ್ತು ಅವರ ಉದಾಸೀನತೆಯನ್ನು ಕಂಡು ನಾರಾಯಣಯ್ಯನಿಗೆ ಬೇರೆಯೇ ಕಲ್ಪನೆ ಆಯಿತು ನಾನು ಬಂದು ಇಲ್ಲಿ ನೆಲಸಿ ಏಳೆಂಟು ತಿಂಗಳಾದವು ಹೆಂಡತಿಯನ್ನೂ ಕರೆದೊಯ್ಯಲಿಲ್ಲ ಅದಕ್ಕಾಗಿ ಮನಸ್ಸಿನಲ್ಲಿ ಬೇಜಾರ ಮಾಡಿಕೊಂಡಿರಬಹುದೇ—ಎಂದು ಅವನು ಸಂಶಯಪಟ್ಟ ಹಾಗಿದ್ದರೆ ತಾನು ಹೆಂಡತಿಯನ್ನು ಕರೆದೊಯ್ಯುತ್ತೇನೆ—ಎಂದೂ ನಿರ್ಧರಿಸಿದ

ಕಾರಣ, ಒಮ್ಮೆ ರಾತ್ರಿಯ ಹೊತ್ತು ಊಟವಾದ ಮೇಲೆ "ಏನು ಮಾವಾ, ಬಹಳ ವಿಚಾರದಲ್ಲಿ ಬಿದ್ದಹಾಗೆ ಕಾಣುತ್ತದೆ" ಎಂದು ಕೇಳಿದ

"ಏನೂ ಇಲ್ಲ ವಿಚಾರ ಯಾತರದ್ದು ಮಣ್ಣಿನದ್ದು ?" ಎಂದರು ಅಣ್ಣಪ್ಪಯ್ಯ.

"ಮೊದಲಿನಂತೆ ಈಗ ನೀವು ನನ್ನೊಡನೆ ಮಾತಾಡುವುದಿಲ್ಲ ಯಾಕೆ- ನಿಮಗೇನಾದರೂ ಬೇಜಾರ ಎನಿಸಿದರೆ ಹೇಳಬಹುದು ನಾನು ಇಲ್ಲಿಯ ವರೆಗೆ ನಿಮಗೆ ಸಾಕಷ್ಟು ತ್ರಾಸು ಕೊಟ್ಟಿದ್ದೇನೆ"

"ಛೇ ಛೇ, ಬೇಜಾರವೇತರದ್ದು ? ಮಾತಾಡುವುದೆಲ್ಲ ಮುಗಿದು ಹೋಯಿತು ಆವಾಗ ನೀನು ಹೊಸತಾಗಿ ಊರಿಗೆ ಬಂದವನು. ಅತ್ತ ಲಾಗಿನ ಸುದ್ದಿಯನ್ನು ಕೇಳುತ್ತಿದ್ದೆ ನಿನಗೆ ಹೇಳಿ ಹೇಳಿ ಬೇಸರವೂ ಬರುತ್ತಿರಲಿಲ್ಲ ನನಗೆ ಕೇಳಿಯೂ ಬೇಸರವಾಗುತ್ತಿರಲಿಲ್ಲ, ಈಗ ನಿನಗೆ ಸ್ವಲ್ಪ ವಿಶ್ರಾಂತಿ ಎಂದು ನಾನು ವಿಶೇಷ ಮಾತಾಡುವುದಿಲ್ಲ"

"ಅಥವಾ ನನ್ನ ಮೂರ್ಖತನ ನೋಡಿ ಮಾತಾಡುವುದಿಲ್ಲವೋ ?"

"ಮೂರ್ಖತನವೇತರದ್ದು ?"

"ಹೆಂಡತಿಯನ್ನು ಕಟ್ಟಿಕೊಂಡು ಮಾವನ ಮನೆಯಲ್ಲಿ ಡೇರೆ ಹೊಡೆದದ್ದು !"

"ಛೇ ! ಎಂಥ ಮಾತು ನನ್ನೀ ?"

"ಹಾಗಿದ್ದರೆ ಹೇಳಬಿಡಿ ನಾನು ಅವಳನ್ನು ಕರೆದುಕೊಂಡು ಗಟ್ಟ ಹತ್ತುತ್ತೇನೆ ಆದರೆ ನನ್ನ ಅಣ್ಣನ ಮನೆಗೆ ಹೋಗುವುದಿಲ್ಲ"

"ಈಗ ಹೇಗೆ ಅವಳನ್ನು ಕಳುಹಿಸಲಿಕ್ಕೆ ಸಾಧ್ಯವಿದೆ? ಅವಳು ಏಳು ತಿಂಗಳ ಗರ್ಭಿಣಿಯಲ್ಲವೋ? ಚೊಚ್ಚಲು ಬಾಣಂತನವನ್ನು ನಾನೇ ಮಾಡಿಸಬೇಕಾಗುತ್ತದೆ"

"ಅಲ್ಲ—ಮತ್ತೆ ನಿಮಗೆ ಮನಸ್ಸಿಗೆ ನೆಮ್ಮದಿ ..... ಇಲ್ಲದಿದ್ದರೆ ಬೇಡ ದೇವರಿದ್ದಾನೆ, ಹೇಗೂ ಆಗುತ್ತದೆ ನೀವೇನು ಇಲ್ಲಿಯ ವರೆಗ ನನ್ನ ಸಲುವಾಗಿ ಪಟ್ಟ ಕಷ್ಟಗಳು ಕಡಿಮೆಯೇ ?"

"ನೀನು ಯಾಕೆ ಹೀಗೆ ಮಾತಾಡುತ್ತಿ ನನ್ನೀ ? .... ನಾನೇನು ತಲೆ ಬುರುಡೆ ಇಲ್ಲದ ತಂದೆಯೆಂದು ತಿಳಿದೆಯಾ ? ಅಥವಾ ನನಗೆ ಹುಚ್ಚು ಹಿಡಿ

ದಿದೆ ಎಂದು ಬಗೆದೆಯಾ ? ನೀನು ಇಲ್ಲಿಯೇ ಸುಖವಾಗಿ ಇದ್ದರೆ ನನ್ನ ಮನಸ್ಸಿಗೆ ಸಂತೋಷ ಖರ್ಚು ಆಗುತ್ತದೆ—ಹಾಗೆ ಹೀಗೆ ಎಂದು ನನಗೆ ಹೊಟ್ಟೆಯುರಿಯೇ ? ನನ್ನ ಮಗಳಿಗೆ ನಾನು ಖರ್ಚು ಮಾಡದೆ ಮತ್ತಾರು ಮಾಡಬೇಕು ? ನಿನ್ನ ಅಣ್ಣನ ಹೆಂಡತಿ ಅವಳನ್ನು ಜೀವಂತ ಬಿಟ್ಟದ್ದು ದೊಡ್ಡದು ಎಂಬುದು ನಿನಗೆ ಗೊತ್ತಿಲ್ಲವೋ ? ನನಗೆ ಮಗಳ ಮೇಲೆ ಕನಿಕರ ಇಲ್ಲವೆಂಬುದು ನಿನ್ನ ಆಲೋಚನೆಯೋ ನನ್ನೀ ? ನಾನು ನಿನಗೆ ಊರಿಂದ ಬಂದ ದಿನವೇ ಹೇಳಲಿಲ್ಲವೋ— ಇಲ್ಲಿಯೇ ಇನ್ನು ಸುಖವಾಗಿ ಇರು ಎಂದು. ಇದನ್ನು ನಿನ್ನ ಮನೆಯೆಂದೇ ಭಾವಿಸಬೇಕೆಂದು ನಾನು ಹೇಳಲಿಲ್ಲವೋ— ಇನ್ನೊಮ್ಮೆ ನೀನು ಆ ಬ್ರಹ್ಮಜ್ಞಾನ—ಆ ಶುಂಠಿ ಸುಡುಗಾಡುಗಳಿಗೆ ತಲೆ ಹಾಕಬೇಡ ಎಂದು ನಾನೆಷ್ಟು ಹೇಳಿಕೊಂಡಿದ್ದೆ! ನೀನು ಔಷಧ ಧರ್ಮಾರ್ಥ ಕೊಡುವುದಿದ್ದರೆ—ಅಶ್ವತ್ಥಪುರದಲ್ಲಿ ನಿನ್ನ ಹೆಸರಿನ ಒಂದು ದವಾಖಾನೆ ಕಟ್ಟಿಸಬೇಕೆಂಬ ಕನಸನ್ನೂ ನಾನು ಕಟ್ಟಿದ್ದೇನೆ ದೇವರು ಒಳ್ಳೆಯದು ಮಾಡಿದರೆ ಎಲ್ಲರೂ ನಮ್ಮ ಮನೆತನದ ಹೆಸರು ಹೇಳಿಕೊಂಡು ಜಪ ಮಾಡುವಂತೆ ಮಾಡುತ್ತೇನೆ ಯಾವುದಕ್ಕೂ ಈ ವರುಷದ ಜಾತ್ರೆಯ ಗೊಂದಲವೊಂದು ಮುಗಿಯಲಿ

"ಯಾವ ವಿಷಯದಲ್ಲೂ ನೀನು ಚಿಂತೆ ಮಾಡುವುದು ಬೇಡ ಎಲ್ಲ ನಾನು ನೋಡಿಕೊಳ್ಳುತ್ತೇನೆ ಬಂದದ್ದು ಬರಲಿ ಯಾರು ಏನು ಬೇಕಾದರೂ ಹೇಳಲಿ ನೀನು ಹೆದರುವುದು ಬೇಡ ನೀನು ಇಲ್ಲಿಯೇ ಇರು ಅವಳು ಸುಖವಾಗಿ ಬಾಣಂತಿಯಾದ ಮೇಲೆ ಎಲ್ಲ ವಿಚಾರ ಮಾಡುವ ಅಲ್ಲಿಯವರೆಗ ನೀನು ಎಲ್ಲಿಯೂ ಹೋಗಬಾರದು ನಿನ್ನನ್ನು ಬೇರೆ ಊರಿಗೆ ಹೋಗಲು ಬಿಡಲಿಕ್ಕೂ ನನಗೆ ಹೆದರಿಕೆ ಯಾಕಂದರೆ ನಿನ್ನ ಜಾತಕದಲ್ಲೇ 'ಬಾಲ ಸನ್ಯಾಸಿ' ಎಂದು ಬರೆದಿದೆಯಂತೆ !"

"ನಾನೇನು ಸನ್ಯಾಸಿಯಲ್ಲ ಮಾವಾ! ನಾನೆಂಥ ಸಂನ್ಯಾಸಿ ? ಇನ್ನು ಒಂದೆರಡು ತಿಂಗಳು ದಾಟಿದರೆ ಒಂದು ಮಗುವಿನ ಅಪ್ಪನಾಗುತ್ತೇನೆ " ಎನ್ನುತ್ತ ನಾರಾಯಣಯ್ಯ ನಕ್ಕ

"ಹಾಗೆ ಸಂಸಾರದಲ್ಲಿ ಇದ್ದುಕೊಂಡೇ ತಪಸ್ಸು ಸಾಧಿಸಬೇಕು ಅದೇ ದೊಡ್ಡ ಕೆಲಸ ಅಂಥವರಿಗೆ ಸನ್ಯಾಸಿಯೆಂದು ಹೇಳಬೇಕು ಅದೆಲ್ಲ

ಬಿಟ್ಟು ಹೆಂಡತಿ ಮಕ್ಕಳನ್ನು ದಾರಿಯಲ್ಲಿ ಹಾಕಿ ಓಡಿಹೋದವರಿಗೆ ತಪಸ್ಸಿನಲ್ಲಿ ಸಿದ್ಧಿ ಸಿಕ್ಕೀತೇ? ಸಂಸಾರದ ಸುಖ ದುಃಖಗಳನ್ನು ಅನುಭವಿಸಿ, ಜೀವನವನ್ನು ಬೆಳಗಿಸಬೇಕು ಅಂದರೇ ಅವನಿಗೆ ಸಿದ್ಧಿ ದೊರೆಯುತ್ತದೆ ಹಾಗೆಲ್ಲ ಬ್ರಹ್ಮಚರ್ಯದಿಂದ ಮುಕ್ತಿ ಸಿಗುವುದಿದ್ದರೆ ಜಗತ್ತಿನಲ್ಲಿ ಗಂಡು-ಹೆಣ್ಣು ಗಳನ್ನೇಕ ದೇವರು ಹುಟ್ಟಿಸಬೇಕಿತ್ತು? ಕೇವಲ ಗಂಡಸರನ್ನೇ ಅಥವಾ ಹೆಂಗಸರನ್ನೇ ನಿರ್ಮಿಸಬಹುದಿತ್ತು ಅವನಿಗೆ ಭೂಮಿಯ ಮೇಲೆ ಸ್ಥಿರ ವಾದ ಜಾತಿಯೆಂದರೆ ಗಂಡು ಮತ್ತು ಹೆಣ್ಣುಗಳದ್ದು

"ಮನುಷ್ಯನಿಗೆ ಸತ್ತ ಮೇಲೆ ಸಿಗುವ ಸ್ವರ್ಗನರಕಗಳು ಸುಳ್ಳು ಬಾಳು ಬೆಳಗದಿದ್ದರೆ ಜೀವಂತವಿರುವಾಗ ಅವನಿಗೆ ಅಥವಾ ಅವಳಿಗೆ ನರಕ ಪ್ರಾಪ್ತಿ ಯಾಗುತ್ತದೆ ಕಾಮಕ್ಕೂ ಕಾಯಕ್ಕೂ ಹೂವು ಹಣ್ಣುಗಳಲ್ಲಿ ಇರುವ ಒಳ-ಸಂಬಂಧವಿದೆ ಕಾಯದಿಂದ ಕಾಮದ ಹೂ ಬಾಳುವೆಯ ಬಳ್ಳಿಯ ಮೂಲಕ ಅರಳಿದರೇನೇ ಮುಕ್ತಿಯ ಹಣ್ಣು ದೊರಕೀತು ಹೂ ಬಿಟ್ಟು ಬಾಡಿದ ಮೇಲೆಯೇ ಹಣ್ಣು ಹುಟ್ಟುತ್ತದಷ್ಟೆ?" ಎಂದು ಅಣ್ಣಪ್ಪಯ್ಯ ನಾರಾಯಣಯ್ಯ ಹಿಂದೆ ಹೇಳಿದ ಒಂದು ತತ್ವಜ್ಞಾನದ ಅಧ್ಯಾಯವನ್ನು ಅವನಿಗೇ ಹೇಳಿದರು ಸಂಸಾರ ಬಿಟ್ಟು ಓಡಿಹೋಗಿಯೂ ತಪಸ್ಸು ಮಾಡಬಹುದೆಂಬ ಇನ್ನೊಂದು ಮಾರ್ಗವನ್ನೂ ನಾರಾಯಣಯ್ಯ ಅವರ ಮುಂದೆ ಸಿದ್ಧಮಾಡಿ ತೋರಿಸಿದ್ದ ಆದರೆ ಅದನ್ನು ಅಣ್ಣಪ್ಪಯ್ಯ ಅವನಿಗೆ ಬೋಧಿಸಲಿಲ್ಲ ಒಟ್ಟಿನಲ್ಲಿ ಅವನ ವಿದ್ಯೆಯಿಂದ ಅವನಿಗೇ ಗುರುವೆನಿಸಿಕೊಂಡರು ತನ್ನ ಮೇಲೆ ಮಾವನಿಗೆ ಮನಸ್ತಾಪವಿಲ್ಲೆಂದು ಅವನು ಖಾತ್ರಿ ಮಾಡಿಕೊಂಡ!

ನಾರಾಯಣಯ್ಯ ಗಟ್ಟಿದಿಂದ ಬಂದ ದಿನವಂತೂ ಅಣ್ಣಪ್ಪಯ್ಯನವರಿಗೆ ಆದ ಸಂತೋಷ ಅಷ್ಟಿಷ್ಟಲ್ಲ, ಅದರಲ್ಲೂ ಅವನು ನೋಟುಗಳಿಂದ ಉಬ್ಬಿ ಕೊಂಡ ಒಂದು ಲಕೋಟೆಯನ್ನು ಅವರಿಗೆ ಅರ್ಪಿಸಿದಾಗ, "ಮೊದಲು ಕಾಗದ ಹಾಕಿದ್ದರೆ ನಾನೇ ಸಂಪಿಗೆಗೆ ಬರುತ್ತಿದ್ದೆ" ಎಂದು ಉಪಚಾರದ ಮಾತುಗಳನ್ನು ಆಡುತ್ತ ಅಣ್ಣಪ್ಪಯ್ಯ ಸ್ವರ್ಗಕ್ಕೆ ಮುಟ್ಟಿಯಾಗಿತ್ತು

"ಸಂಜೀವೀ" ಎಂದು ನೂರಾರು ಸಲ ಅಂದು ಅಳಿಯನ ಮುಂದೆ ಕರೆದೇ ಕರೆದಿದ್ದರು ಅಳಿಯನಿಗೆ ಬಡಿಸಿದಿಯೋ ಇಲ್ಲವೋ? ಎಂಬ ಚಿಕ್ಕ ಪುಟ್ಟ ಪ್ರಶ್ನೆಗಳಿಂದ ಹಿಡಿದು, "ಅವನಿಗೆ ನೀನೇನೂ ಅನ್ನಬೇಡ" ಎನ್ನುವ

ಹಿತೋಪದೇಶದ ವರೆಗೆ ಅಣ್ಣಪ್ಪಯ್ಯ ಸಂಜೀವಿಗೆ ಬುದ್ಧಿ ಹೇಳಿದ್ದರು ಅವಳಾದರೂ ತಂದೆ ಹೇಳಿದ ಮಾತುಗಳಿಗೆ 'ಹೂಂ' ಎನ್ನುತ್ತ ಇದ್ದಳು

ಮರುದಿನ ಬೆಳಗ್ಗೆ ಮೆಲ್ಲನೆ ಬೇಗ ಎದ್ದವರೇ ಅಳಿಯ ಕೊಟ್ಟ ನೋಟಿನ ಲಕೋಟೆಯನ್ನು ಉಚ್ಚಿ ನೋಟುಗಳನ್ನು ಎಣಿಸಿದರು ನಾಲ್ಕೈದು ಸಲ ಎಣಿಸಿದರೂ ಲೆಕ್ಕ ಹತ್ತಲಿಲ್ಲ ಒಮ್ಮೊಮ್ಮೆ ಎಣಿಸಿದಾಗ ಹತ್ತು ಲಂಕೆಯಿಂದಲೇ ಮೊಬಲಗು ಏರುತ್ತಿತ್ತು ಹೊರತಾಗಿ ಕಡಿಮೆಯಾಗುತ್ತಿರಲಿಲ್ಲ ಅದರಲ್ಲಿ ಒಂದೆರಡು ಅಗಲವಾದ ಹಸುರು ನೋಟುಗಳೂ ಇದ್ದವು ಅವುಗಳಿಗೆ 'ಹಸರು ನೋಟು'ಎಂದೇ ಅಣ್ಣಪ್ಪಯ್ಯನವರ ಭಾಷೆಯಲ್ಲಿ ಕರೆಯುತ್ತಾರೆ ವಿನಾ 'ನೂರರ ನೋಟು' ಎನ್ನುವುದಿಲ್ಲ ಕೊನೆಗೂ ಅವರಿಗೆ ಒಟ್ಟು ನೋಟುಗಳು ಎಷ್ಟು ಎಂದು ಎಣಿಸಲಿಕ್ಕೆ ಆಗಲಿಲ್ಲ ಯಾಕಂದರೆ ಅಳಿಯ—ಒಳಗಿನಿಂದ ಎದ್ದು ಬರುವ ಸದ್ದಾಗಿತ್ತು! ಅವನಾಗಿ ಇಷ್ಟು ರೂಪಾಯಿಗಳು ಇವೆ ಎಂದು ಹೇಳಿರಲಿಲ್ಲ, ಇವರಾಗಿ ಕೇಳಲೂ ಇಲ್ಲ

"ಸಾವಿರದ ಸಂಖೆಗೆ ಏನೂ ಕಡಿಮೆ ಇಲ್ಲ" ಎಂದು ಮನಸ್ಸಿನಲ್ಲೇ ಹಿಗ್ಗಿದರು ಆದರೂ ಅವರಿಗೆ ಸಂಶಯ ದೂರವಾಗಲಿಲ್ಲ ಫಕ್ಕನೆ ಎಲ್ಲಿಯಾದರೂ 'ನಾನು ಕೊಟ್ಟ ಹಣ ಕೊಡಿ' ಎಂದು ಕೇಳುತ್ತಾನೋ ಅಳಿಯ ಎಂದು ಮನಸ್ಸಿನಲ್ಲಿ ವ್ಯಥೆಪಡುತ್ತಾ ಇದ್ದರು

ಒಮ್ಮೆ ಆ ದುಗುಡ ನಿವಾರಿಸಲು ತಾವಾಗಿಯೇ ಕೇಳಿದರು "ನಿನಗೆ ಖರ್ಚಿಗೆ ಹಣ ಏನಾದರೂ ಬೇಕೋ ?"

"ಯಾತರ ಖರ್ಚು ?" ಎಂದನು ಅಳಿಯ

"ಅಂದರೆ ನನಗೆ ಎಲ್ಲ ಹಣ ಕೊಟ್ಟಿದ್ದಿ ನಿನಗೆ ಖರ್ಚಿಗೆ ಇಟ್ಟುಕೊಂಡಿದ್ದಿಯೋ ಇಲ್ಲವೋ—ಎಂದ ಕೇಳಿದೆ ಬೇಕೋ ಹೇಗೆ ಹೇಳು"

"ನನ್ನಲ್ಲಿ ನನಗೆ ಬೇಕಾಗುವಷ್ಟು ಇದೆ ಅದು ನಿಮಗೇ ಆಯಿತು ಇಲ್ಲಿಯ ವರೆಗೆ ಅವಳನ್ನು ಸಾಕಲಿಲ್ಲವೋ ?" ಎಂದು ಅಳಿಯ ಹೇಳುವಾಗ ಅಣ್ಣಪ್ಪಯ್ಯನವರಿಗೆ ಧೈರ್ಯ ಬಂತು ಆ ಹಣ ತನಗೇ ಆಯಿತು ಎಂದು ಮನಸ್ಸು ಪ್ರಫುಲ್ಲವಾಯಿತು ಅಂದಿನಿಂದ ಅಳಿಯನೊಡನೆ ಪಟ್ಟಾಂಗಕೊಚ್ಚಲಿಕ್ಕೆ ಪ್ರಾರಂಭಿಸಿದರು ಮಾಟ-ಮಂತ್ರ, ತತ್ವಜ್ಞಾನ, ಔಷಧ-ಎಣ್ಣೆ ಎಂದು ನೂರಾರು ವಿಷಯಗಳ ಮೇಲೆ ನಾರಾಯಣಯ್ಯನಿಂದ ಮಾಹಿತಿ ಪಡೆ

ದುಕೊಳ್ಳಲು ಅಣ್ಣಪ್ಪಯ್ಯ ಸಿದ್ಧರಾಗಿ ಕೂಡುತ್ತಿದ್ದರು

ಅವನಾದರೂ ಇವರು ಕೇಳಿದ ಪ್ರಶ್ನೆಗಳಿಗೆ ವಿವರವಾದ ಉತ್ತರಗಳನ್ನು ಕೊಡುತ್ತ ಇದ್ದ ಆದರೆ ಅವನು ಬಂದ ಮರುದಿವಸವೇ ಬೆಳಿಗ್ಗೆ "ನೀನು ಆ ಗಡ್ಡ ಯಾಕೆ ಅಷ್ಟು ಉದ್ದ ಬೆಳೆಸಿದ್ದಿ ?" ಎಂದು ಅಣ್ಣಪ್ಪಯ್ಯ ಕೇಳಿದಾಗ "ನಾನು ಇರುವ ಊರಲ್ಲಿ ಎಲ್ಲರೂ ಗಡ್ಡ ಬೆಳೆಸುತ್ತಾರೆ" ಎಂದು ಉಪಾಯ ವಾಗಿ ಉತ್ತರ ಕೊಟ್ಟಿದ್ದ

ಆಗ ಅವರಾದರೂ "ಈ ಊರಲ್ಲಿ ಹಾಗೆ ಗಡ್ಡ ಬಿಟ್ಟರೆ ಸನ್ಯಾಸಿ ಎನ್ನು ತ್ತಾರೆ ಅದನ್ನು ಮೊದಲು ಬೋಳಿಸು ಭಂಡಾರಿಯನ್ನು ಬರಹೇಳಲೇ?" ಎಂದು ಕೇಳಿದ್ದರು

ನಾರಾಯಣಯ್ಯನಾದರೂ ಊರಿಗೆ ಬಂದ ಹದಿನೈದು ದಿವಸಗಳಲ್ಲಿ ಗಡ್ಡ ಬೋಳಿಸಲೇ ಬೇಕಾಯಿತು ಯಾಕಂದರೆ ಅವನ ಮುದಿತಾಯಿಯ ಮರಣ ಕಾಲ ಸಮೀಪಿಸಿತ್ತಷ್ಟೆ ಅವಳ ಮುಖ ನೋಡುವುದಕ್ಕಾಗಿ ಅವನು ಊರಿಗೆ ಬಂದಿದ್ದ ಅವಳ ಅವಸಾನ ಕಾಲ ಸಮೀಪಿಸಿತೆಂದು ಅವನಿಗೆ ಗೊತ್ತಾಗಿತ್ತಂತೆ ಅವನು ಮಾವನ ಮನೆಗೆ ಬಂದ ಮರುದಿನವೇ ವೆಂಕ ಣ್ಣಯ್ಯ ಎಡಹಿತ್ತಲಿಗೆ ಓಡಿ ಬಂದಿದ್ದರು ಅವರು ಬಂದಾಗ ನಾರಾಯಣಯ್ಯ ಅಲ್ಲಿ ಇರಲಿಲ್ಲ ಅರ್ಥಾತ್ ಅವನು ಅವರ ಕಣ್ಣಿಗೆ ಬೀಳಲಿಲ್ಲ

"ಇಲ್ಲಿಗೆ 'ನನ್ನ' ಬಂದಿದ್ದಾನೆಯೇ?" ಎಂದು ಗಾಬರಿಯಿಂದ ಪ್ರಶ್ನಿಸಿ ದರು ಅವರು ಅಲ್ಲಿಗೆ ಬಾರದೆ ನಾರಾಯಣಯ್ಯ ಊರು ಬಿಟ್ಟು ಎಷ್ಟು ವರುಷಗಳಾಗಿದ್ದವೋ ಅಷ್ಟೇ ವರ್ಷಗಳಾಗಿದ್ದವು ಇವತ್ತು ತಾಯಿಯ ಅಗ್ರ ಹದ ಮೇರೆಗೆ ಅವರು ಅಲ್ಲಿಗೆ ಬರಬೇಕಾಯಿತು

"ಯಾಕೆ?" ಎಂದು ಅಣ್ಣಪ್ಪಯ್ಯ ಕೇಳಿದರು

"ಅವನು ಇಲ್ಲಿಗೆ ಬಂದಿದ್ದಾನೆಂದು ಸುದ್ದಿ ಬಂದಿದೆ"

"ಯಾರು ಹೇಳಿದರು ಆ ಸುದ್ದಿಯನ್ನು?"

"ನಮ್ಮ ಅಮ್ಮನಿಗೆ ಕನಸು ಬಿದ್ದಿತ್ತಂತೆ!"

"ಅವನಿಗೂ ಒಂದು ಕನಸಾಗಿತ್ತಂತೆ!"

"ಯಾರಿಗೆ?"

"ನಾರಾಯಣಯ್ಯನಿಗೆ"

"ಹೌದೇ! ಅವನು ಬಂದಿದ್ದಾನೆಯೇ? ರಾಮ ರಾಮಾ"

"ನಿನ್ನೆ ಬಂದಿದ್ದಾನೆ"

"ಅವನಿಗೆ ಏನೆಂದು ಕನಸು ಬಿತ್ತಂತೆ?"

"'ನಿನ್ನ ತಾಯಿಯನ್ನು ನೋಡುವ ಇಚ್ಛೆ ಇದ್ದರೆ ಊರಿಗೆ ಹೋಗು' ಎಂದು ಕನಸ್ಸಿನಲ್ಲಿ ಯಾರೋ ಹೇಳಿದರಂತೆ ಅಂದೇ ಬೆಳಿಗ್ಗೆ ಎದ್ದು ಊರಿಗೆ ಹೊರಟನಂತೆ ನಿಮ್ಮ ತಾಯಿಯೂ ಪುಣ್ಯವಂತಳಯ್ಯಾ"

"ನಮ್ಮ 'ನನ್ನ'ನೂ ಪುಣ್ಯವಂತನೆಂಬುದರಲ್ಲಿ ಸಂಶಯವಿಲ್ಲ"

"ಅವನ ಪುಣ್ಯವಂತೂ ಬಹಳವಿದೆ ಬಿಡಿ!" ಎಂದು ಅಣ್ಣಪ್ಪಯ್ಯ ಒಂದು ಕೊಂಕು ಮಾತು ಹಾರಿಸಿದರು ಅಷ್ಟರಲ್ಲಿ ನಾರಾಯಣಯ್ಯನೂ ಒಳಗಿನಿಂದ ತನ್ನ ಜಪ ತಪಗಳನ್ನು ಮುಗಿಸಿ ಹೊರಗೆ ಬಂದು ವೆಂಕಣ್ಣಯ್ಯನವರಿಗೆ ನಮಸ್ಕಾರ ಮಾಡಿದ

ಆಮೇಲೆ ಅವರು "ನಾನು ಬಂದದ್ದು ನಿನ್ನನ್ನು ಕರೆದೊಯ್ಯಲಿಕ್ಕೆ" ಎಂದು ಹೇಳಿ ಅವನನ್ನು ಕರೆದುಕೊಂಡು ನಡೆದರು

"ಸಾಯುವ ಮೊದಲು ನಾನು ಒಮ್ಮೆ ಆ ಮುದುಕಿಯ ಮುಖ ನೋಡಿ ಪುಣ್ಯ ಕಟ್ಟಿಕೊಳ್ಳುತ್ತೇನೆ" ಎಂದು ಅಣ್ಣಪ್ಪಯ್ಯನವರೂ 'ಲಡ್ಡಮುಂಡು' ಉಟ್ಟು ಕೊಂಡು ತಯಾರಾಗಿ ಬೀಗರ ಮನೆಯತ್ತ ನಡೆದರು ಹೋಗುವಾಗ ಅರ್ಧ ಗೊನೆ ದೇವಬಾಳೆಯ ಹಣ್ಣುಗಳನ್ನೂ ಒಂದು ರಾತ್ಲು ಸಕ್ಕರೆಯನ್ನೂ ಒಯ್ಯು ಲಿಕ್ಕ ಮರೆಯಲಿಲ್ಲ ನಾರಾಯಣಯ್ಯ ಮತ್ತು ವೆಂಕಣ್ಣಯ್ಯ ಫಲಮಾರಿಗೆ ತಲಪುವದರೊಳಗೆ ಅಣ್ಣಪ್ಪಯ್ಯನವರೂ ಅವರ ಹಿಂದಿನಿಂದ ಬಂದು ಸೇರಿ ಯಾಯಿತು

ಇತ್ತ ಸಂಜೀವಿಗೂ ತನ್ನ ಅತ್ತೆಯನ್ನು ನೋಡಬೇಕೆಂಬ ಬಯಕೆ ಇತ್ತು ಇಲ್ಲಿಯ ವರೆಗೆ ಜೀವ ಹಿಡಿದುಕೊಂಡು ಅವಳು ತನ್ನ ಮಗನನ್ನು ನೋಡಲಿಕ್ಕೇ ಬದುಕಿದ್ದಳು ಹೊರತು ಆಯುಷ್ಯದ ಬಲದಿಂದಲ್ಲ ಎಂದು ಸಂಜೀವಿ ಎಣಿಸಿದಳು ಮಗನನ್ನು ನೋಡಿ ಬಹಳ ದಿನ ಬದುಕುವುದಿಲ್ಲ ಅವಳು ಫಕ್ಕನೇ ಮಗನನ್ನು ನೋಡು ನೋಡುತ್ತಲೇ ಪ್ರಾಣ ಬಿಟ್ಟರೂ ಬಿಡಬಹುದೆಂಬ ದುಗಡವೂ ಸಂಜೀವಿಗೆ ಬಂತು ತನಗೆ ಅವಳ ಮುಖ ನೋಡಲು ಸಿಗುತ್ತದೋ ಇಲ್ಲವೋ ಎಂದು ಚಿಂತಿಸಿದಳು ಗಂಡಸರೆಲ್ಲ

ಹೋಗುವಾಗ ತನ್ನನ್ನು ಕೇಳದೆ ಹೋದರಲ್ಲ ಎಂದು ಮರುಗಿದಳು

ಫಲಮಾರಿನ ಬೆಟ್ಟಗಳ ಹೊಟ್ಟೆಯಿಂದ ಕೆಳಗೆ ಇಳದು ಹೋದಂತೆ ನಾರಾಯಣಯ್ಯನಿಗೆ ನಂದನವನಕ್ಕ ನಡೆದಂತೆ ಭಾಸವಾಯಿತು ಮುಗಿಲೆತ್ತರ ಏರಿದ ಮರಗಳೂ ವಿನಯದಿಂದ ಬಾಗಿ ಗಾಳಿಯಲ್ಲಿ ಆಟವಾಡುತ್ತಿದ್ದರೂ ಅವುಗಳು ತನ್ನನ್ನೇ ಆ ರೀತಿ ಬರಮಾಡಿಕೊಳ್ಳುತ್ತ ತಲೆಬಾಗಿ ಸ್ವಾಗತಿಸುತ್ತಿವೆಯೆಂದು ಆತ ಎಣಿಸಿಕೊಂಡ ಎಲ್ಲಿ ನೋಡಿದರೂ ಹಸಿರು ಹಾಸಿತ್ತು ತೆಂಗು ಕೌಂಗುಗಳಂತೂ ಭಾರವಾದ ಕೊರಳುಗಳಿಂದ ಮಣಿದು ಮಣಿದು ನೃತ್ಯವಾಡುತ್ತಿದ್ದವು ದನಕರುಗಳು ಬಾಲ ಮೇಲೆ ಮಾಡಿ ಆನಂದದಿಂದ ನೆಗೆಯುತ್ತಿದ್ದವು

ಮನೆಯನ್ನು ಸಮೀಪಿಸಿದಾಗ ಅಲ್ಲಿಯ ತಾವಿನಲ್ಲಿ ಒಂದು ಮುದಿ ದನವು ತನ್ನ ಕಿರಿಯ ಕರುವನ್ನು ಪ್ರೀತಿಯಿಂದ ನೆಕ್ಕಿ ನೆಕ್ಕಿ ಅದರ ಮೈಯನ್ನು ಎಣ್ಣೆ ಹಚ್ಚಿ ಓರಣವಾಗಿ ಬಾಚಿದಂತೆ ಮಾಡಿತ್ತು ದನದ ಹೆಸರು 'ಶಂಕರಿ' ಎಂದು. ಅದನ್ನು ನೋಡಿದೊಡನೆ ನಾರಾಯಣಯ್ಯನ ಕಲ್ಪನೆಯ ಕೊಕ್ಕು ಕಳೆದು ಹೋದ ಕಾಲದ ಸವಿ ನೆನಪಿನ ಮಧುಪಾತ್ರದಲ್ಲಿ ಮುಳುಗಿತು

"ಶಂಕರಿ ಇನ್ನೂ ಇದ್ದಾಳೆಯೇ ಅಣ್ಣಾ ?" ಎಂದು ನಗುತ್ತ ನಾರಾಯಣಯ್ಯ ಕೇಳಿದ

"ಹೂಂ ಇದ್ದಾಳಪ್ಪಾ! ಅವಳಿಗೂ ನಮ್ಮ ಅಮ್ಮನ ಹಾಗೆ ದೇವರು ಆಯುಷ್ಯ ಬರೆಯುವಾಗ ತಪ್ಪಿರಬೇಕು ನಾಲ್ಕೈದು ತಿಂಗಳಾಯಿತು— ನೋಡು ಅವಳು ಕರು ಹಾಕಿ!" ಎಂದು ಆಶ್ಚರ್ಯದಿಂದ ಹೇಳಿದರು ವೆಂಕಣ್ಣಯ್ಯ

"ಅವಳದೆಯೋ ಆ ಕರು!" ಎಂದು ಅತ್ಯಾಶ್ಚರ್ಯ ಆನಂದಗಳಿಂದ ಕೇಳಿದ ನಾರಾಯಣಯ್ಯ

"ಶಂಕರೀ, ಫೇ—ಫೇ" ಎಂದು ಕರೆದ ಆ ಮುದಿ ದನಕ್ಕೂ ಹಿಂದಿನ ತನ್ನ ಒಡೆಯನ ಧ್ವನಿಯ ಪರಿಚಯವಾಯಿತು ಕಿವಿ ಅರಳಿಸಿ ನಾರಾಯಣಯ್ಯನತ್ತ ನೋಡಿತು

"ಫೇ, ಫೇ" ಎಂದು ಮತ್ತೊಮ್ಮೆ ಕರೆದ

ಆಗ ಕರುವನ್ನು ಕರೆದುಕೊಂಡೇ ಶಂಕರಿ ನಾರಾಯಣಯ್ಯನನ್ನು ಹಿಂಬಾ

ಲಿಸಿದಳು ತನ್ನ ಚೀಲದಿಂದ ಎರಡು ಬಾಳೆಯ ಹಣ್ಣುಗಳನ್ನು ಹೊರಗೆ ತೆಗೆದು—ತಾಯಿಗೂ ಅದರ ಕರುವಿಗೂ ಕೊಟ್ಟ ನಾರಾಯಣಯ್ಯನ 'ಬಾವಾಜಿಯ ರೂಪ' ನೋಡಿ ಕರು ಸ್ವಲ್ಪ ಹೆದರಿದರೂ ತಾಯಿ ಹತ್ತಿರ ವಿರುವುದರಿಂದ ಧೈರ್ಯ ತಾಳಿಕೊಂಡು ಬಾಳೆಹಣ್ಣು ನುಂಗಿತು

ನಾರಾಯಣಯ್ಯನ ದೃಷ್ಟಿ ಹೇಗೋ ಏನೋ ಆ ಮುದಿ ಆಕಳದ ಕಣ್ಣುಗಳತ್ತ ಹೋಯಿತು "ಅಣ್ಣಾ, ದನ ಅಳುತ್ತಿದೆಯಲ್ಲಾ!" ಎಂದು ಕೇಳಿದ.

ವೆಂಕಣ್ಣಯ್ಯನವರೂ ಮುಖ ಸಣ್ಣದು ಮಾಡಿ "ಹೌದಾ ಶಂಕರೀ?" ಎನ್ನುತ್ತಾ ಅದರ ಬೆನ್ನ ಮೇಲೆ ಕೈ ಆಡಿಸಿದರು ಆಗ ಅದು ಅಲ್ಲಿಂದ ಮೆಲ್ಲಗೆ ಹೋಯಿತು

"ಮನೆಯ ಮುದುಕಿ ಹೋಗುತ್ತಾಳೆಂದು ಅವಳಿಗೂ ಗೊತ್ತಾಗಿರ ಬಹುದು! ದನಗಳಿಗೆ ಬಾಯಿ ಬಾರದಿದ್ದರೂ ಎಲ್ಲ ಗೊತ್ತಾಗುತ್ತದೆ" ಎಂದು ಅಣ್ಣಪ್ಪಯ್ಯ ಹೇಳುತ್ತ ಮನೆಯತ್ತ ನಡೆದರು ಅವರ ಹಿಂದೆ ಉಳಿದವ ರಿಬ್ಬರೂ ನಡೆದರು ಆದರೆ ಅವರೆಲ್ಲರೂ ಮನೆಗೆ ಮುಟ್ಟುವ ತನಕ ಆವರ ಹಿಂದಿನಿಂದ ಬಂದ ಹಳ್ಳಿಯ ನಾಲ್ಕೆಂಟು ಜನ ವಯೋವೃದ್ಧರನ್ನು ನೋಡಿರ ಲಿಲ್ಲ. ಒಬ್ಬ ಮುದುಕನಂತೂ ಕೈಯಲ್ಲಿ, ಅದೇ ತೆಗೆದ ಎರಡು ಸಿಯಾಳ ಹಿಡಿದುಕೊಂಡೇ ಬಂದಿದ್ದ ನಾರಾಯಣಯ್ಯ ಕಾವಿಬಟ್ಟೆ ಉಟ್ಟುಕೊಂಡು ಸನ್ಯಾಸಿಯಾಗಿದ್ದರೂ ಅವನ ಗುರ್ತು ಅವರಿಗೆ ಸಿಕ್ಕಿತ್ತು

ಸಿಯಾಳ ತಂದ ಮುದುಕನಂತು "ನನ್ನಿ ಭಟ್ಟರು" ಅಂದರೆ ದೇವ ರೆಂದೇ ಭಾವಿಸಿದ್ದ ಅವನ ಮಡದಿ ಸತ್ತವಳು, ಅವರ ಔಷಧದಿಂದಲೇ ಜೀವಂತ ಎದ್ದಿದ್ದಳಂತೆ ಅದೂ ಒಂದು ಪೈ ಪಡೆಯದೆ ಧರ್ಮಾರ್ಥ ಔಷಧ ಕೊಟ್ಟಿದ್ದರಂತೆ 'ಇಷ್ಟು ವರುಷಗಳ ತನಕ ಎಲ್ಲಿ ಹೋಗಿದ್ದರೋ ಏನೋ' ಎಂದು ಮಾತಾಡಿಕೊಳ್ಳುತ್ತ ನಾರಾಯಣಯ್ಯನನ್ನು ಭೇಟಿಯಾಗಲು ಅವರೆಲ್ಲ ಬಂದರು

ಅವರಲ್ಲಿ ಕೆಲವರಿಗೆ ಅವನು ನಾರಾಯಣಯ್ಯ ಹೌದೋ ಅಲ್ಲವೋ ಎನ್ನುವ ಸಂಶಯವಿತ್ತು

ಅವರೆಂದರು "ಅವರು ಯಾರೋ ಸನ್ಯಾಸಿಗಳಿರಬಹುದು ಧನಿಯರ

ತಾಯಿಗೆ ಔಷಧ ಕೊಡಲು ಬಂದಿರಬಹುದು " ಎಂದು

ಅದಕ್ಕೆ ಆ ಸಿಯಾಳ ಹಿಡಿದುಕೊಂಡ ಮುದುಕ "ನಿಮಗೆಲ್ಲ ಏನು ಗೊತ್ತುಂಟು ಮೂರ್ಖರೇ ? ಅವರು ನಮ್ಮ ನನ್ನಿಭಟ್ಟರೇ ಅವರ ನಡಿಗೆ ಅವರ ನಿಲುವು, ಅವರ ಗಾಂಭೀರ್ಯ, ಅವರ ಕಲೆ—ಎಲ್ಲ ನೋಡುವಾಗ ತಿಳಿಯುವುದಿಲ್ಲವೇ ? " ಎಂದು ಅಕ್ಕಪಕ್ಕದ ಒಕ್ಕಲಿನವರೊಂದಿಗೆ ಕೂಡಿಕೊಂಡು ಧನಿಗಳ ಮನೆಗೆ ಹೋಗಿದ್ದ

ನಾರಾಯಣಯ್ಯ ಮನೆಯ ಮೆಟ್ಟಲು ಹತ್ತಿ ಚಾವಡಿಯನ್ನು ಏರಿದ ಅಲ್ಲಿಯೇ ನೆಲಕ್ಕೆ ಸಮನಾಗಿ ಅಂಟಿಕೊಂಡು ಮಲಗಿದ ಮುದಿ ತಾಯಿಯನ್ನು ನೋಡಿದ ಮಗ ಬಂದ ಸುದ್ದಿಯನ್ನು ಮೊದಲೇ ಮುದುಕಿಗೆ ರಂಗಿ ತಿಳಿಸಿದ್ದಳು ಕಾರಣ ಅವಳ ಕಣ್ಣುಗಳು ಅರಳಿದ್ದವು ಆ ಜೀವದಲ್ಲಿ ಆ ನಯನಗಳಿಗೆ ಮಾತ್ರ ಜೀವವಿತ್ತು ಅವು ಲಕಲಕನೆ ಅತ್ತಿತ್ತ ಚಲಿಸಿದವು ! ತಾಯಿಯ ಬಳಿಯಲ್ಲಿ ಹೋಗಿ ನಾರಾಯಣಯ್ಯ ಕುಳಿತುಕೊಂಡ

" ಬಂದೆಯಾ ಮಗೂ " ಎಂದು ಮುದುಕಿ ಏಳಲು ಪ್ರಯತ್ನಿಸಿದಳು

" ಬೇಡ " ಎಂದು ನಾರಾಯಣಯ್ಯ ಸಮಾಧಾನ ಪಡಿಸಿದ ಅವಳ ಕಾಲಿಗೆ ತಲೆ ತಾಗಿಸಿದ

" ಅಂತೂ ದೇವರು ನಿನ್ನನ್ನು ನನ್ನ ಬಳಿಗೆ ಕಳುಹಿಸಿದನೆನ್ನು " ಎಂದು ಅಸ್ಪಷ್ಟವಾಗಿ ಹೇಳಿದಳು ಆ ಮುದುಕಿ ಅವನ ಮೈಮೇಲೆ ಕೈಯಾಡಿಸಿದಳು—ಮಲಿಗಿದಲ್ಲಿಂದಲೇ ಅವಳ ಕೈಗೆ ಬಿರುಸಾದ ನೊಳ ಉದ್ದದ ಗಡ್ಡಮೀಸೆಗಳು ತಗಲಿದವು ಮುದುಕಿಗೆ ಏನು ಅನಿಸಿತೋ ಏನೋ ! ಉಳಿದ ಜನರೆಲ್ಲ ಅವಳೇನು ಹೇಳುತ್ತಾಳೆ ಎಂದು ಕೇಳಲು ಮಂತ್ರಮುಗ್ಧರಾದಂತೆ ಕೂತಿದ್ದರು

" ನನ್ನೀ " ಎಂದಳು

ಅಂಥ ಪ್ರೀತಿಯ—ವಾತ್ಸಲ್ಯದಿಂದ ತುಂಬಿದ ಶಬ್ದ ನಾರಾಯಣಯ್ಯ ಕೇಳಿ ಎಷ್ಟು ವರುಷಗಳು ಗತಿಸಿದ್ದವೋ. ಅವನ ಮನಸ್ಸು ಕರಗಿತು ಕಲ್ಪನೆ ಹಿಂದೆ—ಹಿಂದೆ ಹೋಯಿತು

" ಓ " ಎನ್ನಲು ಎರಡು ಮೂರು ಸಲ ಪ್ರಯತ್ನ ಪಟ್ಟು—ಆಗದೆ, ಅಮ್ಮಾ " ಎಂದನು

" ಮುಖದಲ್ಲಿ ಅದೆಲ್ಲ ಏನು ? "

" ಅತ್ತಲಾಗೆ—ನಾನಿದ್ದ ಊರಲ್ಲಿ ಹಾಗೆಯೇ ಇರಬೇಕು ಅಮ್ಮಾ"

" ಇರಲಿ ಮಗೂ ಹಾಗೇ ಬಂದೆಯಾ ? "

" ನಿನ್ನ ಮಾತು ಅರ್ಥವಾಗದು "

" ಇವತ್ತು ಬಂದೆಯಾ ? "

" ನಿನ್ನೆ ಬಂದೆ "

" ಹೂಂ "

" ಯಾಕೆ ? "

" ಆ ಮುಖ ಭಂಡಾರಿಯ ಕೈಗೆ ಕೊಟ್ಟು—ಗಡ್ಡ ಕೆತ್ತಿಸಿಕೊಂಡು ಇವತ್ತಾದರೂ ಬಾ ಇನ್ನಾದರೂ "

" ಆದೀತು ಅಮ್ಮಾ"

" ಇನ್ನು ಹತ್ತಾರು ದಿನಗಳ ಮೇಲೆ ತೆಗೆಯಿಸುವುದಕ್ಕಿಂತ ಇಂದೇ ತೆಗಿಸಿ ಬಿಡು "

" ಹೂಂ ಅಮ್ಮಾ"

" ನಾನೇನು ಬಹಳ ದಿನ ಉಳಿಯುವುದಿಲ್ಲ ನಿನ್ನ ಮುಖವನ್ನು ಇನ್ನೊಮ್ಮೆ ಗಡ್ಡ ತೆಗೆದಾಗ ಬಾಚುತ್ತೇನೆ— ಹೋಗು ಇವತ್ತೇ ತೆಗೆಸಿಕೊಂಡು ಬಾ "

" ಬರುತ್ತೇನಮ್ಮಾ"

" ನೀನೊಬ್ಬನೇ ಬಂದಿಯಾ ? "

" ಇಲ್ಲ ಮಾವನವರೂ ಬಂದಿದ್ದಾರೆ ಅಣ್ಣನೂ ಅಲ್ಲಿ ಕೂತಿದ್ದಾನೆ ಸ್ವಲ್ಪ ಒಂದು ಬಾಳೆಹಣ್ಣು ತಿನ್ನುತ್ತೀಯಾ ?" ಎಂದು ನಾರಾಯಣಯ್ಯ ಅವಳ ಬಾಯಿಗೆ ಬಾಳೆಹಣ್ಣು ಸುಲಿದು-ಹಿಚುಕಿ ಹಾಕಿದ ಮೇಲಷ್ಟು ಸಕ್ಕರೆಯನ್ನು ಹಾಕಿದ ಮಲಗಿದಲ್ಲಿಂದಲೇ ಮಗ ಕೊಟ್ಟಿದ್ದನ್ನೆಲ್ಲ ತಿಂದಳು

ಅಣ್ಣಪ್ಪಯ್ಯನವರೂ ಆಗ ಹತ್ತಿರ ಬಂದು "ನಾನಾರು" ಎಂದು ಕೇಳಿದರು

" ನಿನ್ನ ಗುರುತು ಸಿಗುವುದಿಲ್ಲವೆಂದು ತಿಳಿದಿಯಾ ? " ಎಂದು ಮುದುಕಿ

ಅಣ್ಣಪ್ಪಯ್ಯನವರನ್ನು ಗುರುತಿಸಿದಳು ಅವರು ಕೊಟ್ಟ ಒಂದು ಅರ್ಧ ಬಾಳೆಯ ಹಣ್ಣನ್ನೂ ಸ್ವಲ್ಪ ಸಕ್ಕರಿಯನ್ನೂ ಸ್ವೀಕರಿಸಿತು—ಅವಳ ಮುದಿ ಬಾಯಿ

ಎಲ್ಲರೂ ಸ್ವಲ್ಪ ಹೊತ್ತು ಸುಮ್ಮನೆ ಕೂತಿದ್ದರು ಆಗ ಮುದುಕರು ಎಲ್ಲ ಬಂದು ಒಬ್ಬೊಬ್ಬರಾಗಿ ನಾರಾಯಣಯ್ಯನ ಕಾಲಿಗೆ ಬಿದ್ದು "ಸ್ವಾಮೀ" ಎಂದು ಹಿಂದೆ ಹೋಗಿ ಕೂತರು

ಕೊನೆಗೆ ಆ ಸಿಯಾಳ ಹಿಡಿದುಕೊಂಡು ಬಂದವನು—ಮತ್ತೊಂದು ಸಿಯಾಳ ಮನೆಯಿಂದ ತರಿಸಿ, ಮೂವರಿಗೂ ಕೊಟ್ಟನು.

"ಸ್ವಾಮೀ, ಸುಖವಾಗಿ ಇದ್ದಿರಾ ? ನೀವು ಇಲ್ಲಿಯ ವರೆಗೆ ಎಲ್ಲಿದ್ದಿರಿ? ನಿಮ್ಮ ದಯದಿಂದಲೇ ನನ್ನ ಹೆಂಡತಿ ಉಳಿದಳು ನೀವು ನಿಜಕ್ಕೂ ದೇವರು. ನಿಮ್ಮ ಋಣ ನಾನು ಹೇಗೆ ತೀರಿಸಲಿ!" ಎಂದು ಆತ ಬಾಯಿ ತುಂಬ ಮಾತಾಡಿದ

ನಾರಾಯಣಯ್ಯನೂ ಅವರೆಲ್ಲರನ್ನು "ಸುಖವೇ ಕೂಕ್ರಾ, ಧೂಮಾ, ಕೋಟೀ, ಪಾಂಡಿ, ಲಕ್ಕಣ್ಣಾ" ಎಂದು ಅವರ ಹೆಸರು ಕರೆದು ನಗುತ್ತ ಗಂಭೀರವದನದಿಂದ ಕೇಳಿದ ಆ ಮೇಲೆ ತನ್ನ ಪಾಲಿನ ಎಳನೀರನ್ನು ತಾಯಿಗೆ ಚಮ್ಚದಿಂದ ಕುಡಿಸಿದ

"ತಾಯಿಯ ಮೇಲೆ ಎಷ್ಟು ಪ್ರೀತಿಯಪ್ಪಾ ನಿಮ್ಮದು ದೇವರೇ!" ಎಂದು ಒಬ್ಬ ಮುದುಕ ಉದ್ಗಾರ ತೆಗೆದ

ಅವರೆಲ್ಲ ಮಾತಾಡುವುದನ್ನು ಕೇಳಿ ಮುದುಕಿ ಮಲಗಿದಲ್ಲಿಂದಲೇ "ನನ್ನೀ ಯಾರು ಅಷ್ಟು ಜನ ?" ಎಂದು ಕೇಳಿದಳು ಅದಕ್ಕೆ ನಾರಾಯಣಯ್ಯ ಅವರೆಲ್ಲರ ಹೆಸರು ಹೇಳಿದ ಮುದುಕಿ......ಏನೋ ಆಲೋಚನೆ ಮಾಡುತ್ತ, "ನನ್ನೀ" ಎಂದಳು

"ಯಾಕೆ?" ಎಂದನು ನಾರಾಯಣಯ್ಯ

"ನಕ್ರ ಇದ್ದಾನೋ"

"ಹೌದು ಇದ್ದಾನೆ"

"ಅವನ ಮಗಳಿಗೆ ಪಿಶಾಚಿ ಬಿಟ್ಟಿದೆಯೋ ಕೇಳು"

"ಹೌದಾ ನಕ್ರಾ ? ಅಮ್ಮ ಏನೋ ಕೇಳುತ್ತಾಳೆ ನೋಡು"

"ಏನಂತೆ ?" ಎಂದನು ನಕ್ರ

"ನಿನ್ನ ಮಗಳಿಗೆ ಹುಶಾರಿಲ್ಲವೋ ?"

"ಇಲ್ಲ ಸ್ವಾಮಿ"

"ಈಗ ಕಡಿಮೆ ಇಲ್ಲವೋ ?"

"ಅವಳ ಆಸ ಬಿಟ್ಟ ಹಾಗೆಯೇ!" ಎಂದು ನಕ್ರ ಮುಖ ಸಪ್ಪಗೆ ಮಾಡಿ ಹೇಳಿದ

"ಹೀಗೆಯೋ!" ಎಂದನು ನಾರಾಯಣಯ್ಯ

"ಕಡಿಮೆ ಇಲ್ಲವಂತೆಯೋ?" ಎಂದು ಮುದುಕಿ ಮಗನಿಗೆ ಕೇಳಿದಳು

"ಇಲ್ಲವಂತೆ" ಎಂದನು ನಾರಾಯಣಯ್ಯ

"ಮಗೂ, ಅವಳಿಗೆ ಏನಾದರೊಂದು ಮಂತ್ರ ಮಾಡಿ—ಕೊಟ್ಟು ಬಿಡು ನಕ್ರ ಒಯ್ಯಲಿ ಪಾಪ ಬಹಳ ದಿವಸದಿಂದ ಪಿಶಾಚಿ ಹಿಡಿದು ಹುಡುಗಿ ಸಾಯಲಿಕ್ಕೆ ತಯಾರಾಗಿದೆ ಕೊಡುತ್ತೀಯಾ ?" ಎಂದು ಮುದುಕಿ ಮಗನಿಗೆ ಕೇಳಿದಳು ತಾಯಿಯ ಮಾತನ್ನು ನಾರಾಯಣಯ್ಯ ಮೀರಲಿಲ್ಲ

"ನಕ್ರಾ" ಎಂದು ಕರೆದ ನಾರಾಯಣಯ್ಯ

"ಓ" ಎಂದು ನಕ್ರ ಅವರತ್ತ ನೋಡಿದ

ಆಗ ನಾರಾಯಣಯ್ಯ ಕಿಸೆಯೊಳಗಿಂದ ಯಾವುದೋ ಸೊಪ್ಪು ತೆಗೆದು ಸ್ವಲ್ಪ ಹೊತ್ತು ತಾಯಿಯ ಹತ್ತಿರವೇ ಕೂತು, ಕಣ್ಣು ಮುಚ್ಚಿ ಕಣ್ಣು ತೆರೆದು, "ಇದು ಔಷಧ ನಿನ್ನ ಮಗಳ ಹೊಟ್ಟೆಗೆ ಐದು ಸಲ ಕೊಡು ಆ ಮೇಲೆ ಅದರಲ್ಲಿಯ ಸ್ವಲ್ಪವನ್ನು ಒಂದು ಬೆಳ್ಳಿಯ ಉರುಕಿನಲ್ಲಿ ಹಾಕಿ . ಅವಳ ಕೊರಳಿಗೆ ಕಟ್ಟಿ ಬಿಡು ಇದು ನಾನಲ್ಲ ನನ್ನ ಗುರುಹಿರಿಯರು ಕೊಟ್ಟದ್ದು" ಎಂದು ತಟ್ಟನೆ ನಕ್ರನ ಕೈಗೆ ಔಷಧ ಕೊಟ್ಟ

"ಇದು 'ಸಂಜೀವಿನಿ' ದೇವರೇ" ಎಂದು ನಕ್ರ ಪ್ರಫುಲ್ಲನಾಗಿ ಭಯ ಭಕ್ತಿಯಿಂದ ಔಷಧ ಪಡೆದುಕೊಂಡು ಮನೆಗೆ ನಡೆದ ಅವನ ಹಿಂದೆಯೇ ಉಳಿದ ಮುದುಕರೂ ನಡೆದರು

ಹೋಗುವ ಮುಂಚೆ ಅವರೆಲ್ಲ "ನೀವಿನ್ನು ಈ ಊರು ಬಿಡಬಾರದು" ಎಂದು ಹೇಳಿ ಹೋಗಿದ್ದರು—ನಾರಾಯಣಯ್ಯನಿಗೆ ಮನೆಗೆ ಹೋಗು

ವಾಗ ದಾರಿಯಲ್ಲಿ ನಾರಾಯಣಯ್ಯನನ್ನು ಹೊಗಳಿದಷ್ಟೂ ಅವರಿಗೆ ಸಾಲುತ್ತಿರಲಿಲ್ಲ

"ಅವರು ಕೈ ಎತ್ತಿ ಮಣ್ಣು ಕೊಟ್ಟರೂ ಔಷಧವಾಗುತ್ತದೆ ಅವರ ಕೈ ಗುಣವೇ ಅಂಥದ್ದು" ಎಂದು ಮನಸ್ಸಿಗೆ ಸಾಕೆನಿಸುವಷ್ಟು ಮಾತಾಡಿಕೊಂಡರು

ಅವರೆಲ್ಲ ಹೋದ ಮೇಲೆ ಪುನಃ ಮುದುಕಿ "ನನ್ನೀ" ಎಂದು ಕರೆದಳು

"ನೀನೊಬ್ಬನೇ ಬಂದಿಯಾ ?" ಎಂದೂ ಕೇಳಿದಳು

"ಹೌದು" ಎಂದನು ನಾರಾಯಣಯ್ಯ

"ಸಂಜೀವಿ ?"

"ಅವಳು ಬಂದಿಲ್ಲ"

"ಆ ಮಗುವನ್ನು ನೋಡಿ ಸಾಯಬೇಕೆಂಬ ಆಸೆ"

"ಆಯಿತು ಅಮ್ಮಾ—ಅವಳನ್ನೂ ಕರೆದು ತರುತ್ತೇನೆ" ಎಂದು ನಾರಾಯಣಯ್ಯ ಅಂದು ಫಲಮಾರಿನಿಂದ ಮಾವನೊಡನೆ ಎಡಹಿತ್ತಲಿಗೆ ಬಂದ ಅಣ್ಣನ ಮನೆಯಲ್ಲಿ ಊಟಕ್ಕೂ ಕೂಡಲಿಲ್ಲ. ವೆಂಕಣ್ಣಯ್ಯ ಒತ್ತಾಯಪಡಿಸಿದರೇನೋ ಹೌದು ಆದರೆ ರಂಗಿ ಮಾತ್ರ ತುಟಿ ಬಿಚ್ಚಲಿಲ್ಲ ಅವರೆಲ್ಲ ಹೋದದ್ದು ನೋಡಿ ಅವಳು ಅಡುಗೆ ಮನೆ ಸೇರಿದ್ದಳು ಅಂತೇ ಎಲ್ಲರೂ ಬಂದ ಹಾಗೆ ಹಿಂದೆ ತಿರುಗಿ ಹೋಗುವ ತನಕ ಅವಳು ಹೊರಗೆ ಮುಖ ತೋರಿಸಲಿಲ್ಲ

ಮರುದಿನವೇ ನಾರಾಯಣಯ್ಯ ತನ್ನ ಗಡ್ಡ ಮೀಸೆಗಳನ್ನು ಕತ್ತರಿಸಿ ಚೆಲ್ಲಿದ ಕಾವಿ ಬಟ್ಟೆಯನ್ನು ಕಟ್ಟಿ ಇಟ್ಟ ಸಾದಾ ಅರಿವೆಗಳನ್ನು ತೊಟ್ಟುಕೊಂಡ ಸಂಜೀವಿಯನ್ನು ಕರೆದುಕೊಂಡು ಪುನಃ ಫಲಮಾರಿಗೆ ಹೋದ ತಾಯಿಗೆ ತನ್ನ ಪತ್ನಿಯನ್ನು ತೋರಿಸಿದ ಸಂಜೀವಿ ಹೋಗುವಾಗ ಏನೋ ಸಿಹಿ ತಿನಸು ಮಾಡಿ ಒಯ್ದಿದ್ದಳು ಅದನ್ನು ಮುದುಕಿ 'ರುಚಿಯಾಗಿದೆ' ಎನ್ನುತ್ತ ತಿಂದಳು ಅಂದೇ ಅವಳ ಪ್ರಾಣಪಕ್ಷಿಯೂ ಎಲ್ಲರ ಸಮಕ್ಷಮದಲ್ಲಿ ಹಾರಿಹೋಯಿತು ತಾಯಿಯ ಕ್ರಿಯಾದಿಗಳು ಮುಗಿಯುವ ತನಕ ನಾರಾಯಣಯ್ಯ ಫಲಮಾರಲ್ಲೇ ಇದ್ದ. ಆದರೆ ಸಂಜೀವಿಯನ್ನು ಮಾತ್ರ ಅಣ್ಣಪ್ಪಯ್ಯ ಕರೆದುಕೊಂಡು ಹೋಗಿದ್ದರು. ನಾರಾಯಣಯ್ಯನಾದರೂ ಅಣ್ಣನ

ಮನೆಯಲ್ಲಿ ತಯಾರಾದ ತಿನಸುಗಳನ್ನು ತಿನ್ನುವಾಗ ಜಾಗರೂಕನಾಗಿದ್ದ ಹೆಚ್ಚಾಗಿ ಎಳನೀರುಗಳನ್ನೇ ಸ್ವೀಕರಿಸುತ್ತಿದ್ದ ಬಾಳೆಹಣ್ಣುಗಳಿಗೂ ಅಲ್ಲಿ ಬರಗಾಲವಿರಲಿಲ್ಲ ಹಲವಾರು ಜನರು ನಾರಾಯಣಯ್ಯನ ಭೇಟಿಗೆ ಬಂದು ಹೋಗುತ್ತಿದ್ದರು ಆದರೆ ಅವನು ತಾಯಿಯ ಕ್ರಿಯಾದಿಗಳು ಮುಗಿದ ದಿನವೇ ಎಡಹಿತ್ತಲಿಗೆ ಹಿಂತಿರುಗಿದ

ವೆಂಕಣ್ಣಯ್ಯ "ಇಲ್ಲಿಯೇ ಇದ್ದು ಬಿಡು" ಎಂದರೂ ಕೇಳಲಿಲ್ಲ

ಇತ್ತ ಅಣ್ಣಪ್ಪಯ್ಯನವರು ವೆಂಕಣ್ಣಯ್ಯನವರೊಡನೆ "ನಾರಾಯಣಯ್ಯನ 'ಪಾಲುಪಟ್ಟಿ' ಮಾಡಿಬಿಡಿ ಇನ್ನೇನು ಯೋಚಿಸುವುದು? ನ್ಯಾಯವಾದ ಆಸ್ತಿಯ ಪಾಲು ಅವನಿಗೂ ದೊರೆಯಲಿ" ಎಂದು ಕೇಳದೆ ಬಿಟ್ಟಿರಲಿಲ್ಲ

ಆದಕ್ಕೆ ವೆಂಕಣ್ಣಯ್ಯ "ಆ ವಿಷಯ ಸ್ವಲ್ಪ ವಿಚಾರ ಮಾಡುವಂತಹದ್ದು ನಮ್ಮವಳನ್ನು ಕೇಳಬೇಕು" ಎಂದು ಹೆಂಡತಿಯನ್ನೂ ಆ ವಿಷಯದಲ್ಲಿ ಸೇರಿಸಿಬಿಟ್ಟರು

ಅಣ್ಣಪ್ಪಯ್ಯನವರಿಗೆ ಅವರ ಮಾತು ಕೇಳಿ ಸಿಟ್ಟು ಬಂತು "ನೀವು ಒಳ್ಳೆಯ ಮಾತಿನಲ್ಲಿ ಕೊಡುವವರಲ್ಲ ಎಂದು ಕಾಣುತ್ತದೆ ನಾನು ಇಲ್ಲಿಯ ವರೆಗೆ ಕೋರ್ಟು ಹತ್ತಿಲ್ಲ ಇನ್ನು ವ್ಯಾಯವಾದ ಮೇಲೆ ಆದರೂ ನನ್ನನ್ನು ಕೋರ್ಟಿನ ಕಟ್ಟೆ ಹತ್ತಿಸಬೇಕೆಂಬ ಹುಮ್ಮಸ ನಿಮಗೂ ಬಹಳ ಇದ್ದಂತೆ ತೋರುತ್ತದೆ ಆಗಲಿ, ಆಗಲಿ, ನೋಡಿಯೇ ಬಿಡುತ್ತೇನೆ—ಒಂದು ಕೈ ನೀವಾಗಿ ಗಳಿಸಿದ ಆಸ್ತಿಯೇನು ಅಲ್ಲ ಅದು ಪಿತ್ರಾರ್ಜಿತ ಆಸ್ತಿಯ ಪಾಲು ಕೊಡುವುದಿಲ್ಲ ಎಂದರೆ ನಡೆಯದು" ಎಂದು ಗದರಿಸಿಯೂ ಬಂದಿದ್ದರು—ಅಣ್ಣಪ್ಪಯ್ಯ

ಮಾವನ ಮಾತಿಗೆ ನಾರಾಯಣಯ್ಯ ಮಾತ್ರ ಒಪ್ಪಿರಲಿಲ್ಲ "ಕೋರ್ಟಿಗೆ ಹೋಗುವುದು ಯಾಕೆ? ಮನಸ್ಸಿದ್ದರೆ ಅವರಾಗಿ ಕೊಡಲಿ—ಇಲ್ಲದಿದ್ದರೆ ಬೇಡ ಆ ಆಸ್ತಿಯಿಂದ ಆಗುವುದಾದರೇನು?" ಎಂದು ನಾರಾಯಣಯ್ಯ ಮಾವನವರಿಗೆ ಸಮಾಧಾನ ಹೇಳಿ ಅವರ ಕೋರ್ಟಿಗೆ ಹತ್ತುವ ಹುಮ್ಮಸವನ್ನು ತಗ್ಗಿಸಿದ್ದ

ತಾಯಿಯ ಮರಣದಿಂದ ನಾರಾಯಣಯ್ಯನಿಗೆ ಮನಸ್ಸು ತೊಳೆದಂತಾ

ಯಿತು ಯಾಕೆಂದರೆ ಅವನಿಗೆ ಇಲ್ಲಿಯ ವರೆಗೆ 'ತನಗೊಬ್ಬಳು ತಾಯಿ ಇದ್ದಾಳೆ ಅವಳು ಕ್ರೂರ ಸೊಸೆಯ ಕೈಯಲ್ಲಿ ಹೇಗೆ ದಿನ ಕಳೆಯುತ್ತಿದ್ದಾಳೋ ಏನೋ' ಎಂಬ ಮನೆತನದ ಮಾತೃವಾತ್ಸಲ್ಯವೂ ಇತ್ತು ಅದೀಗ ಇಲ್ಲದಾಗಿದೆ ಹಾಗಾಗಿ ಅವನೀಗ ನಿಶ್ಚಿಂತನಾಗಿದ್ದಾನೆ ಎನ್ನಬಹುದು ತಾಯಿ ತೀರಿದ ಮೇಲೆ ಅವನು ಫಲಮಾರಿಗೆ ಹೋಗಲಿಲ್ಲ ಎಡಹಿತ್ತಲಲ್ಲೇ ದಿನ ಕಳೆಯತೊಡಗಿದ ದಿವಸಕ್ಕೆ ಹತ್ತಾರು ಮಂದಿ ಅಲ್ಲಿಗೂ ಅವನನ್ನು ಹುಡುಕಾಡಿಕೊಂಡು ಬರುತ್ತಿದ್ದರು—ಔಷಧಕ್ಕಾಗಿ ಆದರೆ ಅಣ್ಣಪ್ಪಯ್ಯನವರು ಹಾಗೆ ಬಂದವರಿಗೆಲ್ಲ ಅಳಿಯನ ಭೇಟಿ ಮಾಡಿಸುತ್ತಿರಲಿಲ್ಲ

"ಅವನೇನು ಪುಕ್ಕಟೆ ಪಂಡಿತನೆಂದು ತಿಳಿದುಕೊಂಡಿದ್ದೀರಾ ?" ಎಂದು ಔಷಧಕ್ಕೆ ಬಂದವರಿಗೆ ಕೇಳಿ ಕಳುಹಿಸುತ್ತಿದ್ದರು

ಕೆಲವು ದಿನಗಳ ಪರ್ಯಂತ ಅಣ್ಣಪ್ಪಯ್ಯನವರಿಗೆ ಅಳಿಯನಿಗೆ ಪ್ರಶ್ನೆ ಕೇಳುವುದೇ ಕೆಲಸವಾಗಿತ್ತು ಅವರ ಮೊಟ್ಟ ಮೊದಲನೆಯ ಸವಾಲು ಎಂದರೆ "ನಾರಾಯಣಾ, ನೀನು ಇಷ್ಟು ದಿನಗಳ ವರೆಗೆ ಯಾವ ಊರಲ್ಲಿ ಇದ್ದೆ ? "

"ತುರುಕರ ಊರಲ್ಲಿ "

"ರಾಯಚೂರಲ್ಲೇ "

"ಖುದ್ದು ರಾಯಚೂರಲ್ಲಿ ಅಲ್ಲ ಅಲ್ಲಿಯ ಒಂದು ಹಳ್ಳಿಯಲ್ಲಿ "

"ಏನು ಮಾಡುತ್ತಿದ್ದಿ? ಹೊಟೇಲೇ?"

"ಹೌದು ನಾನೇ ಸ್ವತಃ ಮಾಡುತ್ತಿರಲಿಲ್ಲ "

"ಬೇರೆಯವರಿಗೆ ನಡಿಸಲಿಕ್ಕೆ ಕೊಟ್ಟಿದ್ದಿಯೋ ?"

"ಹೌದು"

"ಇಲ್ಲದಿದ್ದರೆ ನಿನಗೆ ಇಷ್ಟು ಹಣ ಗಳಿಸಲಿಕ್ಕೆ ಸಾಧ್ಯವಿರಲಿಲ್ಲ "

"ಹಣಕ್ಕಾಗಿ ನಾನು ಎಂದೂ ಬಾಯಿ ಬಿಡುವವನಲ್ಲ ಅದು ನನ್ನ ಉದ್ದೇಶವೂ ಅಲ್ಲ ನನ್ನ ತತ್ವಗಳು ನನಗೇ ಗೊತ್ತಿಲ್ಲ "

"ಏನೆಂದರೂ ನೀನು ಜೀವನವನ್ನು ಹಾಳು ಮಾಡಿಕೊಂಡಿ ನಿನಗೆ ಎಷ್ಟು ಮರ್ಯಾದೆ ಸಿಗುತ್ತಿತ್ತು! ನಿನ್ನ ವಿದ್ಯೆಯ ಉಪಯೋಗವೂ ಜನಕ್ಕೆ ಸಿಗದೆ ಹೋಯಿತು ನಿನಗ ಗೊತ್ತಿರುವ ವಿದ್ಯೆಯನ್ನು ನೀನು ಚೆನ್ನಾಗಿ

ಬೊಧಿಸಿಕೊಳ್ಳುವುದಿಲ್ಲ ಹಾಗೆಲ್ಲ ಮಾಡಿದರೆ ಏನು ಉಪಯೋಗ ?"

"ಹಣ ಪಡೆದು ವಿದ್ಯೆ ಮಾರುವುದು ನನಗೆ ಬೇಕಾಗಿಲ್ಲ ಅದೇ ಹೇಳಿದೆನಲ್ಲ—ನನ್ನ ತಲೆ ಸೆಟ್ಟಗಿಲ್ಲ ಎಂದು! ಹಾಗೆಲ್ಲ ಹಣ ಗಳಿಸುವ ದಂಧೆ ಮಾಡಿದ್ದರೆ ನಾನು ಇಷ್ಟೊತ್ತು ಕೋಟ್ಯಾಧೀಶನಾಗುತ್ತಿದ್ದೆ ಏನು ಮಾಡುವುದು? ನನ್ನ ದಾರಿಯೇ ನನಗೆ ಕಾಣಿಸುವುದಿಲ್ಲ "

"ಇನ್ನಾದರೂ ಒಳ್ಳೆಯ ರೀತಿಯಿಂದ ಸಂಸಾರ ಹೂಡಿಕೊಂಡು ಇರು ನೀನು ಅಲ್ಲಿ ಹೋದ ವೇಳೆ ಗಡ್ಡ ಯಾಕೆ ಬಿಟ್ಟೆಪ್ಪ?"

"ಯಾಕೆಂದು ನನಗೇ ಗೊತ್ತಿಲ್ಲ ನಾನು ಅಲ್ಲಿಯೇ ಹತ್ತಿರದ ಒಂದು ಕತ್ತಲ ಗವಿಯಲ್ಲಿ ಮೌನದಿಂದ ಕೂಡುತ್ತಿದ್ದೆ ನಾಲ್ಕಾರು ದಿನಗಟ್ಟಳೆ ಅನ್ನ ನೀರು ಇಲ್ಲದೆಯೂ ಕೂಡುತ್ತಿದ್ದೆ ಒಮ್ಮೊಮ್ಮೆ ಅಲ್ಲಿಯ 'ಭದ್ರಮಾಕಾಳಿಯ' ಗುಡಿಯಲ್ಲೂ ಕೂಡುತ್ತಿದ್ದೆ"

"ಮತ್ತೆ ನಿನ್ನ ಹೋಟೆಲು ಹೇಗೆ ನಡೆಯುತ್ತಿತ್ತು? ಹಾಗೆಲ್ಲ ನೀನು ತಿರುಗಲಿಕ್ಕೆ ಸಾಧ್ಯವಿದೆಯೇ ?"

"ಆ ಹೊಟೇಲಿನವರಷ್ಟು ಪ್ರಾಮಾಣಿಕ ಮನುಷ್ಯ ಈ ಜಗತ್ತಿನಲ್ಲಿಯೇ ಇಲ್ಲ ಅವನೇ ನನಗೆ ಊರಿಗೆ ಒರುವಾಗ ಎಷ್ಟೋ ರೂಪಾಯಿ ಕೊಟ್ಟ ಅವನೇ ನನಗೆ ಊಟ ಹಾಕುತ್ತಿದ್ದ ಕೇಳಿದಾಗ ಏನು ಬೇಕೋ ಅದನ್ನೆಲ್ಲ ಕೊಡುತ್ತಿದ್ದ "

"ಅಂಥವರೂ ಜಗತ್ತಿನಲ್ಲಿ ಇರುತ್ತಾರೆಯೇ? ನಿನ್ನಂಥವರೂ ಇರುತ್ತಾರೆ ಎಂದಮೇಲೆ ಅಂಥವರು ಇರುವುದೇನು ವಿಚಿತ್ರವಲ್ಲ ಬಿಡು ಮತ್ತೆ ನೀನು ಅಲ್ಲಿ ಈ ಔಷಧ ಗಿಪುಷಧ ಧರ್ಮಕ್ಕೆ ಕೊಡುತ್ತಿದ್ದೆಯೋ ಇಲ್ಲ?"

"ಅದರದ್ದೇ ಒಂದು ಬರೆದರೆ ಕಾದಂಬರಿಯಾದೀತು ಅದೆಲ್ಲ ಅದ್ಭುತ ಘಟನೆಗಳೆಂದು ನಿಮಗನಿಸಬಹುದು ನಾನು ಅದನ್ನು ಹೇಳಿದರೂ ಆತ್ಮ ಪ್ರಶಂಸೆಯಾದೀತು "

"ಇಲ್ಲಿ ಯಾರಿದ್ದಾರೆ? ಹೇಳಿಬಿಡು ನಾವೇ ಅಲ್ಲವೇ? ನಿನ್ನ ವಿಷಯ ನಮಗೆ ಗೊತ್ತಿಲ್ಲವೋ ? "

"ನಾನೊಮ್ಮೆ 'ಭದ್ರಮಾಕಾಳಿ' ಗುಡಿಯ ಗೋಪುರದಲ್ಲಿ ಕುಳಿತಿದ್ದೆ ಗಡ್ಡ ಮೀಸೆಗಳೂ ಉದ್ದವಾಗಿದ್ದವು ಆಗ ಅಲ್ಲಿಗೆ ಒಬ್ಬಳು ಹೆಂಗಸು, ಸಂಜೆಯ

ಹೊತ್ತಿಗೆ ಬಂದಳು ಅತ್ತಿತ್ತ ನೋಡಿದಳು ಹೇಗೋ ಅವಳ ದೃಷ್ಟಿ ನನ್ನ ಮೇಲೆ ಬಿತ್ತು ಥಕ್ಕನೆ ಅವಳು ನನ್ನ ಹತ್ತಿರ ಓಡಿ ಬಂದು, ನನ್ನ ಕಾಲುಗಳನ್ನು ತಬ್ಬಿಕೊಂಡು ಅಳತೊಡಗಿದಳು 'ಏನು' ಕೇಳಿದೆನು ಆಗ ಅವಳು 'ನನ್ನ ಮಗುವನ್ನು ಉಳಿಸು' ಎಂದು ಬೊಬ್ಬಿಟ್ಟಳು 'ಏನಾಗಿದೆ' ಎಂದು ನಾನವಳಿಗೆ ಕೇಳಿದೆ ಅವಳು ಉತ್ತರಿಸಲಿಲ್ಲ 'ಔಷಧಕೊಡುವ ತನಕ ನಿನ್ನ ಕಾಲು ಬುಡದಿಂದ ಏಳುವುದಿಲ್ಲ' ಎಂದು ಅಲ್ಲಿಂದ ಏಳಲಿಲ್ಲ ಹೀಗೇ ಆಲೋಚನೆ ಮಾಡಿದೆ ಕಿಸೆಯಲ್ಲಿ ಕೈ ಹಾಕಿ, ಕೈಗೆ ಸಿಕ್ಕಿದ್ದನ್ನು 'ಔಷಧಿ' ಎಂದು ಕೊಟ್ಟೆ ಮುಖ್ಯವಾಗಿ ಅವಳಿಂದ ನಾನು ಪಾರಾಗಬೇಕಿತ್ತು ಮುಂದೆ ಮೂರು ನಾಲ್ಕು ತಿಂಗಳುಗಳ ವರೆಗೆ ಆ ದೇವಸ್ಥಾನಕ್ಕೆ ಹೋಗಲಿಲ್ಲ"

"ಮುಂದೇನಾಯಿತು ಅಲ್ಲಿಗೆ ಹೋಗಬೇಕಾಗಿತ್ತು"

"ಸರಿ ಏಳೆಂಟು ತಿಂಗಳು ದಾಟಿದ ಮೇಲೆ ಪುನಃ ನಾನು ಅದೇ ದೇವಾಲಯದ, ಅದೇ ಸ್ಥಳದಲ್ಲಿ ಕುಳಿತಿದ್ದೆ ಅಲ್ಲಿ ಹಿಂದಿನಂತೆ ಜನರೂ ಇರಲಿಲ್ಲ ಅದು ಹಾಳುಬಿದ್ದ ಗುಡಿ ಅಲ್ಲಿ ಹೆಚ್ಚಾಗಿ ಭಕ್ತರು ಬರುವುದಿಲ್ಲ ಆ ಗುಡಿಗೆ ಹೋಗುವವರೇ ಪೂಜಾರಿಗಳಾಗಬೇಕು ಅಮಾವಾಸ್ಯೆಗೊಮ್ಮೆ ಹಲವಾರು ಜನ ಬಂದು—ಹಣ್ಣುಕಾಯಿ ಮಾಡಿ ಹೋಗುತ್ತಾರೆ ನಾನು ಅಂದು ಅಲ್ಲಿ ಇದ್ದದಿನ ಅಮಾವಾಸ್ಯೆಯೂ ಆಗಿರಲಿಲ್ಲ ನನಗೆ ವಿಶೇಷವಾಗಿ ಸಂಘ ಜೀವನ ಸೇರುವುದೂ ಇಲ್ಲ ಹೀಗೆ ಒಬ್ಬನೆ ಕುಳಿತಲ್ಲಿಗೆ ಪುನಃ ಆ ಹಿಂದೆ ಭೇಟಿಯಾದ ಹೆಣ್ಣುಮಗಳು ನನ್ನೆದುರು ನಗುತ್ತ ಬಂದು ನಿಂತಳು ನನ್ನ ಪಾದಗಳಿಗೆ ನಮಸ್ಕರಿಸಿದಳು ನನಗೆ ಗಾಬರಿಯೂ ಆಯಿತು ಆದರೆ ಅವಳು ಯಾರೆಂದು ಗುರುತೂ ಸಿಕ್ಕಿತ್ತು 'ಇವಳೇಕ ಬಂದಳಪ್ಪಾ?' ಎಂದು ಅಂಜಿದೆ

"ಅಷ್ಟರಲ್ಲಿ ಒಬ್ಬ ಎಂಟು ವರುಷದ ಸುಂದರ ಬಾಲಕನೂ ಬಂದು ನನ್ನ ಕಾಲುಗಳಿಗೆ ಅಡ್ಡ ಬಿದ್ದ ಅವನ ಮುಖ ನೋಡಿದೊಡನೆ, ಅವಳ ಮಗನೆಂದು ಯಾರೂ ಹೇಳಬಹುದಾಗಿತ್ತು ಅವನು ನಾನಾ ತರಹದ ಹಣ್ಣು ಹಂಪಲುಗಳನ್ನು ತಂದಿದ್ದ ಬೆಳ್ಳಿಯ ಹರಿವಾಣದಲ್ಲಿ ಅವುಗಳನ್ನೆಲ್ಲ ಇಟ್ಟಿದ್ದ ಅವುಗಳನ್ನು ನನಗೆ ಅರ್ಪಿಸಲು ಅವನ ತಾಯಿ ಹೇಳಿದಳು ಅವನು ಹಾಗೆ ಮಾಡಿದ ನಾನು ಅವುಗಳಿಂದ ಸ್ವಲ್ಪ ಹಣ್ಣುಗಳನ್ನು ತಿಂದ ಹಾಗೆ ಮಾಡಿದೆ.

ಆಗ ಅವಳು ಮಗನ ಮುಂಡವನ್ನು ಬಾಚುತ್ತ ನಿಂತಿದ್ದಳು ಅಷ್ಟರಲ್ಲಿ ನನ್ನ ಕೈಗೆ, ತಾಟಿನಲ್ಲಿದ್ದ ಬಂಗಾರದ ಒಡವೆಗಳು ತಗಲಿದುವು ! 'ಇದೇನು' ಎಂದು ಕೇಳಿದೆ ಅವಳು ಮಾತಾಡಲಿಲ್ಲ ' ನಾನಿನ್ನು ಹೋಗುತ್ತೇನೆ ' ಎಂದು ಹೇಳಿ ನಾನು ಏಳಲು ಅಣಿಯಾದೆ

"ಅವಳು ಬಿಡಲಿಲ್ಲ ಅದನ್ನು ನೀವು ಸ್ವೀಕರಿಸಬೇಕು ನಿಮ್ಮಿಂದ ಈ ನನ್ನ ಮಗ ಉಳಿದ ಎಂದು ಮಗನತ್ತ ಬೆಟ್ಟುಮಾಡಿ ತೋರಿಸಿದಳು. ಆದರೆ ನಾನು ಮಾತ್ರ ಅವಳಿಂದ ಒಂದು ಪೈ ಕೂಡಾ ತೆಗೆದುಕೊಳ್ಳಲಿಲ್ಲ ಕೊನೆಗೂ ಅವಳು ತಂದಿದ್ದ ಹಣ್ಣು ಹಂಪಲುಗಳನ್ನು ನನ್ನ ಕಾವಿ ಬಟ್ಟೆಯಲ್ಲಿ ಕಟ್ಟಿಕೊಟ್ಟು ಹೋದಳು ಅಂದಿನಿಂದ ನಾನು ಯಾರಿಗೂ ಔಷಧ ಕೊಡಲಿಕ್ಕೆ ಹೋಗಲಿಲ್ಲ ಆ ಗುಡಿಗೂ ಹೋಗಲಿಲ್ಲ "

" ಅಂತೂ ನಿನಗೆ ಜ್ಞಾನ ಕಡಿಮೆ ಬಿಡು "

" ಹೌದು "

" ಅದೆಲ್ಲ ಹೋಗಲಿ, ನಾಥುಗಳಿಗೆ ಬಂಗಾರ ಮಾಡುವ ವಿದ್ಯೆ ಗೊತ್ತಿರುತ್ತದಂತೆ—ಹೌದೋ ? "

" ನನಗೇ ಗೊತ್ತಿದೆಯಲ್ಲ ! "

" ಹಾಗಾದರೆ ನನಗೆ ಸ್ವಲ್ಪ ಕಲಿಸ ತ್ತೀಯಾ ಅದನ್ನು ? "

" ಆದರೆ ಆ ಬಂಗಾರ ಯಾವುದಕ್ಕೂ ಉಪಯೋಗ ಬೀಳುವುದಿಲ್ಲ ಅದು ನೋಡಲಿಕ್ಕಷ್ಟೇ ಬಂಗಾರ ಅದರ ಉಪಯೋಗ ಮಾಡಿಕೊಂಡರೆ ತಯಾರು ಮಾಡಿದವನ ಜೀವ ಹೋಗುತ್ತದೆ "

" ಹಾಗಾದರೆ ಬೇಡ ಮಹಾರಾಯಾ ಆ ದಂಧೆ ! "

" ನಾನು ಹಿಂದೊಮ್ಮೆ ನಿಮಗೆ ಕಲಿಸಿದ ' ಪ್ರೇತೋಚ್ಚಾಟಣಾವಿಧಿ ' ಬರುತ್ತದೆಯೋ ? "

" ಬರುತ್ತಿತ್ತು ಈಗ ಅದೆಲ್ಲ ಗಟ್ಟ ಹತ್ತಿದೆ ಆದರಿಂದ ನಾನೊಮ್ಮೆ ಇದೇ ಸಂಜೀವಿಯ ಪ್ರೇತವನ್ನು ಬಿಡಿಸಿದೆ ಈಗ ನನಗೆ ಅದನ್ನೆಲ್ಲ ಕಲಿಯಬೇಕೆಂಬ ಆಸೆ ಇಲ್ಲ " ಎಂದು ಅಣ್ಣಪ್ಪಯ್ಯ ಅಂದಿನ ಸಂಭಾಷಣೆಗೆ ಕೊನೆ ಇತ್ತಿದ್ದರು

ದಿನಗಳು ಕಳೆದಂತೆ ಅಣ್ಣಪ್ಪಯ್ಯನವರ ಮನಸ್ಸಿನಲ್ಲಿ ಆಳಿಯನಿಗೊಂದು

ದವಾಖಾನೆ ಕಟ್ಟಿಸಿಕೊಡಬೇಕು, ಅದರಿಂದ ತನ್ನ ಹೆಸರನ್ನೂ ಮುಂದೆ ತರಬೇಕು ಎಂಬ ಅಭಿಲಾಷೆ ಚಿಗುರತ್ತ ಬರತೊಡಗಿತ್ತು ಆ ಬಗ್ಗೆ ಒಂದೆರಡು ಸಲ ಅಳಿಯನಿಗೆ ಕೇಳಿಯೂ ಆಗಿತ್ತು—ಅವರು ಆದರೆ ಅವನು ಒಪ್ಪಿರಲಿಲ್ಲ ದವಾಖಾನೆ ತಯಾರಾದ ಮೇಲೆ ತಾನೇ ಒಪ್ಪುತ್ತಾನೆಂದೂ ನಿರ್ಧರಿಸಿದ್ದರು ಅದಕ್ಕೆ ಮುಕ್ತೇಶ್ವರರೂ ಬೆಂಬಲವೀಯುತ್ತಿದ್ದರು ಅದು ಶಂಕರನಿಗೆ ಬುದ್ಧಿ ಕಲಿಸುವ ಉಪಾಯವೂ ಆಗಿತ್ತು

ಆ ಊರ ಜಾತ್ರೆಗೆ ಎಂಟೇ ದಿನಗಳು ಉಳಿದಿದ್ದವು ಮುಕ್ತೇಶ್ವರರೂ ಅಣ್ಣಪ್ಪಯ್ಯನವರೂ ಕೂಡಿ 'ಕಲಾನಿಕೇತನ'ಕ್ಕೆ ಹೋದರು ಶಂಕರನೇ ಅವರಿಬ್ಬರನ್ನು ಸ್ವಾಗತಿಸಿ, "ಏನು ಬಂದದ್ದು ?" ಎಂದು ಕೇಳಿದ

"ಏನಿಲ್ಲ, ನಿಮ್ಮದೊಂದು ವ್ಯಾಖ್ಯಾನ ಏರ್ಪಡಿಸಬೇಕಾಗಿದೆ—ನಮ್ಮ ಊರ ಜಾತ್ರೆಯ ಸಮಯದಲ್ಲಿ ಅಂದು ನೀವು ನಿಮ್ಮ ಎಲ್ಲ ವಿದ್ಯಾರ್ಥಿವೃಂದ ಸಹಿತವಾಗಿ ಬರಬೇಕು ಜಾತ್ರೆಯ ಸಮಯದಲ್ಲೇ ಒಳ್ಳೆಯದಾಗುತ್ತದೆ ಇಲ್ಲದಿದ್ದರೆ—ಸಭೆ ಕೂಡಿಸುವುದು ಕಷ್ಟ ತಾವು ಒಪ್ಪಲೇ ಬೇಕು" ಎಂದು ಮುಕ್ತೇಶ್ವರರು ಕೇಳಿಕೊಂಡರು "ಒಪ್ಪುತ್ತಾನೆ ಬಿಡಿ" ಎಂದು ಅಣ್ಣಪ್ಪಯ್ಯನವರೂ ಧ್ವನಿಗೂಡಿಸಿದರು

"ನಮ್ಮೂರ ಜಾತ್ರೆಯ ಸಮಯದಲ್ಲಿ—ನನಗೆ ನಾಲ್ಕಾರು ಕಡೆಗಳಿಂದ ಆಮಂತ್ರಣ ಬಂದಿದೆ-ಉಪನ್ಯಾಸಕ್ಕಾಗಿ ಮೂಡುಬಿದ್ರೆಯ ಹೈಸ್ಕೂಲಿನವರೂ ಮಂಗಳೂರಿನ ಕಾಲೇಜಿನವರೂ ಒಂದೇ ಸವನೆ ಬೆನ್ನುಹತ್ತಿದ್ದಾರೆ"

"ಅದೇನೂ ಗೊತ್ತಿಲ್ಲ ಇಲ್ಲಿಯು ವ್ಯಾಖ್ಯಾನ ಮುಗಿಸಿ ಬೇಕಾದರೆ ಅಲ್ಲಿಗೆ ಹೋಗಬಹುದು ಮತ್ತು ನಾವು ಭಾಷಣದ ಏರ್ಪಾಡನ್ನು ರಾತ್ರಿ ಒಂಬತ್ತುವರೆ ಗಂಟೆಯ ಮೇಲೆ ಎಂದು ನಿರ್ಧರಿಸಿದ್ದೇವೆ ನಿಮ್ಮಂಥ ವಿದ್ವಾಂಸರು ನಮ್ಮ ಊರಲ್ಲಿ ಇದ್ದರೂ ನಮ್ಮ ಜನಕ್ಕೆ ಕಾಣಿಸುವುದಿಲ್ಲ ಒಂದು ವ್ಯಾಖ್ಯಾನ ನಿಮ್ಮ ಬಾಯಿಯಿಂದ ಕೇಳಬೇಕೆಂಬುದು ನಮ್ಮ ಆಸೆ ಈ ಜನಕ್ಕೆ ಏನು ಮಾಡಿದರೂ ಕಾಣಿಸುವುದಿಲ್ಲ ನಿಜ, ಹಿರಿಯರು ಮಾಡಿದ ಗಾದೆ, 'ಹಿತ್ತಲಗಿಡ ಮದ್ದಲ್ಲ' ಎಂದು. ಅಪಾರವಾದ ನಿಮ್ಮ ಸೇವೆ ನಮ್ಮವರಿಗೆ ಇನ್ನೂ ವರೆಗೆ ಗೊತ್ತಾದಂತೆ ನನಗೆ ಅನಿಸುವುದಿಲ್ಲ" ಎಂದು ಬಹಳ ಮಾತಾಡಿದರು ಮುಕ್ತೇಶ್ವರರು

"ಅದೀತು ಹಾಗಾದರೆ, ಯಾವ ವಿಷಯದ ಮೇಲೆ ಮಾತಾಡಲಿ? ರಾತ್ರಿಯ ವೇಳೆ ನನಗೂ ಅನುಕೂಲವಾಯಿತು"

"ನಿಮ್ಮಂಥ ವಿದ್ವನ್ಮಣಿಗಳಿಗೆ ನಾವು ವಿಷಯ ಗೊತ್ತು ಪಡಿಸಬೇಕೇ? ನಮ್ಮದೇ ಬೆಳೆ ಇಳಿದೀತು!"

"ಧರ್ಮ ಮತ್ತು ದೃಷ್ಟಿ—ಎಂದು ಇಟ್ಟು ಬಿಡಿ ಆದೀತೆ? ಹೇಗಾದರೂ ಜನರೆಲ್ಲ ಜಾತ್ರೆಗೆ ಬಂದವರೇ ಇರುತ್ತಾರೆ ಧರ್ಮವೆಂದರೇನು ಎಂಬ ಅರಿವಿದ್ದವರೂ ಇಲ್ಲದವರೂ ಇರುತ್ತಾರೆ ನನಗಂತೂ ಅದೇ ವಿಷಯ ಒಳ್ಳೆಯದೆಂದು ತೋರುತ್ತದೆ" ಎಂದು ಶಂಕರ ಹೇಳಿದ್ದಕ್ಕೆ ಅವರು ಒಪ್ಪಿದರು

ಜಾತ್ರೆಯೂ ಪ್ರಾರಂಭವಾಯಿತು ಶಂಕರನ ಭಾಷಣದ ಬಗ್ಗೆ ಹಸ್ತ ಪತ್ರಿಕೆಗಳನ್ನು ಈ ಮೊದಲೇ ಹಂಚಲಾಗಿತ್ತು ರಾತ್ರಿ ೯॥ ಗೆ ಪ್ರಾರಂಭವಾಗುವ ಭಾಷಣ—೧೦॥ ಗೆ ಯಥಾವಕಾಶ ಪ್ರಾರಂಭವಾಯಿತು ಜಾತ್ರೆಯ ಜನವನ್ನೆಲ್ಲ ಅಲ್ಲಿಯೇ ಹತ್ತಿರದ ಆಲದ ಮರದ ಬುಡಕ್ಕೆ ರವಾನಿಸಲಾಯಿತು. ಆದರೆ, ಮುಖ್ಯ ಅತಿಥಿಯ ಹಾಗೂ ಭಾಷಣಕಾರನಾದ ಶಂಕರನ ಪರಿಚಯ ಮಾಡಿಕೊಡಲಿಕ್ಕೆ ಹೋಗಿ ಮುಕ್ತೇಶ್ವರರು ವೇದಿಕೆಯಮೇಲೆ ಮೂಕ ಮೂರ್ತಿಯಂತೆ ನಿಂತುಬಿಟ್ಟರು ಬಾಯಿಯೇ ಆಡಲಿಲ್ಲ

ಆಗ ಸಭೆಯಿಂದ ಎದ್ದು—ಡಾ ಕೃಷ್ಣರಾಯರು ಶಂಕರನ ಪರಿಚಯ ಮಾಡಿದರು ಜನರೆಲ್ಲ ಡಾಕ್ಟರರ ಮಾತುಗಳನ್ನು ಶಾಂತ ರೀತಿಯಿಂದ ಕೇಳಿ "ತಮ್ಮೂರಲ್ಲಿ ಶಂಕರನಂಥ ದೊಡ್ಡ ವ್ಯಕ್ತಿ ಇದ್ದಾನೆಯೇ?" ಎಂದು ಒಬ್ಬರನ್ನೊಬ್ಬರು ಕೇಳಿಕೊಂಡು ಆಶ್ಚರ್ಯಪಟ್ಟರು ಆಮೇಲೆ ಶಂಕರನ ಭಾಷಣವೂ ನಡೆಯತೊಡಗಿತು ಗಂಭೀರವಾದ ಧ್ವನಿಯಿಂದ ಅಸ್ಖಲಿತವಾಗಿ ಮಾತನಾಡುತ್ತಿದ್ದ–ಆತ ನಡು ನಡುವೆ ಸಂಸ್ಕೃತ ಶ್ಲೋಕಗಳನ್ನೂ ಉದ್ಧರಿಸಿ ಹೇಳುತ್ತಿದ್ದ ಅವನ ವಿದ್ಯಾರ್ಥಿ ವೃಂದವೆಲ್ಲ ಅಲ್ಲಿ ಬೆರೆತಿತ್ತು 'ಕಲಾ ನಿಕೇತನ' ದಲ್ಲಿ ಒಬ್ಬರೂ ಉಳಿಯದಂತೆ ಎಲ್ಲರನ್ನೂ ಬಳೆದುಕೊಂಡು ತಂದಿದ್ದರು—ಮುಕ್ತೇಶ್ವರರು

ಮಧ್ಯರಾತ್ರಿಯ ವೇಳೆಯಾಗಿತ್ತು ಸಭೆಯೆಲ್ಲ ಶಂಕರನ ಭಾಷಣದ ವಾಣಿಯಲ್ಲಿ ಹರಿದು ಬಿಟ್ಟಿತ್ತು ಅಂಥ ಹೊತ್ತಿನಲ್ಲಿ ಸಭೆಯಲ್ಲಿ ಕೆಲವರು ಹಿಂದೆ ಹೊರಳಿ ನೋಡಿದವರು—"ಅದೋ ಅಲ್ಲಿ... ಓ ಅತ್ತಲಾಗೆ ನೋಡು

ಮನೆಯ ಹಿಂದೆ ಗುಡ್ಡದಲ್ಲಿ . ಅದೆಂಥ ಬೆಂಕಿ ? ಯಾರದೋ ಮನೆ ಸುಡುತ್ತಿದೆ ! ಅಯ್ಯೋ ! ಎಂಥಾ ಬೆಂಕಿ ” ಎಂದು ಹೇಳುತ್ತಿದ್ದರು

“ಯಾರ ಮನೆಯದು ?” ಎಂದರು ಕೆಲವರು “ಅಯ್ಯೋ ಅಲ್ಲಿಗೆ ಹೋಗಿ—ಬೆಂಕಿ ಆರಿಸಲಿಕ್ಕಾಗುತ್ತದೆಯೋ—ನೋಡೋಣ—ಹೋಗೋಣ” ಎಂದು ಹಲವಾರು ಜನರು ಹೊರಟೇ ಬಿಟ್ಟರು

ಇತ್ತ ಶಂಕರನ ಭಾಷಣ ಆವೇಶದ ಆಕಾಶದಲ್ಲಿ ಭರದಿಂದ ಓಡುತ್ತಿತ್ತು ಅತ್ತ ಅವನ ಕಲಾನಿಕೇತನವು ಬೆಂಕಿಯ ಬಾಯಿಯಲ್ಲಿ ಭಸ್ಮವಾಗುತ್ತಿತ್ತು ಅಷ್ಟರಲ್ಲಿ “ಕಲಾನಿಕೇತನಕ್ಕೆ ಬೆಂಕಿ ಬಿದ್ದಿದೆ!” ಎಂದು ಸಭೆಯಲ್ಲಿ ಜನ ಬೊಬ್ಬಿಟ್ಟರು ಶಂಕರ ಕಕ್ಕಾಬಿಕ್ಕಿಯಾದ ! “ಹೋ ! ” ಎನ್ನುತ್ತ ಓಡಿದ ! ಜನರೂ ಅವನ ಹಿಂದೆ ಓಡಿದರು

“ಅದು ಯಾರು ಬೆಂಕಿ ಹಾಕಿದರಪ್ಪಾ ! ” ಎಂದು ಮುಕ್ತೇಶ್ವರರು ನಟನೆ ನಡಿಸಿದರು ಆಗ ದೂರದಿಂದ ಮಂಗಳೂರು ಹಂಚುಗಳು ಬೆಂಕಿಯಲ್ಲಿ ಸ್ಫೋಟವಾಗುವ ಭೀಕರ ಸಪ್ಪಳ ಕೇಳಿಸತೊಡಗಿತು

ಎಷ್ಟು ಪ್ರಯತ್ನಪಟ್ಟರೂ ಸಾಲೆಯನ್ನು ಉರಿಯಿಂದ ಉಳಿಸಲು ಅಸಾಧ್ಯವಾಯಿತು ಬೆಂಕಿಯ ಹತ್ತಿರ ಹೋಗುವುದಕ್ಕೂ ಜನ ಹೆದರಿದರು ! ಹಂಚುಗಳು ಸಿಡಿಯುತ್ತಿದ್ದವು ! ಅಗ್ನಿನಾರಾಯಣನ ಅವತಾರವೇ ಅದಾಗಿತ್ತು

ಬೆಳಗಾಗುವುದರೊಳಗೆ ನಿಕೇತನ ಭಸ್ಮವಾಯಿತು ಜಾತ್ರೆಯಲ್ಲಿ “ಮುಕ್ತೇಶ್ವರರು ಮತ್ತು ಅಣ್ಣಪ್ಪಯ್ಯ, ಇತ್ತ ಭಾಷಣ ಮಾಡಿಸಿ, ಅತ್ತ ನಿಕೇತನಕ್ಕೆ ಬೆಂಕಿ ಹಾಕಿಸಿದರು ” ಎಂಬ ಸುದ್ದಿಯೂ ಹಬ್ಬಿತು

ಬೆಳಗ್ಗೆ ಶಂಕರ ತನ್ನ ನಿಕೇತನದ ದುಃಖಸೂಚಕ ಭಾಷಣವನ್ನು ಮುಗಿಸಿದ ಅವನಿಗೂ ನಿಕೇತನಕ್ಕೆ ಬೆಂಕಿ ಇಟ್ಟವರಾರು ಎಂಬುದು ತಿಳಿದಿತ್ತು “ಇನ್ನಾದರೂ ಅವರಿಗೆ ಆನಂದವಾಗಲಿ—ನನಗೆ ಬುದ್ಧಿ ಬಂತು ” ಎಂದು ದೀನಸ್ವರದಿಂದ ನುಡಿದ

# ೯

ನಾಲ್ಕಾರು ದಿನಗಳ ವರೆಗೆ ಶಂಕರ ನಿರಾಶಾವಾದಿಯಾಗಿದ್ದ ಎಷ್ಟು ಜನರು ಬಂದು ಸಮಾಧಾನ ಹೇಳಿದರೂ ಚಿಂತಿಸುತ್ತ ಎರಡು ದಿನಗಳನು ಕಳೆದ ಗೋಡೆಗಳೂ ಸುಟ್ಟು ಕಪ್ಪಾದ 'ಕಲಾನಿಕೇತನ' ದ ದೃಶ್ಯ ಅವನ ಬಗೆಗಣ್ಣಿನ ಮುಂದೆ ಬಂದು ನಿಲ್ಲುತ್ತಿತ್ತು "ಈ ಸಮಾಜಕ್ಕೆ ಏನು ಮಾಡಿದರೂ ಸಹನೆ ಇಲ್ಲ ದೇಶ ಸೇವೆ ಮಾಡದೆ ಇದ್ದರೂ ಕಷ್ಟ ಮಾಡಿದವರ ಪಾಡು ಹೀಗೆ ತಮ್ಮಿಂದ ಏನೂ ಆಗದಿದ್ದರೆ ಅಂಥ ಕೆಲಸಗಳನ್ನು ಮಾಡುವವರ ತಲೆಗೆ ಕಲ್ಲು ಹೇರುವುದು ಯಾವ ನ್ಯಾಯ ? ಒಟ್ಟಿನಲ್ಲಿ ಈ ಜಗತ್ತಿನಲ್ಲೇ ಇಂಥ ಕಪಟ ತುಂಬಿದೆ ನನ್ನಷ್ಟಕ್ಕೆ ನಾನು ಇರುವುದು ಲೇಸು" ಎಂದು ಒಂದೆರಡು ದಿನ ವಿಚಾರಿಸುತ್ತ ಕುಳಿತ

ಆಮೇಲೆ "ಹಾಗೆಲ್ಲ ಜನರು ವಿರೋಧಿಸುತ್ತಾರೆಂದು ಹೆದರಿ ಕೂಡುವುದು ಸರಿಯಲ್ಲ ಜನಹಿತಕ್ಕೆ ಇಳಿದವನಿಗೆ ಅದೇ ಜನರು ಅಹಿತವನ್ನೂ ಬಯಸುವುದು ಸಹಜ ಹಿಂದೆ ಆ ರೀತಿ ಆಗಿದೆ ಮುಂದೆ ಆಗುತ್ತದೆ ಆದರೆ ದೇಶ ಸೇವೆಗೆ ಇಳಿದವನು ಅಂಥ ವಿರೋಧಗಳಿಗೆ ಅಂಜುತ್ತಾನೆಯೇ ? ಇಂದು ವಿರೋಧಿಗಳಾದವರು ನಾಳೆ ನನ್ನ ಇಷ್ಟಮಿತ್ರರಾಗಬಾರದೇಕೆ ?" ಎಂದೂ ಅವನ ತಲೆಯಲ್ಲಿ ವಿಚಾರ ಬಂದಿತು

"ನಾನು ಇಷ್ಟಾದರೂ ಈ ಕೆಲಸದಿಂದ ಕೈ ಹಿಂದೆ ತೆಗೆದುಕೊಳ್ಳಬಾರದು. ಸಾಲೆಯಲ್ಲಿದಿದ್ದರೆ ಬೇರೆ ಯಾವ ರೀತಿಯಿಂದಲಾದರೂ ದುಡಿಯಬೇಕು" ಎಂಬ ದೃಢವಾದ ನಿರ್ಧಾರವನ್ನು ಮಾಡಿದ ಇಷ್ಟರಲ್ಲೇ ಅವನಿಗೆ ಎಷ್ಟೋ ಜನರು "ಡಾಕ್ಟರ ಶಂಕರರಾಯ"—"ವೈದ್ಯ ಶಂಕರರಾಯರು" ಎಂದು ಮೊದಲಾಗಿ ಕರೆಯುತ್ತಿದ್ದರು ಅದೇನೂ ಹಾಸ್ಯದ ಹೆಸರಲ್ಲ ಶಂಕರ ಎರಡು—ಮೂರು ವರುಷಗಳಲ್ಲಿ ಡಾ ಕೃಷ್ಣರಾಯರ ನೇತೃತ್ವದಲ್ಲಿ ಸಾಕಷ್ಟು ವೈದ್ಯಕೀಯದ ಜ್ಞಾನ ಸಂಪಾದಿಸಿದ್ದನಷ್ಟೇ ಎಷ್ಟೋ ರೋಗಿಗಳಿಗೆ ಔಷಧ ಕೊಟ್ಟು ಒಳ್ಳೆಯ ಹೆಸರನ್ನೂ ಗಳಿಸಿಕೊಂಡಿದ್ದ

ಹೀಗಾಗಿ ಕೆಲವರು "ನೀವು ಒಂದು ಆಸ್ಪತ್ರೆ ಹಾಕಿಬಿಡಿ" ಎಂದು ಅಂದಿದ್ದರು

ಶಂಕರನಿಗೆ ಅವರ ಮಾತು ನೆನಪಿಗೆ ಬಂತು 'ಕಲಾನಿಕೇತನ'ದ ಗೋಡೆಗಳಿಗೆ ಮಾಡು ಏರಿಸಿ, ಅಲ್ಲಿಯೇ ಒಂದು 'ಧರ್ಮಾರ್ಥ ದವಾಖಾನೆ' ಯನ್ನು ನಡೆಸಬೇಕೆಂದು ಯೋಚನೆ ಮಾಡಿಯೂ ಆಯಿತು ಆ ಬಗ್ಗೆ ಡಾ ಕೃಷ್ಣರಾಯರನ್ನು ಕೇಳಿಯೂ ಬಿಟ್ಟ ಔಷಧಗಳನ್ನು ತಾನೇ ಪುಕ್ಕಟೆ ಯಾಗಿ ಪೂರೈಸುತ್ತೇನೆಂದು ಅವರೂ ಇವನನ್ನು ಹುರಿದುಂಬಿಸಿದರು ಆದರೆ ದವಾಖಾನೆಯ ಮಾಡು ಏರಿಸಲು ಸಾಕಷ್ಟು ಹಣ ಶಂಕರನಲ್ಲಿ ಇರಲಿಲ್ಲ ಕಾರಣ ಒಮ್ಮೆ ತನ್ನ ಗೆಳೆಯರಿಗೆ ಬೆನ್ನು ಹತ್ತಿ ಹೇಗಾದರೂ ಸ್ವಲ್ಪ ಹಣ ಕೂಡಿಸುವುದೆಂದೂ, ಇಲ್ಲಿಯ ಸ್ಥಿತಿ ಹೇಳಿದರೆ ಅವರು ಹಣ ಕೊಟ್ಟಾರೆಂದೂ ಯೋಚಿಸಿದ ಅಂತೇ ಸಾಲ ಮಾಡಿ, ಪುನಃ ನಿಕೇತನದ ಮಾಡು ಕಟ್ಟಿಸಿದ ಮೊದಲಿನಂತೆ ಆಡಂಬರದಿಂದ ಕಟ್ಟಡವನ್ನು ಶೃಂಗರಿಸಲಿಲ್ಲ 'ಧರ್ಮಾರ್ಥ ದವಾಖಾನೆ' ಎಂದು ಬೋರ್ಡನ್ನೂ ಮುಂದೆ ಇಳಿಯಬಿಟ್ಟ ಆದರೆ ದವಾ ಖಾನೆ ತೆರೆಯಲಿಲ್ಲ ಆದಕ್ಕೆ ಗಟ್ಟಿಯಾಗಿ ಬಾಗಿಲು ಮುಚ್ಚಿ, ದೊಡ್ಡ ಬೀಗ ಬಡೆದು, ಸಾಲದ ಹಣದಿಂದಲೇ ಸಾಲ ತೀರಿಸಲು, ಫಂಡು ಕೂಡಿಸಲು ಗೆಳೆ ಯರ ಊರುಗಳನ್ನು ಹುಡುಕುತ್ತ—ಅವರೊಡನೆ ಬೇಡಿ ಕಾಡಿ, ಹಣ ಕೂಡಿ ಸಿಕೊಂಡು ಹೊರಟ

'ಕಲಾನಿಕೇತನ' ಸುಡಿಸಿದ ಮುಕ್ತೇಶ್ವರರು ಮಾತ್ರ ಜೈಲು ಕಂಡರು ಅವರ ಸಂಗಾತಿಗಳಾದ ಅಣ್ಣಪ್ಪಯ್ಯನವರಿಗೂ ಜೈಲುವಾಸ ಆಗುವುದಿತ್ತು ಆದರೆ ವಕೀಲರು, ರಾಮದಾಸ ಎಲ್ಲರೂ ಬಂದು ಏನೋ ಇಂದ್ರಜಾಲ ಹೂಡಿ ದರಂತೆ ವಕೀಲರಿಗೆ ಸಬ್‌ಇನ್ಸಪೆಕ್ಟರರ ಗುರ್ತು ಇತ್ತಂತೆ ಪೋಲೀಸ ರಿಂದ ಹಿಡಿದು ದೊಡ್ಡ ಅಧಿಕಾರಿಯವರೆಗೆ, ಕೈ ಬಿಸಿ ಮಾಡಿ ಅಣ್ಣಪ್ಪಯ್ಯನವ ರನ್ನು 'ನಿರಪರಾಧಿ' ಎಂದು ಬಿಡುಗಡೆ ಮಾಡಿಸಿದ್ದರು ಅಲ್ಲದೆ ಮುಕ್ತೇಶ್ವರ ರನ್ನೂ ಬಿಡುಗಡೆ ಮಾಡಲು ಸಾಕಷ್ಟು ಹೆಣಗಾಡಿದ್ದರು ಅವರನ್ನು ಬಿಡ ಲಿಲ್ಲ—ಸರಕಾರ. ಅವರ ಮೇಲೆ 'ಕಳ್ಳಸಂತೆಯ ಕಲಮ್' ಹಚ್ಚಿ ಮತ್ತೊಂದು ಅಪರಾಧವನ್ನು ಹೇರಿಸಿತ್ತು ಇಲ್ಲದಿದ್ದರೆ ಆ ಬ್ಲ್ಯಾಕ್ ಮಾರ್ಕೆಟ್ ಕಾಲ ದಲ್ಲಿ ಅವರೇಕೆ ನೂರಿನ್ನೂರು ಡಬ್ಬಿ ಚಿಮಣಿ ಎಣ್ಣೆಯನ್ನು ಕಲಾನಿಕೇತನಕ್ಕೆ

ಹೊಯ್ಯಬೇಕು? ಅದರಿಂದ ಅವರಿಗೆ ಬಂದ ಲಾಭವೆಂದರೆ—ಜೈಲಿಗೆ ಹೋಗಲು ಉರಿಯುವ ನಿಕೇತನ ಬೆಳಕು ತೋರಿಸಿ ಕೊಟ್ಟದ್ದು ಶಂಕರನಾದರೂ ಮುಕ್ತೇಶ್ವರರಿಗೆ ಆದ ಶಿಕ್ಷೆಯನ್ನು ಕಡಿಮೆ ಮಾಡಲು ಹವಣಿಸಿದ್ದ ಆದರೆ ಆವೂರ ಜನರು ಕೇಳಲಿಲ್ಲ ಅವರಿಗೆ ಜೈಲು ಆಗಲೇಬೇಕೆಂದರು

ನಿಕೇತನಕ್ಕೆ ಬೆಂಕಿ ಬೀಳುವ ಹತ್ತು—ಹದಿನೈದು ದಿನಗಳ ಮುಂಚೆ ಸುಮತಿ ಗುಣಹೊಂದಿದ್ದಳು—ಶಂಕರನ ಉಪಚಾರದಿಂದ ಹೊನ್ನಪ್ಪಯ್ಯನವರೂ ದಿವಸಕ್ಕೊಮ್ಮೆ ಬಂದು ಮಗಳನ್ನು ನೋಡಿ ಹೋಗುತ್ತಿದ್ದರು ಅವಳ ಬೇನೆ ಸಂಪೂರ್ಣ ಗುಣವಾದ ಮೇಲೆ ಮನೆಗೂ ಕರೆದೊಯ್ದರು ಪುನಃ ಮೊದಲಿನಂತೆ ಜಾನಕಿಯ ಕೈ ಕೆಳಗೆ ಅವಳು ದುಡಿಯಬೇಕಾಯಿತು ಆದರೆ ಮೊದಲಿನಂತೆ ಪೆಟ್ಟಿನ ಶಿಕ್ಷೆ ಅವಳಿಗೆ ಸಿಗುವುದು ನಿಂತಿತು ಬದಲು ಮಾತಿನ ಪೆಟ್ಟುಗಳು ಬಲವಾಗಿ ಬೀಳತೊಡಗಿದವು ಸುಮತಿಗೆ ಆ ಹಂಗಿನ ಅರಮನೆ ಬೇಡವೆನಿಸಿತು ಆದರೂ ಅವಳು ನಿರುಪಾಯಳಾಗಿದ್ದಳು ಹಿಂದೆ ಶಂಕರನೊಡನೆ ಯಾವಾಗಾದರೊಮ್ಮೆ ತನ್ನ ದುಃಖವನ್ನು ತೋಡಿಕೊಳ್ಳುತ್ತಿದ್ದಳು ಅವನೂ ಇವಳನ್ನು ಸಂತೈಸುತ್ತಿದ್ದ ಈಗ ಅವನೂ ಇಲ್ಲ ಊರು ಬಿಟ್ಟು ಗಟ್ಟ ಹತ್ತಿದ್ದಾನೆ

ಹೋಗುವಾಗ "ಸುಮತೀ, ನಾನು ನಿನ್ನನ್ನು ಮರೆಯುವುದಿಲ್ಲ ನೀನು ನನ್ನನ್ನು ಮರೆಯಬಾರದು" ಎಂದು ಮಧುರವಾಗಿ ಮಾತಾಡಿ ಹೋಗಿದ್ದ

"ನಾನು ಸತ್ತರೂ ನಿನ್ನನ್ನು ಮರೆಯುವುದಿಲ್ಲ" ಎಂದು ಅವಳು ಅಳುತ್ತ ಅವನ ಮುಂದೆ ಹೇಳಿಕೊಂಡಿದ್ದಳು ಆಗ ಪ್ರೀತಿಯಿಂದ ಅವಳ ಮುಂಗುರುಳುಗಳನ್ನು ತೀಡಿದ್ದ ಸವಿಯಾದ ಮಾತುಗಳನ್ನು ಆಡಿದ್ದಕ್ಕೆ ಲೆಕ್ಕವೇ ಇರಲಿಲ್ಲ ಶಂಕರ ಪ್ರೇಮದ ಆವೇಶದಲ್ಲಿ ಹೆಜ್ಜೆತಪ್ಪಿ ಬೀಳದಂತೆ ಅವಳು ಸಾಕಷ್ಟು ಮುಂಜಾಗ್ರತೆ ವಹಿಸಿದ್ದಳು

"ಎಷ್ಟೆಂದರೂ ನಾನು ಅನ್ಯರ ಸೊತ್ತು ನಿನಗೆ ನನ್ನ ನೆರವು ಶಾಶ್ವತವಾಗಿ ಸಿಗುವುದಿಲ್ಲ ಎರವುಕೊಂಡ ನೆರವು ಆಗುತ್ತದೆ ಇದು" ಎಂದು ಅವಳು ಅವನಿಗೆ ಸಮಾಧಾನ ಹೇಳಿ ಅವನ ಚೇಷ್ಟೆಗಳಿಗೆ ಕಿವಿಗೊಡುತ್ತಿರಲಿಲ್ಲ

ಆದರೂ ಅವನು ಅನ್ನುತ್ತಿದ್ದ "ಸುಮತೀ, ನೀನು ನಿಜಕ್ಕೂ ನನಗೆ ಹಿಂದಿನ ಜನ್ಮದಲ್ಲಿ ಏನಾಗಿದ್ದೆಯೋ ಗೊತ್ತಿಲ್ಲ! ನನ್ನ ಜೀವನದಲ್ಲಿ ನಿನ್ನ

ನೆರವು ಬೇಕು ನನಗೆ ನನ್ನ ಮನಸ್ಸಿನಲ್ಲಿ ನಿನ್ನ ಬಗ್ಗೆ ಯಾವುದೋ ಹೇಳಲಾರದ ಭಾವನೆ ಆಳವಾಗಿ ಬೇರೂರಿ ನಿಂತಿದೆ ಅದೇಕೆ ನನಗೇ ತಿಳಿಯದು ”

ತಮ್ಮ ಹಿರಿಯರು ಮನಸ್ತಾಪ ಹುಟ್ಟಿಸಿಕೊಂಡ ದಿನದಿಂದ, ಸುಮತಿ—ಸಂಜೀವಿಯರು ಒಂದೆಡೆಗ ಕೂಡಿ ಮಾತಾಡಿದ್ದೇ ಇಲ್ಲ ಆದರೆ ಬೇರೆಯವರ ಮೂಲಕ ಒಬ್ಬಳ ಸುಖದುಃಖವನ್ನು ಮತ್ತೊಬ್ಬಳು ಅರಿತುಕೊಳ್ಳುತ್ತಿದ್ದಳು ಸುಮತಿಗೂ ಸಂಜೀವಿ ಗರ್ಭಿಣಿಯಾದ ಸಂಗತಿ ಗೊತ್ತಾಗಿತ್ತು ಅವಳ ಗ್ರಹಣ ಮಾಸಿತು ತನ್ನ ರಾಹು ಯಾವಾಗ ಅಳಿಯುತ್ತಾನೋ ಎಂದು ಚಿಂತಿಸುತ್ತ ಇದ್ದಳು ಆಕೆ

ಹೊನ್ನಪ್ಪಯ್ಯನವರೂ ಮಗಳಿಗೆ ಬೇಕಾದಂತೆ ಹಳಿಯಲು ಪ್ರಾರಂಭಿಸಿದರು ಮಗಳು ಎಂಬ ವಾತ್ಸಲ್ಯವೂ ಇಲ್ಲಗಂತೆ ಅವರು ನಟಿಸುತ್ತಿದ್ದರು ಆದರೆ ಅದೆಲ್ಲ ಜಾನಕಿಯ ಪ್ರೇರಣೆಯಿಂದ--ಎಂಬುದು ಸುಮತಿಗೂ ಗೊತ್ತಿತ್ತು ಅದಕ್ಕಾಗಿ ಅವಳು ಸುಮ್ಮನಿದ್ದಳು ತನ್ನ ತಂದೆ ಅಂಥವರಲ್ಲ ಎಂದು ಬಗೆದಳು ಅವರ ಮೇಲಿನ ಆದರ—ಪ್ರೇಮವನ್ನು ಕಡಿಮೆ ಮಾಡಲಿಲ್ಲ ಬದಲು ಮನಸ್ಸಿನಲ್ಲಿ ದೇವರ ಸ್ಮರಣೆ ಮಾಡುತ್ತ “ ಒಳ್ಳೆಯದು ಮಾಡು ದೇವಾ ” ಎಂದು ಬೇಡುತ್ತಿದ್ದಳು

ಕಾಡುಗುಡ್ಡಗಳಿಗೆ ಹೋದಾಗಲೂ ಅವಳಿಗೆ ಪೊದೆಯ ಮರೆಯಲ್ಲಿ ಶಂಕರನ ಮುಖ ಕಮಲ ಕಾಣಿಸುತ್ತಿತ್ತೇ ಹೊರತು ಶಿವರಾಯನ ಮುಖ ಅವಳ ಕನಸಿನಲ್ಲೂ ಕಾಣುತ್ತಿರಲಿಲ್ಲ ಅಲ್ಲದೆ ಅವನ ಮುಖವನ್ನು ಅವಳು ಇಂದಿನವರೆಗೆ ನೋಡಿರಲೂ ಇಲ್ಲ ತನ್ನ ಗಂಡನ ಮುಖ ಹೇಗಿರಬಹುದು ? ಎಂದೊಮ್ಮೆ ಯೋಚಿಸುತ್ತಲೂ ಕೂಡುತ್ತಿದ್ದಳು ಶಂಕರನ ಮುಖವೇ ಅವಳ ಮುಂದೆ ನಿಲ್ಲುತ್ತಿತ್ತು ಸಹಸ್ರಾರು ಸಲ ಶಂಕರನ ಬಳಿಯಲ್ಲಿ ಕೂತು ಸರಸವಾಡುತ್ತಿರುವ ಕನಸ್ಸುಗಳನ್ನು ಆಕೆ ಕಂಡಿದ್ದಳು ಅದೇ ಕ್ಷಣಕ್ಕೆ ವ್ಯಥೆಯೂ ಅವಳನ್ನು ಆವರಿಸುತ್ತಿತ್ತು ಆಗ ಅವಳು ಗೋಳೋ ಎಂದು ಅಳದಯೂ ಇಲ್ಲ ಜಾನಕಿಯ ಕೈಕಳಗೆ ತೊತ್ತಾಗಿ ದುಡಿದು ದುಡಿದು ಅವಳು ಸೋತಾಗ ಶಂಕರನ ತಾಯಿ—ಎಷ್ಟೆಲ್ಲ ರೀತಿಯಿಂದ ಪ್ರೀತಿಸುತ್ತ ಆದರಿಸುತ್ತಿದ್ದಳು! ಈಗ ಅವಳೂ ಇಲ್ಲ ಶಂಕರ ಊರು ಬಿಟ್ಟು ಗಟ್ಟಕ್ಕೆ ಹೋದವೇಳೆ ಅವಳೂ ತನ್ನ ಅಳಿಯನ ಮನೆಗೆ ಹೋದಳು ಹೋಗುವಾಗ ಅವಳಿಗೂ ಸುಮತಿಯು

ಪಾಡು ನೆನೆದು ದುಃಖ ಬಂದಿತ್ತು

" ಹೇಗಾದರೂ ಇರು ಮಗು ದೇವರು ನಿನಗೆ ಸುಖ ಕೊಡುತ್ತಾನೆ ಅಳಬೇಡ " ಎಂದು ಸಂತೈಸಿಯೂ ಹೋಗಿದ್ದಳು

" ನೀವೂ ಹೋದ ಮೇಲೆ ಇನ್ನಾರು ನನ್ನನ್ನು ಕೇಳುವವರು? " ಎಂದು ಸುಮತಿ ಸುರಿಸಿದ ಕಣ್ಣೀರು ಹಳ್ಳವಾಗಿ ಹರಿದಿತ್ತು

ಸುಬ್ಬಿಯೂ ಆ ಊರು ಬಿಟ್ಟು ಹೋದ ಮೇಲೆ ಸುಮತಿ ಕಳೆದ ದಿನಗಳು ಅವಳ ಜೀವನದ ಇತಿಹಾಸದಲ್ಲಿ ಕಣ್ಣೀರ ದ್ಯೋತಕಗಳಾಗಿ ಉಳಿಯುವಂತಹವುಗಳು " ಮಳೆ ತೀರಿದ ಮೇಲೆ ಮರದ ಅಡಿ ನಿಲ್ಲಬೇಡ ತಾಯಿ ತೀರಿದ ಮೇಲೆ ತಂದೆಯ ಬಳಿ ನಿಲ್ಲಬೇಡ " ಎಂಬ ಗಾದೆಯನ್ನು ಸುಮತಿಯ ತಾಯಿ ಆಗಾಗ ಒಕ್ಕಲು ಮಕ್ಕಳಿಗೆ ಹೇಳುತ್ತಿದ್ದಳು ಈಗ ಅದರ ಅರ್ಥ ಸುಮತಿಗೆ ಚೆನ್ನಾಗಿ ಗೊತ್ತಾಯಿತು ತಾನು ಹೆಣ್ಣಾಗಿ ತಂದೆಯ ಮನೆಯಲ್ಲಿ ಉಳಿಯಬೇಕಾಯಿತಲ್ಲ! ಇಷ್ಟು ಕಷ್ಟಗಳನ್ನು ಅನುಭವಿಸಬೇಕಾಯಿತಲ್ಲ ಒಟ್ಟಿನಲ್ಲಿ ಒಬ್ಬನು ಎಲ್ಲಿ ಇರಬೇಕೋ ಅಲ್ಲಿ ಇರಬೇಕು ಇಲ್ಲದಿದ್ದರೆ ಅದು ಹೊಲಸು ತಂದೆಯ ಮನೆ ಅತ್ತೆಯ ಮನೆಗಿಂತ ಕಷ್ಟಕರವಾಗುತ್ತದೆ ಮಾವನಿಗಿಂತ ತಂದೆಯೇ ನಿಷ್ಠುರನಾಗುತ್ತಾನೆ ಹೆಣ್ಣಾದವಳಿಗೆ ಯಾವ ಕಷ್ಟ ಸಿಕ್ಕರೂ ಮಾವನ ಮನೆಯೇ ಲೇಸು ತವರಿನಲ್ಲಿ ಸುಖ ಸಿಗುತ್ತದೆ ಎಂಬುದು ಸುಳ್ಳು ಮಾವನ ಮನೆಯಲ್ಲಿ ಎಷ್ಟು ಕಷ್ಟ ಸಿಕ್ಕರೂ ಸಹಿಸಬಹುದು ಅದಕ್ಕೆ ಮರ್ಯಾದೆ ಇದೆ ಅದು ಎಷ್ಟೆಂದರೂ ಗಂಡನ ಮನೆ ಎಂದು ಹೇಳಿಸಿಕೊಳ್ಳುತ್ತದೆ—ಎಂದು ಮೊದಲಾಗಿ ಸುಮತಿ ತನ್ನಲ್ಲೇ ವಿಚಾರಿಸುತ್ತ ಗುಡ್ಡದಲ್ಲೆ ಸೊಪ್ಪು ಕಟ್ಟಿಗೆಗೆ ಹೋದವಳು ಎಷ್ಟೋ ಹೊತ್ತಿನವರೆಗೆ ಕೂಡುತ್ತಿದ್ದಳು

ಅದರಲ್ಲೂ ಒಮ್ಮೆ ಹೊನ್ನಪ್ಪಯ್ಯ ಮಗಳನ್ನು ಬೇರೆಯವರ ಮುಂದೆ ದೂಷಿಸಿದ ದಿನವಂತೂ ಸುಮತಿಗೆ ಬಾವಿಗೆ ಹಾರುವಷ್ಟು ದುಃಖವಾಗಿತ್ತು ರಾತ್ರಿಯಲ್ಲಿ ಒಮ್ಮೆ ಎದ್ದು ಬಾವಿಯ ಬಳಿಗೂ ಹೋಗಿ ಹಿಂತಿರುಗಿದ್ದಳಂತೆ ಬಾವಿಯಲ್ಲಿ ಶಂಕರನ ಮುಖ ಕಾಣಿಸಿದೊಡನೆ ಮನೆಗೆ ಬಂದಳಂತೆ ಯಾರೋ ಒಬ್ಬ ಅಪರಿಚಯಸ್ಥ ಶೂದ್ರ ಮನೆಗೆ ಬಂದಿದ್ದ ಆಗ ಅವನೊಡನೆ ಹರಟೆ ಹೊಡೆಯುತ್ತ ಹೊನ್ನಪ್ಪಯ್ಯ ಅಳಿಯನ ಸುದ್ದಿಗೆ ತಲುಪಿದರು ಕೂಡಲೇ

ಮಗಳ ತ್ಯಗಳಿಕೆಗೆ ಪ್ರಾರಂಭಿಸಿದರು ಆ ಶೂದ್ರನೂ ಯುವಕನಾಗಿದ್ದ ಹೊನ್ನಪ್ಪಯ್ಯ ಸಿಕ್ಕಂತೆ ಮಗಳ ಬಗ್ಗೆ ಮಾತಾಡುವುದನ್ನು ಕೇಳಿ ಮನಸ್ಸಿನಲ್ಲೇ ಏನೋ ಕನಸ್ಸು ಕಟ್ಟಿಕೊಂಡ ಅಲ್ಲಿಯೇ ಒಳಗೆ ಅಡ್ಡಾಡುತ್ತಿದ್ದ ಸುಮತಿಯನ್ನೂ ನೋಡಿದ್ದ ಪುನಃ ಪುನಃ ಅವಳನ್ನು ನೋಡಬೇಕೆಂದು ಅವನಿಗೆ ಅನಿಸಿತ್ತು

ಸುಮತಿ ಮನೆಯ ಹಿಂದಿನ ಗುಡ್ಡಕ್ಕೆ ಸೊಪ್ಪಿಗೆಂದು ಹೊರಟಳು ಅವನೂ ಅದನ್ನು ನೋಡಿದ್ದ ಅವಳು ಹೋದ ಹಾದಿಯನ್ನು ಗುರುತಿಸಿದ ಅಂತೇ ಅವಳು ಹೊರಟು ಕಾಲು ಗಳಿಗೆಯಲ್ಲೇ ಹೊನ್ನಪ್ಪಯ್ಯನವರೊಡನೆ "ಆಯಿತು ಸ್ವಾಮಿ, ಹಾಗಾದರೆ ನಾನು ಹೋಗುತ್ತೇನೆ" ಎಂದು ಹೇಳಿ ಅವಳು ಹೋದ ಹಾದಿಯಲ್ಲೇ ನಡೆದ ಅವನು ಅತ್ತ ಹೋದದ್ದನ್ನು ಜಾನಕಿಯೂ ನೋಡಿದಳು ಕಡ್ಡಿ ಸಿಕ್ಕರೆ ಗುಡ್ಡ ಮಾಡುವ ಜಾನಕಿಗೆ ಅಷ್ಟೇ ಸಾಕಾಯಿತು "ತಡಿ, ಮಾಡುತ್ತೇನೆ ಇವಳಿಗೆ ಇವತ್ತು!" ಎಂದು ಮನಸ್ಸಿನಲ್ಲೇ ಆಕೆ ಹಲ್ಲು ಕಚ್ಚಿಕೊಂಡಳು

ಸುಮತಿ, ಮನೆಯ ಹಿಂದಿನ ದೂರದ ಗುಡ್ಡದ ಮೇಲೆ ಹೋಗಿ ಸೊಪ್ಪು ತೆಗೆಯುತ್ತ ಇದ್ದಳು ಅವಳ ಮುಂದೆ, ಆಗ ಅವಳು ಮನೆಯಲ್ಲಿ ಕಂಡ ಆಸಾಮಿ ನಿಂತುಕೊಂಡ ನಸು ನಗುವೂ ಅವನ ಮುಖದಲ್ಲಿ ಮೂಡಿತ್ತು. ಸುಮತಿಗೆ ಅವನನ್ನು ನೋಡಿದೊಡನೆ ಹೆದರಿಕೆಯಿಂದ ಮೈ ಮುಳ್ಳೆದ್ದಿತು. ತಲೆ ಕೆಳಗೆ ಹಾಕಿ ಅವನತ್ತ ನೋಡದ ಸೊಪ್ಪು ತೆಗೆಯದೊಡಗಿದಳು. ಅವನಿಂದ ದೂರ ದೂರ ಸೊಪ್ಪು ತೆಗೆಯುತ್ತ ಹೋದಳು

"ನೀವೇಕೆ ದೂರ ಹೋಗುತ್ತೀರಿ?" ಎಂದು ಅವನು ಮುಗುಳ್ನಗೆ ಬೀರುತ್ತ ಅವಳ ಹತ್ತಿರ ಹೋಗಿ ಪುನಃ ನಿಂತನು

"ನೀನಾರು?" ಎಂದಳು ಸುಮತಿ

"ಹಹ್ಹಾ! ನಾನು ಆಗ ನಿಮ್ಮನ್ನು ನೋಡಿದ್ದೆ ನೀವು ನನ್ನನ್ನು ನೋಡಲಿಲ್ಲವೋ? ನೋಡಿದಿರಿ... ನಕ್ಕಿದ್ದಿರಿ ಹೂಂ ಹೂಂ! ನಿಮ್ಮ ತಂದೆಯವರು ನಿಮಗೆ ಕಷ್ಟ ಕೊಡುತ್ತಾರಲ್ಲವೋ?" ಎಂದು ದೇಶಾವರಿಯ ಮಾತುಗಳನ್ನು ಆಡತೊಡಗಿದ ಆಗ ಸುಮತಿಗೆ ಕೈಯಲ್ಲಿರುವ ಕತ್ತಿಯಿಂದ ಅವನನ್ನು ಇರಿಯುವಷ್ಟು ಧೈರ್ಯ, ಸಿಟ್ಟು—ಎಲ್ಲವೂ ಏಕಕಾಲಕ್ಕೆ ಬಂತು.

ಅವಳು ಮಾತಾಡದೆ ಸುಮ್ಮನೆ ನಿಂತಿದ್ದಳು ಮುಖ ಸಿಟ್ಟಿನಿಂದ ಕೆಂಪೇರಿತು ಆದರೆ ಆ ಮನುಷ್ಯ ಬೇರೆಯೇ ತಿಳಿದುಕೊಂಡ

"ನೀನೇನು ಹೆದರುವುದು ಬೇಡ ನಾನು ನಿನಗೆ ಬೇಕಾದ್ದು ಕೊಡ ಲಿಕ್ಕೆ ತಯಾರಿದ್ದೇನೆ ನಿಮ್ಮ ತಂದೆ ಬಹಳ ಸಂಕಟ ಕೊಡುತ್ತಾರಂತೆ ನಾನಿದ್ದೇನೆ ನೀವು ಹೆದರುವುದೇಕೆ ?" ಎಂದು ಮೆಲ್ಲನೆ ಹೇಳುತ್ತ ಆತ ಅಲ್ಲಿ ಕೂತುಬಿಟ್ಟ

"ಒಳ್ಳೆಯ ಮಾತಿನಲ್ಲಿ ಇಲ್ಲಿಂದ ಹೋಗುತ್ತೀಯೋ ಅಥವಾ ನಿನಗೆ ಈ ಕೈಯಲ್ಲಿ ಏನಿದೆ ಕಾಣಿಸುತ್ತದೆಯೋ ಮೂರ್ಖಾ? ನೀಚಾ, ನಿನಗೆ ಹೆಂಡತಿ ಮಕ್ಕಳು ಇಲ್ಲವೋ ? ನಾನು ನಿನ್ನ ತಂಗಿಯ ಸಮಾನ ನಾಯೀ ಸರಿ ಇಲ್ಲಿಂದ ಇಲ್ಲದಿದ್ದರೆ ನಿನ್ನನ್ನು ಈ ಕತ್ತಿಯಿಂದ ಸೀಳು ತ್ತೇನೆ! ನನ್ನ ತಂದೆಯ ಟೀಕೆ ಮಾಡಲು ನೀನಾರು? ತಂದೆಯವರು ನನಗೆ ಬುದ್ಧಿ ಹೇಳುತ್ತಾರೆ ನೀನು ಏನು ಹೇಳಿದರೂ ನನ್ನ ತಂದೆ ನನ್ನ ತಂದೆಯೇ " ಎಂದು ಸುಮತಿ ಕಟುವಾಗಿ ಧೈರ್ಯದಿಂದ ಪುರುಷ ವಾಣಿಯಲ್ಲಿ ಸಿಡಿನುಡಿಗಳನ್ನು ಹಾರಿಸುತ್ತ ಕತ್ತಿ ಎತ್ತಿದಳು ಆ ಮೂರ್ಖ ನಿಗೆ ಅಲ್ಲಿಂದ ಹೇಗೆ ತಪ್ಪಿಸಿ ಹೋಗಬೇಕೆಂದು ತಿಳಿಯಲಿಲ್ಲ ಅವನ ಮೈ ಬೆವರಿತು ಕೊನೆಗೆ ಜೀವ ಕೈಯಲ್ಲಿ ಹಿಡಿದುಕೊಂಡು ಹೇಗಾದರೂ ಅಲ್ಲಿಂದ ಪಾರಾದ ಸುಮತಿ ನೊಪ್ಪಿನ ಹೊರೆ ಹೊತ್ತುಕೊಂಡು ಮನೆಗೆ ಬಂದಳು

"ನನ್ನ ಬಾಳು ನಾಯಿಗಿಂತ ಕಡೆಯಾಗುತ್ತ ಬಂತಲ್ಲ" ಎಂದು ನೊಂದುಕೊಂಡು ಭಾರವಾದ ಹೆಜ್ಜೆ ಹಾಕುತ್ತ ಮನೆಯತ್ತ ಬರುತ್ತಿದ್ದಳಾಕೆ

ಅವಳು ಬಂದೊಡನೆ, "ಇಷ್ಟೇಕೆ ತಡ ? ಗುಡ್ಡದಲ್ಲಿ ಮೀಟಿಂಗ ಇತ್ತೇ?" ಎಂದು ಕೆಟ್ಟ ಕೆರಳಿದ ಕಣ್ಣುಗಳಿಂದ ನೋಡಿ ಕೊಂಕು ನುಡಿದಳು ಜಾನಕಿ

"ಮೀಟಿಂಗ್" ಎಂದರೆ ಸುಮತಿಗೆ ಅರ್ಥವಾಗಲಿಲ್ಲ ಅದನ್ನು ಉಚ್ಚಾರ ಮಾಡಿದವಳಿಗೂ ಅದರ ಅರ್ಥ ಗೊತ್ತಿತ್ತೋ ಇಲ್ಲವೋ! ಸುಮತಿ ಅವಳಿಗೆ ಉತ್ತರವನ್ನೂ ಕೊಡಲಿಲ್ಲ ಆದರೆ ಜಾನಕಿ ಈ ಘಟನೆಯ ಲಾಭವನ್ನು ಪಡೆದು, ಸುಮತಿಯ ಬೆನ್ನು ಇನ್ನೊಮ್ಮೆ ಪುಡಿ ಮಾಡಿಸಬೇಕೆಂದು ಮನಸ್ಸಿ ನಲ್ಲೇ ಮಂಡಿಗೆ ಮಾಡಿದ್ದಳು ಅಂದು ರಾತ್ರಿ ಹೊನ್ನಪ್ಪಯ್ಯನವರಿಗೆ ಈ

ಸುದ್ದಿಯನ್ನು ಹೇಳಿಯೂ ಬಿಟ್ಟಳು

"ನಾಳೆ ರಾತ್ರಿ ಇನ್ನೊಮ್ಮೆ ಮಡಿ ಮಾಡೋಣ" ಎಂದು ಹೊನ್ನಪ್ಪಯ್ಯನವರೂ ತಮ್ಮ ಜಾನಕಿಗ ಹೇಳಿದ್ದರು ಇತ್ತ ಸುಮತಿ ಇಡೀ ರಾತ್ರಿ ನಿದ್ದೆ ಇಲ್ಲದೆ "ತನ್ನ ಗತಿ ಇಲ್ಲಿಯ ವರೆಗೂ ತಲಪಿತಲ್ಲ! ತಾನಿನ್ನು ಬದುಕಿ ಏನು ಫಲ?" ಎಂದು ನೊಂದುಕೊಂಡು, ಬಾವಿಯ ಬಳಿಗೆ ಹೋಗಿ ಹಿಂದಿರುಗಿದ್ದಳಷ್ಟೆ

ಮರುದಿನ ರಾತ್ರಿ ಹೊನ್ನಪ್ಪಯ್ಯನವರು ಇನ್ನೊಮ್ಮೆ ಮಗಳ ಬೆನ್ನು ಹುರಿಯುವವರಿದ್ದರು ಜಾನಕಿಯ ಮಾತುಗಳಿಂದ ಅವರ ಮನಸ್ಸು ಅಲ್ಲೋಲಕಲ್ಲೋಲವಾಗಿತ್ತು

"ಶಂಕರ ದಾಕದಾರನೊಡನೆ ಸೇಲೆ ಮಾಡುತ್ತಿದ್ದಳು ಆದರೆ ಅವನು ಇವಳತ್ತ ಕಣ್ಣು ಬಿಡಲಿಲ್ಲ ಈಗ ಆ ಶೂದ್ರನೊಡನೆ ಸ್ನೇಹ ಬೆಳೆಸಲು ಹೊರಟಿದ್ದಾಳೆ ನಾನು ಸ್ವತಃ ನೋಡಿದ್ದೇನೆ ನನ್ನ ಕಣ್ಣಿನಿಂದ ಮೊದಲು ಅವಳು ಹೋಗುವಾಗ ಅವನಿಗೆ ಕಣ್ಣು ಸನ್ನೆ ಮಾಡಿ ಹೋದಳು ಅವನು ಅವಳು ಹೋದ ಮೇಲೆ ಅವಳ ಹಿಂದೆ ಹೋದ ಪಾಪ ಅವನದೇನು ತಪ್ಪು?" ಎಂದು ಹೊನ್ನಪ್ಪಯ್ಯನವರ ಕಿವಿ ಊದಿದ್ದಳು—ಜಾನಕಿ ಆದರೆ ತಾನು ಏನೆಲ್ಲ ಮಾಡಿದ್ದೇನೆ ಎಂಬ ಅರಿವು ಅವಳಿಗೆ ಆ ಕ್ಷಣದಲ್ಲಿ ಬಾರದೆ ಇರಲಿಲ್ಲ ಅಂತೇ ಹೊನ್ನಪ್ಪಯ್ಯ ಹಾಗೂ ಜಾನಕಮ್ಮ ಇಬ್ಬರೂ ಅಂದಿನ ರಾತ್ರಿ ಯಾವಾಗ ಬಂದೀತು ಎಂದು ಕಾಯುತ್ತಿದ್ದರು

ಅಂದಿನ ಸಂಜೆಯಾಗುತ್ತ ಬಂದಿತ್ತು ಆಗ ಅವರ ಮನೆಯ ಮುಂದಿನ ಗುಡ್ಡದ ರಸ್ತೆಯಿಂದ ಯಾರೋ ಮೂವರು ಬರುವುದು ಕಂಡಿತು—ಜಾನಕಿಗೆ ಅವರಲ್ಲಿ ಇಬ್ಬರ ಗುರ್ತವೂ ಅವಳಿಗೆ ಸಿಕ್ಕಿತು ಕೂಡಲೇ ಓಡೋಡಿ ಹೊನ್ನಪ್ಪಯ್ಯನವರು ಕೂತ ಚಾವಡಿಗೆ ಬಂದಳು

"ಕಾಕಾ, ಕಾಕಾ, ಏಕಕ್ಕಾ" ಎಂದು ಒದರುತ್ತ ಓಡಿ ಬರುವ ಜಾನಕಿಯನ್ನು ಕಂಡು ಹೊನ್ನಪ್ಪಯ್ಯ "ಏನೇ ಏನೇ–ನಿನ್ನದೊಂದು ಸೇಲೆ, ಹೋಗು ಅತ್ತಲಾಗೆ" ಎಂದು ಕೊಂಕುನುಡಿದರು.

"ನನ್ನ ಮನೆಯ ಬೀಗದ ಕೈ ಕೊಡು. ನಾನು ನನ್ನ ಮನೆಗೆ ಓಡುತ್ತೇನೆ .. . . ಬೇಗ ಕೊಡು. ಬೇಗ ಕೊಡು" ಎಂದು ಜಾನಕಿ

ತವಕಿಸಿದ್ದ.

"ಯಾಕೆ? ಏನು ಕತೆ?" ಎಂದರು ಹೊನ್ನಪ್ಪಯ್ಯ

"ಮೊದಲು ಕೊಡು, ಆ ಮೇಲೆ ಎಲ್ಲ" ಎನ್ನುತ್ತ ಜಾನಕಿ ಅವರು ಸೊಂಟಕ್ಕೆ ಸಿಕ್ಕಿಸಿದ ಬೀಗವಕ್ಕ ಗೊಂಚಲಿಗೆ ಕೈ ಹಾಕಲು ಹವಣಿಸಿದಳು ಅವಳ ಕೈಯನ್ನು ಅತ್ತ ಸರಿಸುತ್ತ, "ಯಾಕೆ? ಹೇಳು ನಾನೇ ತೆಗೆದು ಕೊಡುತ್ತೇನೆ" ಎನ್ನುತ್ತ ಹೊನ್ನಪ್ಪಯ್ಯ ಅವಳ ಮನೆಯ ಬೀಗದ ಕೈಯನ್ನು ತೆಗೆದು ಕೊಟ್ಟರು

"ನೋಡಲ್ಲಿ ಓ ಆ ಕುಮರೀ ಬೆಟ್ಟದ ಮೇಲಿನಿಂದ ನಿಮ್ಮ ರಾಘವೇಂದ್ರ, ದಾಕದಾರ ಶಂಕರ ಮತ್ತು ಯಾರೋ ಒಬ್ಬರು ಬರಹತ್ತಿದ್ದಾರೆ ರಾಘವೇಂದ್ರ ಬಂದಾಗ ನಾನಿಲ್ಲಿ ಇರಲಿಕ್ಕೆ ಹೇಗಾಗುತ್ತದೆ? ಅವನು ಗಟ್ಟಕ್ಕೆ ಹೋಗುವ ತನಕ ನಾನು ನನ್ನ ಮನೆಯಲ್ಲೇ ಇರುತ್ತೇನೆ ಮತ್ತು ಎಲ್ಲ ಗೊಂದಲವಾದೀತು" ಎಂದು ಜಾನಕಿ ತನ್ನ ಮನೆಯತ್ತ ಓಡಿದಳು

"ಆ ಇನ್ನೊಬ್ಬ ಯಾರಪ್ಪಾ?" ಎಂದು ಹೊನ್ನಪ್ಪಯ್ಯ ಅತ್ತ ದೃಷ್ಟಿ ತೂರಿ, ಬಗ್ಗಿ ಬಗ್ಗಿ—ಮರಗಳ ಎಡೆಯಿಂದ ನೋಡುತ್ತಿದ್ದರು

ಅವನು ಶಿವರಾಯ, ಸುಮತಿಯ ಗಂಡನೆಂದೂ ಅವರಿಗೆ ಗೊತ್ತಾ ಯಿತು ಆಗ "ಸುಮತೀ" "ಸುಮತೀ" ಎಂದು ಕರೆದರು

ಅಂದಿನ ಆ "ಸುಮತೀ" ಎನ್ನುವ ಹೆಸರು ಆ ತಂದೆಯ ಬಾಯಿ ಯಿಂದ ಆ ಅಬಲೆ ಕೇಳುವಾಗ ಸ್ವರ್ಗ ಸುಖಕ್ಕೂ ಮಿಗಿಲಾದ ಆನಂದದಲ್ಲಿ ತೇಲಾಡಿದಳು ಅಷ್ಟು ನಯವಾಗಿತ್ತು ಅವರ ಕಂಠ ತಂದೆ ಕರೆಯುವು ದನ್ನು ಕೇಳಿದೊಡನೆ ಮನೆಗೆಲಸದಲ್ಲಿ ಮಗ್ನಳಾಗಿದ್ದ ಅವಳು ಓಡಿ ಹೊರಗೆ ಬಂದು "ಯಾಕೆ ಅಪ್ಪಾ?" ಎಂದು ನಗು ಮುಖದಿಂದ ಕೇಳಿದಳು ಒಂದು ಕ್ಷಣ ಹೊನ್ನಪ್ಪಯ್ಯನವರೂ ತನ್ನ ಮಗಳು ತೃಪ್ತ ಮನದಿಂದ ಪ್ರಫುಲ್ಲ ಳಾಗಿ ತನ್ನೆದುರು ಬಂದು ನಿಂತದ್ದನ್ನು ನೋಡಿದರು ಇವಳು ಇಷ್ಟು ಸುಂದರಿ—ನನ್ನ ಮಗಳೇ! ರೂಪಸುಂದರಿ ಇವಳು! ಇವಳಲ್ಲಿ ಇಷ್ಟು ಗುಣ ಸೌಂದರ್ಯವೂ ತುಂಬಿದೆಯೇ! ನಾನೆಂಥ ಮರುಳ! ಎಂಬ ವಿಚಾರ ಲಹರಿಯೂ ಹರಿಯದಿರಲಿಲ್ಲ—ಅವರ ತಲೆಯಲ್ಲಿ ಹಿಂದೆ ತಾನು ಅವಳನ್ನು ಸಂಕಟಪಡಿಸಿದ ಕಠೋರ ಸನ್ನಿವೇಶವೂ ಅವರ ಒಳಗಣ್ಣಿಗೆ ಕಂಡಿತು

ಮರುಗಿದರು

"ರಾಘವೇಂದ್ರ ಮತ್ತು ನಿನ್ನ ಗಂಡ—ಗಟ್ಟದಿಂದ ಬರಹತ್ತಿದ್ದಾರೆ ಬೇಗ ಎರಡು ಮೂರು ತಂಬಿಗೆ ನೀರು ತಾ" ಎಂದು ಮಗಳಿಗೆ ಹೇಳಿದರು—ಹೊನ್ನಪ್ಪಯ್ಯ

ಸುಮತಿ 'ನಿನ್ನ ಗಂಡ' ಎಂಬ ಶಬ್ದ ಕಿವಿಗೆ ಬಿದ್ದೊಡನೆ 'ಹಾ! ರಾಮಾ' ಎಂದು ತನ್ನ ಇಷ್ಟ ದೇವನನ್ನು ನೆನೆದಳು ಕಿಟಕಿಯಿಂದ ಹೊರಗೆ ನೋಡುವಾಗ ಮೊದಲು ಅವಳಿಗೆ ಶಂಕರನ ಮುಖ ಕಂಡಿತು ಅವನ ಹಿಂದೆ—ಅವಳ ಸೋದರ ನಡೆದು ಬರುತ್ತಿದ್ದ ಕೊನೆಯಲ್ಲಿ ಒಂದು ಮನುಷ್ಯ ಜಾತಿಯ ವಿಕಟರೂಪ, ಎಲುಬಿನ ಹಂದರ—ಹೇಗೋ ಕಾಲು ಹಾಕಿಕೊಂಡು ನಡೆದು ಬರುತ್ತಿತ್ತು ಅವನೇ ತನ್ನ ಗಂಡನೆಂದು ಬಗೆದಳು ಅವನ ರೂಪ, ನಡಿಗೆಗಳನ್ನು ನೋಡಿ ಒಮ್ಮೆ ಅವಳಿಗೆ "ಇಂಥ ಗಂಡನಿಗಿಂತ ಈಗಿದ್ದ ಸ್ಥಿತಿಯೇ ಲೇಸು" ಎಂದೂ ಅನಿಸಿರಬಹುದು ಆದರೂ ಅವಳು ಸಹನ ಶೀಲತೆಯ ಪರಮಾವಧಿಯ ಮಟ್ಟಕ್ಕೆ ಏರಿ "ಅವರೇ ಆದರೂ ನನಗೆ ಪತಿದೇವರು" ಎಂದು ಮನಸ್ಸಿಗೆ ಧೈರ್ಯ ಹೇಳಿ ತೃಪ್ತಿಪಟ್ಟುಕೊಂಡಳು

ಅವರು ಮೂವರೂ ಅಂಗಳಕ್ಕೆ ತಲುಪಿಯಾಯಿತು ಆಗ ಸುಮತಿ ಒಂದು ತಂಬಿಗೆ ನೀರು ಒಯ್ದು ಆ ತನ್ನ ಪತಿಯ ಕಾಲುಗಳಿಗೆ ಅಭಿಷೇಕ ಮಾಡಿದಳು ಅವಳ ಕಣ್ಣುಗಳೂ ಧಾರಾಕಾರವಾಗಿ ಬಿಸಿನೀರು ಸುರಿಸಿದವು ಆದರೆ ಅದನ್ನೆಲ್ಲ ಆ ಮಂದಮತಿಯಾದ ಶಿವರಾಯ ಅರಿಯಲಿಲ್ಲ ಅವನು ಅವಳ ಸೌಂದರ್ಯ ನೋಡಿ, "ಇವಳು ನನ್ನ ಹೆಂಡತಿಯೇ? ಇದು ಕನಸಿರಬಹುದೇ!" ಎಂದು ಮನಸ್ಸಿನಲ್ಲೆ ಗಾಬರಿಪಟ್ಟು ಪ್ರಶ್ನೆ ಮಾಲೆಗಳನ್ನು ಕಟ್ಟುತ್ತಿದ್ದ

ಸುಮತಿಗೆ ಗಂಡನ ಕಾಲುಗಳಿಗೆ ನೀರು ಹಾಕಲು ಹೋದಾಗ, ಕೆಲವು ವರುಷಗಳ ಹಿಂದೆ—ಶಂಕರನ ಕಾಲಿಗೆ ನೀರು ಹಾಕಿ—ಮನಸ್ಸು ನೊಂದುಕೊಂಡ ಸನ್ನಿವೇಶ ಕಣ್ಣಿನ ಮುಂದೆ ಕಟ್ಟಿದಂತಾಯಿತು ಇಂದಾದರೂ ಅವಳು ಶಿವರಾಯನ ಕಾಲಿನ ಆರು ಬೆರಳುಗಳನ್ನು ನೋಡಿ—"ಇವನು ತನ್ನ ಪತಿ" ಎಂದು ನಿರ್ಧರಿಸಿಯೇ ಅವನ ಕಾಲಿಗೆ ನೀರು ಹೊಯ್ದಿದ್ದಳು ಶಿವ

ರಾಯ ಮಾತ್ರ ಸುಮತಿಯತ್ತ ನೋಡುವ ರೀತಿ ವಿಚಿತ್ರವಾಗಿತ್ತು ಅವನನ್ನು ನೋಡಿದೊಡನೆ ಅವಳಿಗೆ ನಿನ್ನೆಯ ದಿನ ಗುಡ್ಡದಲ್ಲಿ ಆ ನೀಚನ ವಕ್ರ ದೃಷ್ಟಿಯ ನೆನಪು ಆಗುತ್ತಿತ್ತು ಇವತ್ತು ಶಿವರಾಯನೂ ನಿನ್ನೆ ಆ ನೀಚ ಎಲ್ಲಿ ಕೂತಿದ್ದನೋ ಅಲ್ಲಿ ಕೂತಿದ್ದ ಸುಮತಿಯ ಮನಸ್ಸು ದುಃಖದಿಂದ ಬೇಯತೊಡಗಿತು

ಒಳಗೆ ಹೋಗಿ ಅಳುತ್ತ ಕುಳಿತುಕೊಂಡಳಾಕೆ ಮನೆಗೆ ಬಂದವರಿಗೆ ಎಲ್ಲ ಉಪಚಾರವನ್ನು ಹೊನ್ನಪ್ಪಯ್ಯನವರೇ ಮಾಡಿದರು ಸುಮತಿಯನ್ನು ಬಿಟ್ಟರೆ, ನಮ್ಮಕ್ಕ ಅಲ್ಲಿ ಯಾರೂ ಇರಲಿಲ್ಲ ಅವಳು ಯಾಕೋ ಉದಾಸೀನಳಾಗಿ ಇದ್ದಾಳೆಂದು ಹೊನ್ನಪ್ಪಯ್ಯ ತಿಳಿದರು ಆದರೆ ಸುಮತಿ ಹೆಚ್ಚು ಹೊತ್ತು ಹಾಗೆ ಕೂಡಲಿಲ್ಲ ಹುದುಗಲಾರದ ದುಃಖ ಮುಚ್ಚಿಕೊಂಡು ಅವಳು ಪುನಃ ಕೆಲಸದಲ್ಲಿ ಕೂಡಿಕೊಂಡಳು ಹೊನ್ನಪ್ಪಯ್ಯನವರು, ಶಂಕರ ಮತ್ತು ತನ್ನ ಬಂಧುಗಳೊಡನೆ ಮಾತಾಡುತ್ತ ಕುಳಿತರು

ಶಂಕರನಿಗೆ ಪುಣೆಯಲ್ಲೇ ಶಿವರಾಯನ ಭೇಟಿಯಾಯಿತು ಅಲ್ಲಿಂದ ಅವನನ್ನು ಧಾರವಾಡಕ್ಕೆ ಕರೆತಂದವನೂ ಅವನೇ ಆದರೆ ರೈಲು ಪ್ರಯಾಣದ ಖರ್ಚನ್ನು ರಾಘವೇಂದ್ರರಾಯನೇ ವಹಿಸಿದ್ದ ಹಾಗೆಂದು ಶಿವರಾಯನಲ್ಲ ಹಣವಿರಲಿಲ್ಲವೆಂದಲ್ಲ ಅವನು ಕೊಡುತ್ತೇನೆಂದರೂ ಶಂಕರ ಅವನಿಂದ ಹಣ ತಗೆದುಕೊಳ್ಳಲಿಲ್ಲ ಒಂದೆರಡು ದಿನ ಶಂಕರ ಅವನೊಡನೆ ಪುಣೆಯಲ್ಲೇ ಇದ್ದ ಸ್ವಲ್ಪ ಹಣವನ್ನು ಕೊಡಿಸಿದ್ದ ಇನ್ನೂ ಹೆಚ್ಚು ದಿನಗಳನ್ನು ಕಳೆದರೆ ಶಿವರಾಯ ಎಲ್ಲಿಗಾದರೂ ಓಡಿಹೋದಾನೆಂಬ ಹೆದರಿಕೆಯೂ ಶಂಕರನಿಗಿತ್ತು ಆದಕ್ಕಾಗಿ ಅವನನ್ನು ಕರೆದುಕೊಂಡು ಬೇಗನೆ ಬರಬೇಕಾಯಿತು ಅವನನ್ನು ಅಲ್ಲಿಂದ ಕರೆದು ತರಲು ಶಂಕರ ಪಟ್ಟ ಪ್ರಯತ್ನ ಅನ್ಯಾದೃಶವಾಗಿತ್ತು ಹೇಗಾದರು ಮಾಡಿ ಅವನನ್ನು ಪುಣಾ ಬೆಂಗಳೂರು ಎಕ್ಸಪ್ರೆಸ್ ಹತ್ತಿಸಬೇಕಾದರೆ ಶಂಕರನಿಗೆ ಕುತ್ತಿಗೆಗೆ ಬಂತು

ರೈಲು ಪ್ರಯಾಣ ಮಾಡುವಾಗ ಶಂಕರ ನೂರಾರು ಪ್ರಶ್ನೆಗಳನ್ನು ಅವನಿಗೆ ಕೇಳಿದ್ದ ಶಂಕರನ ಮನಸ್ಸಿನಲ್ಲಿ ಸುಮತಿಯ ಗಂಡನಾಗಲು ಶಿವರಾಯ ಯೋಗ್ಯನೆನಿಸಲಿಲ್ಲ ಅಷ್ಟೇ ಅಲ್ಲ ಅವನು ಆ ಹೆಣ್ಣು ಜೀವವನ್ನು ಮಣ್ಣು ಪಾಲು ಮಾಡುತ್ತಾನೆಂದೂ ಅವನಿಗೆ ಖಂಡಿತವಾಯಿತು ಇದೆಲ್ಲದ

ಕ್ಕಿಂತ ಶಂಕರನಿಗೆ ಇನ್ನೊಂದು ಗುಪ್ತವಾದ ಸಂಗತಿ ಬಹಳ ಯೋಚನೆಗೀಡು ಮಾಡಿತು ಎಷ್ಟೆಂದರೂ ಶಂಕರ ವೈದ್ಯನಲ್ಲವೇ? ಶಿವರಾಯನ ನಡಿಗೆ, ದೇಹದ ಕಟ್ಟು—ಮುಖದ ಲಕ್ಷಣಗಳ ಮೇಲಿಂದ ಅವನಿಗೆ ಗುಹ್ಯರೋಗವಿದೆ ಯೆಂದು ಶಂಕರನಿಗೆ ಸಂಶಯ ಬಂತು ಅಂತೇ ಅವನ ಹಿಂದಿನ ಜೀವನದ ಕತೆ ಶಂಕರನಿಗೂ ಗೊತ್ತಿತ್ತು ಹೀಗಾಗಿ ಶಂಕರ ಸಮಸ್ಯೆಗೆ ಈಡಾದ ಇವ ನನ್ನು ಕರೆದೊಯ್ದು ಅವಳ ಬಾಳನ್ನು ಹಾಳು ಮಾಡುವ ಪಾಪಕ್ಕೆ ತಾನೆಲ್ಲಿ ಗುರಿಯಾಗುತ್ತೇನೋ ಎಂದು ಯೋಚನೆ ಮಾಡಿದ

ಇತ್ತ ಯಾವುದೋ ಒಂದು ಸಣ್ಣ ಮನಸ್ಸು "ಸುಮತಿ ನಿನ್ನವಳು" ಎಂದು ಅವನನ್ನು ಕೆಣಕುತ್ತಲೂ ಇತ್ತು ಆದರೆ ಅದರತ್ತ ವಿಶೇಷ ಲಕ್ಷ್ಯ ಆತನೂ ಕೊಡಲಿಲ್ಲ

ಎಷ್ಟೆಂದರೂ ಶಿವರಾಯ ಸುಮತಿಯ ಗಂಡ ಅವನೇ ಅವಳ ಒಡೆಯ ತಾನು ಇಲ್ಲಿಯ ವರೆಗೆ ಅವಳೊಡನೆ ಅಷ್ಟು ಸಲುಗೆಯಿಂದ ವರ್ತಿಸಬಾರದಿತ್ತು ಎನ್ನುವ ವಿಚಾರವೂ ಅವನಿಗೆ ಬಂತು ಆದರೆ ಅದೇ ಹೊತ್ತಿಗೆ "ನಾನೇನು ಅವಳನ್ನು ಮಲಿನ ಮಾಡಲಿಲ್ಲ ಅವಳು ನನ್ನೊಡನೆ ಪ್ರೇಮದಿಂದ ನರ್ತಿಸಿ ದ್ದಳು ನಾನು ಕೂಡಾ ಅವಳನ್ನು ಪ್ರೀತಿಸಿದ್ದೆ ಎಂದ ಮೇಲೆ ನನ್ನದೇನು ತಪ್ಪು ಇಲ್ಲ" ಎಂದೂ ಮತ್ತೊಂದು ವಿಚಾರಧಾರೆ ಅವನನ್ನು ಸಮಾಧಾನ ಮಾಡುತ್ತಿತ್ತು

ಹಿಂದೆ ಆದದ್ದೆಲ್ಲ ಆಗಿಹೋಯಿತು ಇನ್ನಾದರೂ ಅವಳ ಪತಿಯನ್ನು ಅವಳಿಗೊಪ್ಪಿಸಿದರೆ ನನಗೂ ಪುಣ್ಯ ಬಂದೀತು—ಎಂದು ನಿರ್ಧರಿಸಿದ ಆದರೆ ಅದೇ ಗಳಿಗೆಗೆ ಪುನಃ "ಅವಳ ಜೀವ ಹಾಳಾದರೆ .. ..ರೋಗಕ್ಕೆ ತುತ್ತಾದರೆ

ಏನು ಗತಿ?" ಎಂದೂ ಅವನ ಮನಸ್ಸು ತಳಮಳಿಸುತ್ತಿತ್ತು

ಕಾರಣ ರೈಲಿನಲ್ಲೇ "ನಾನೊಂದು ಪ್ರಶ್ನೆ ಕೇಳುತ್ತೇನೆ ಶಿವರಾಯಾ ಅದಕ್ಕೆ ನೀನು ಪ್ರಾಮಾಣಿಕತನದಿಂದ ನಿಜವಾದ ಉತ್ತರ ಕೊಡಬೇಕು" ಎಂದು ಕೇಳಿದ ಶಂಕರ

"ಹೂಂ" ಎಂದನು ಶಿವರಾಯ

"ನಿನಗೆ ಗುಹ್ಯರೋಗವಿದೆಯೇ?"

ಇದಕ್ಕೆ ಉತ್ತರಿಸುವುದು ತನ್ನ ಮರ್ಯಾದೆಗೆ ಸರಿಯಲ್ಲವೆಂದೂ ಎನಿ

ಸಿತು ಶಿವರಾಯನಿಗೆ ಆದ್ದರಿಂದ ಒಂದು ವಿಧನಾಗಿಯೇ ಹೇಳಿದ " ಹಿಂದೆ ಒಮ್ಮೆ ಏನೋ ಆಗಿತ್ತು ಈಗ ಅದೆಲ್ಲ ವಾಸಿಯಾಗಿದೆ ಆದರಿಂದ ಯಾವ ಅಪಾಯವೂ ಇಲ್ಲವೆಂದಿದ್ದಾರೆ ಡಾಕ್ಟರರು ಹಲವಾರು ಇಂಜೆಕ್ಷನ್ನೂ ಕೊಟ್ಟಿದ್ದರು "

"ಹೂಂ!" ಎಂದು ನಿಟ್ಟಿಸುರು ಬಿಟ್ಟು ಶಂಕರನೆಂದ " ಬಹುಶಃ ಇನ್ನೂ ಪೂರ್ಣ ಅದು ಗುಣವಾಗಿಲ್ಲವೆಂದೂ ಕಾಣುತ್ತೆ "

"ಛೇ ಛೇ ಈಗ ಅದರ ಬೀಜವೂ ಇಲ್ಲ "

"ಏನೇ ಆಗಲಿ "

"ಏನು ?"

"ದಯವಿಟ್ಟು ನೀನು ಇನ್ನೊಮ್ಮೆ ಯೋಗ್ಯ ವೈದ್ಯರಿಂದ ಔಷಧ ತೆಗೆದುಕೊಂಡು ಚಿಕಿತ್ಸೆ ಮಾಡಿಕೊಂಡು ಸುಮತಿಯ ಪ್ರೇಮಕ್ಕೆ ಪಾತ್ರನಾಗು "

"ಯಾಕೆ ? ನೀನೊಂದು ವೈದ್ಯಕೀಯ ಕಲಿತಿದ್ದಿಯೆಂದು ನನ್ನಿಂದಲೂ ಹಣ ಸುಲಿಯಬೇಕೆಂಬ ಆಸೆಯೇ ?" ಎಂದು ಶಿವರಾಯ ನಗಯಲ್ಲೆ ಮಾತು ತೇಲಿಸಲು ಹವಣಿಸಿದ

"ಹಾಗಲ್ಲ ಶಿವರಾಯಾ, ನಾನು ನಿನ್ನ ಮೇಲಿನ ದ್ವೇಷದಿಂದ ಹೇಳುವುದಿಲ್ಲ ನೋಡು, ನಿನ್ನ ಬೇನೆ ಅವಳಿಗೂ ತಾಗಿತೆಂದರೆ ವಿನಾಕಾರಣ ಅವಳನ್ನೂ ದುಃಖಕ್ಕ ಈಡು ಮಾಡಿದಂತಾಗುತ್ತದೆ ಅವಳ ಜೀವನವೂ ಆದರಿಂದ ಹಾಳಾಗುವ ಸಂದರ್ಭವಿದೆ ಆದ್ದರಿಂದ ನಾನು ಹೇಳಿದಂತೆ ಮಾಡುವುದು ಸುಕರ "

"ಛೇ, ಛೇ ದಯವಿಟ್ಟು ಈ ಸುದ್ದಿ ಯಾರಿಗೂ ಹೇಳಬೇಡ ಮಹಾರಾಯಾ .. ಹಾಗಂದು ತಿಳಿದಿದ್ದರೆ ನಾನು ಊರಿಗೆ ನಿನ್ನೊಡನೆ ಬರುತ್ತಿದ್ದಿಲ್ಲ ದೇವರಾಣೆಯೆಂದರೂ ನನಗೆ ಯಾವ ಗುಹ್ಯರೋಗವೂ ಇಲ್ಲ" ಎಂದು ಮುಖದಲ್ಲಿ ಕಪಟತನದ ಪರದೆ ಇಳಿಸಿ ಹೇಳಿದ—ಶಿವರಾಯ ಆದರೂ ಶಂಕರನಿಗೆ ಅವನ ಆಣೆಯ ಮೇಲೆ ವಿಶ್ವಾಸವಿರಲಿಲ್ಲ ಹೇಗಾದರೂ ಅವನನ್ನು ಕೂಡಿಕೊಂಡು—ಧಾರವಾಡಕ್ಕೆ ಬಂದು ಅಲ್ಲಿಂದ ರಾಘವೇಂದ್ರರಾಯನೂ ಅವರೊಡನೆ ಬಂದನು—ಹೀಗೆ ಮೂವರೂ ಕೂಡಿ ಊರಿಗೆ ತಲುಪಿದರು

ಊರಿಗೆ ಬಂದಮೇಲೆ ಶಂಕರ ತನ್ನ "ಧರ್ಮಾರ್ಥ ದವಾಖಾನೆ"ಯನ್ನು ಯಾವ ಆಡಂಬರವಿಲ್ಲದೆ ಪ್ರಾರಂಭ ಮಾಡಿದ ಎಷ್ಟೋ ಗುಹ್ಯರೋಗದಿಂದ ಬಳಲುವ ತರುಣ–ತರುಣಿಯರಿಗೆ ಅವನು ನಿರ್ದಾಕ್ಷಿಣ್ಯದಿಂದ ಮಾತಾಡಿ— ಔಷಧ ಕೊಡುತ್ತಿದ್ದ ಕೆಲವೇ ತಿಂಗಳುಗಳಲ್ಲಿ ಶಂಕರ ಸುಪ್ರಸಿದ್ಧ ವೈದ್ಯನಾದ ಗುಹ್ಯ ರೋಗಿಗಳು ಲೆಕ್ಕವಿಲ್ಲದಷ್ಟು ಬಂದು ಅವನಿಗೆ ಹಣ ಎರೆಯಲು ಪ್ರಾರಂಭಿಸಿದರು ಆದರೆ ಅವನು ಸಿಕ್ಕಂತೆ ಹಣ ಸುಲಿಯುವ ಗೋಜಿಗೆ ಹೋಗಲಿಲ್ಲ ಅವಶ್ಯ ಬಿದ್ದಾಗ ಡಾ ಕೃಷ್ಣರಾಯರ ಸಲಹೆಯನ್ನೂ ಕೇಳುತ್ತಿದ್ದ ಅವನ ವಿನಯ ನೋಡಿ ಕೃಷ್ಣರಾಯರಿಗೂ ಆನಂದವಾಗಿತ್ತು ಒಟ್ಟಿನಲ್ಲಿ ಶಂಕರ, ಡಾಕ್ಟರ ಶಂಕರರಾಯನಾಗಿ ಕೀರ್ತಿ ಗಳಿಸಿ ಜನಸೇವೆ ಮಾಡತೊಡಗಿದ ಅವನ ತಾಯಿ ತೀರ ಮುದುಕಿಯಾಗಿದ್ದಳು ಆದರೂ ಮಗನಿಗೆ ಅಡುಗೆ ಮಾಡಿ ಹಾಕುತ್ತಿದ್ದಳು ಅವಳು ಹೇಳುತ್ತಿದ್ದ ಮಾತೆಂದರೆ "ನೀನು ಯಾವಾಗ ಮದುವೆಯಾಗುತ್ತಿ ಶಂಕರಾ ? " ಎಂಬುದು ಒಂದೇ ಒಂದು.

ರಾಘವೇಂದ್ರರಾಯನೂ ಊರಲ್ಲಿ ಬಹಳ ದಿವಸ ಇರುವಂತೆ ಇರಲಿಲ್ಲ ಯಾಕಂದರೆ ಅವನ ದಂಧೆ ಧಾರವಾಡದಲ್ಲಿ ಅವನು ಇಲ್ಲದಿದ್ದರೆ ಸರಿಯಾಗಿ ನಡೆಯುವುದು ಕಷ್ಟವಾಗಿತ್ತು ಹೀಗಾಗಿ ಊರಿಗೆ ಬಂದು ಹತ್ತಾರು ದಿನಗಳಲ್ಲೇ ಶಿವರಾಯನ ಪ್ರಸ್ತದ ಶಾಸ್ತ್ರ ಮುಗಿಸಿಯೂ ಬಿಟ್ಟರು ಖರ್ಚನ್ನೆಲ್ಲಾ ತಾವೇ ವಹಿಸಿಕೊಂಡರು ಅಲ್ಲದೆ " ನಿಮಗೊಂದು ಹೊಟೇಲು ಮಾಡಿಕೊಡುತ್ತೇನೆ ಅದನ್ನು ನಡೆಸಿಕೊಂಡು ಸುಖವಾಗಿ ಇರಬಹುದು" ಎಂದು ಶಿವರಾಯನಿಗೆ ಮುಂದಿನ ದಾರಿಯನ್ನೂ ತೋರಿಸಿಕೊಡುವ ಭರವಸೆಯನ್ನೂ ಇತ್ತಿದ್ದ

ಅಣ್ಣನ ವಿಶಾಲ ಹೃದಯನ್ನು ನೋಡಿ ಸುಮತಿ ಬೆರಗು ಪಟ್ಟಿದ್ದಳು. ತನ್ನ ತಂದೆ ಕೊಟ್ಟ ಕಷ್ಟಗಳನ್ನು ಅವನೊಡನೆ ಹೇಳುವ ಸಾಹಸಕ್ಕೆ ಅವಳು ಹೋಗಲಿಲ್ಲ ಆದರೆ ಅಣ್ಣಪ್ಪಯ್ಯ ಅದನ್ನೆಲ್ಲ ರಾಘವೇಂದ್ರನಿಗೆ ವರದಿ ಮಾಡಿದರು ಅಲ್ಲದೆ " ಮೊದಲು ಆ ಹಾಳು ಜಾನಕಾಂಬೆಯನ್ನು ಸವತೀ ಕೆರೆಗೆ ಓಡಿಸು ಎಂದರೆ ಎಲ್ಲ ಸರಿ ಹೋಗುತ್ತದೆ ಏನದು ಹೊಲಸು ? ಈ ಪ್ರಾಯದಲ್ಲೂ ಹುಡುಗಾಟಿಕೆ ಮಾಡುವುದು ? " ಎಂಬ ಉಪದೇಶ

ವನ್ನು ಮಾಡಿದ್ದರು—ಅಣ್ಣಪ್ಪಯ್ಯ

ಅಷ್ಟೇ ಅಲ್ಲ "ನಿನಗೆ ಹೆದರಿಕೆಯಾಗುತ್ತಿದ್ದರೆ, ನಾನೂ ನೀನೂ ಕೂಡಿ ಅವಳನ್ನು ಭೇಟಿಯಾಗಿ ಎಲ್ಲ ವಿಲಾವರಿ ಮಾಡುವ" ಎಂದೂ ಅಣ್ಣಪ್ಪಯ್ಯ ಹೇಳಲು ಮರೆಯಲಿಲ್ಲ "ಆಗಬಹುದು" ಎಂದು ರಾಘವೇಂದ್ರನೂ ಹೇಳದ ಮತ್ತು ಮರುದಿನ ಆ ಜಾನಕಿಯ ಕುಟೀರಕ್ಕೆ ಅಣ್ಣಪ್ಪಯ್ಯ ಹಾಗೂ ರಾಘವೇಂದ್ರ ಹೋಗಿ ಎಲ್ಲ ವಿಲಾವರಿ ಮಾಡಿದರು ಅಣ್ಣಪ್ಪಯ್ಯ ಹಿರಿಯರಂತೆ ಬುದ್ಧಿ ಹೇಳಿದರು. ಆದರೆ ಅವರ ಮನಸ್ಸಿನಲ್ಲೂ "ಫಕ್ಕನೆ ನನ್ನ ಕೊಳಕು ಎಲ್ಲಿ ಬಯಲಿಗ ತರುತ್ತಾಳೋ" ಎಂಬ ದುಗುಡವೂ ಇರದೆ ಹೋಗಿರಲಿಲ್ಲ ಅವಳು ಯಾವ ಪುಣ್ಯದಿಂದಲೋ ಆ ವಿಷಯ ಎತ್ತಲಿಲ್ಲ ಹೀಗೆ ರಾಘವೇಂದ್ರ ಊರಿಗೆ ಬಂದವನು ಜಾನಕಮ್ಮನವರನ್ನು ಪುನಃ ಸವತೀಕೆರೆಗೆ ರಾಜಿಯಿಂದ ಕಳುಹಿಸಿದ ತಾನೂ ಗಟ್ಟಕ್ಕೆ ಹೋದ

ಮಗನ ಮಾತುಗಳು ಹೊನ್ನಪ್ಪಯ್ಯನವರ ಮನಸ್ಸಿಗ ಹತ್ತಿದವು ಅವನು "ನೀವು ಇಲ್ಲಿ ಹೀಗೆ ಮಾಡಿದರೆ ನಾವು ಅಲ್ಲಿ ಮುಖ ತೋರಿಸಿಕೊಂಡು ಅಡ್ಡಾಡುವುದು ಕಷ್ಟವಾಗುತ್ತದೆ ಇನ್ನೇನು? ಸುಮತಿಯ ಚಿಂತೆ ತಪ್ಪಿದ ಹಾಗಾಯಿತು ಅವಳ ಗಂಡನಿಗೆ ಒಂದು ದಂಧೆ ದೊರಕಿಸಿಕೊಟ್ಟು, ಅವರನ್ನು ಒಳ್ಳೆಯ ದಾರಿಗೆ ಹಚ್ಚಬೇಕೆಂದು ಮಾಡಿದ್ದೇನೆ ಅಲ್ಲಿಯ ವರೆಗೆ ಅವರಿಬ್ಬರೂ ಇಲ್ಲಿಯೇ ಇರಲಿ" ಎಂದು ಹೇಳಿದ್ದ "ಇಷ್ಟು ದಿನ ನಮಗೆ ಅವಳು ಭಾರವಾಗಲಿಲ್ಲ ಇನ್ನು ಒಂದು ತಿಂಗಳ ಮಟ್ಟಿಗೆ ಅವಳನ್ನೇಕೆ ಆ ಅತ್ತೆಯ ಮನೆಗೆ ಕಳುಹಿಸುವುದು?" ಎಂದು ಹೊನ್ನಪ್ಪಯ್ಯನವರೂ ಉತ್ತರಿಸಿದ್ದರು

ಜಾನಕಿಯ ವಿಷಯದಲ್ಲಿ ಹೊನ್ನಪ್ಪಯ್ಯನವರು ಅಸಹಾಯರಾಗಿದ್ದರು ಮಗನ ಮಾತುಗಳನ್ನು ಮೀರುವುದು ಅವರಿಗೆ ಕಠಿಣವೆನಿಸಿತು ಅಲ್ಲದೆ ಅವಳಾದರೂ ಇಲ್ಲಿರುವುದು ಅಸಾಧ್ಯವಾಗಿತ್ತು ಯಾಕಂದರೆ ಅವಳಿಗೆ ಅತ್ತ ಸವತೀಕೆರೆಯ ಬಾಂಧವರೂ ಛೀಮಾರಿ ಹಾಕಿ ಮನೆಯೊಳಗೆ ಪ್ರವೇಶ ಕೊಟ್ಟರು ಇತ್ತ ಅಣ್ಣಪ್ಪಯ್ಯ ಅವಳ ಮರ್ಯಾದೆ ಉಳಿಯುದಂತೆಯೂ ಬುದ್ಧಿ ಹೇಳಿದ್ದರಂತೆ ಕಾರಣ ಅವಳಿಗೂ ಮನಸ್ಸಿಗೆ ಅಸಮಾಧಾನವಾಗಿ ತನ್ನೂರಲ್ಲೇ ಸಾಯುವುದು ಲೇಸೆಂದು ಅಲ್ಲಿಗೆ ಹೋದಳೆನ್ನಬಹುದ

ಹೊನ್ನಪ್ಪಯ್ಯನವರೂ ಮೊದಲಿನ ಸೊಕ್ಕನ್ನು ತೊರೆದರು ಮಗಳ ಮೇಲೆ ಮತ್ತೆ ಪ್ರೀತಿ ಆರಂಭವಾಯಿತು ಅವಳ ಕೈಯ ಪಕ್ವಾನ್ನಗಳು ಅವರಿಗೆ ರುಚಿ ಹತ್ತದಿದ್ದರೂ ಕೆಲವು ದಿವಸ ರೂಢಿಮಾಡಿ ರುಚಿಗೊಳಿಸಿದರು ಅವರು ಹೇಳಿದಂತೆ ನಾಲಗೆಯೂ ಕೇಳಿತು ಅಂದಿನಿಂದ ಅವರು ದೇವರ ಭಕ್ತಿಯಲ್ಲಿ ಕಾಲ ಕಳೆಯುವ ಹವ್ಯಾಸಕ್ಕೆ ಬಿದ್ದರು ಒಂದೆರಡು ರುದ್ರಾಕ್ಷಿಯ ಹಾಗೂ ತುಳಸಿಯ ಮಣಿಗಳ—ಜಪಸರಗಳನ್ನು ಧಾರವಾಡದಿಂದ ತರಿಸಿದರು ಜಪವೂ ಪ್ರಾರಂಭವಾಯಿತು ಗಟ್ಟದಿಂದ ಮಗನ ಕಾಗದಗಳು ಬರುತ್ತಲೇ ಇದ್ದವು " ಇನ್ನು ಸ್ವಲ್ಪ ದಿವಸಗಳಲ್ಲಿ ಒಂದು ಅಂಗಡಿಯನ್ನು ಹಿಡಿಯುವವನಿದ್ದೇನೆ ಅದು ನನ್ನ ವಶವಾದೊಡನೆ ಪತ್ರ ಬರೆಯುತ್ತೇನೆ ಕೂಡಲೇ ಶಿವರಾಯರನ್ನು ಕಳುಹಿಸಿರಿ " ಎಂದು ಇತ್ತೀಚಿನ ಪತ್ರದಲ್ಲಿ ಬರೆದಿದ್ದ

ಆ ಪತ್ರವನ್ನು ಓದಿ ಹೊನ್ನಪ್ಪಯ್ಯನವರಿಗೆ ಸಂತೋಷವಾದರೂ ಅವರ ಜಾಮಾತೃದೇವನಿಗೆ ತೃಪ್ತಿಯಾಗಲಿಲ್ಲ ಅವನಿಗ ಈ ಲೋಕವೇ ಬೇಡವೆನಿಸಿತ್ತು ಅಂಥವನಿಗೆ ಅದರಿಂದ ಸಂತೋಷವಾಗುವುದಾದರೂ ಹೇಗೆ? ತಾನಿನ್ನು ಬದುಕಿಯೂ ಪ್ರಯೋಜನವಿಲ್ಲವೆಂದು ಅವನಿಗೆ ಖಾತ್ರಿಯಾಗಿತ್ತು ಅವನ ದೇಹಸ್ಥಿತಿ ಹಾಗಾಗಿತ್ತು ಮನೆಯಲ್ಲೇ ನಡೆಯುವುದು ಅವನಿಗೆ ಅಸಾಧ್ಯವಾಗುತ್ತ ಬಂತು ಅಷ್ಟು 'ನೋವು' ಎಂದು ನರಳುತ್ತಿದ್ದ ' ತಾನು ಒಂದು ಹೆಣ್ಣು ಜೀವವನ್ನೂ—ಶಂಕರ ಹೇಳಿದಂತೆ ಹಾಳು ಮಾಡಿದೆನಲ್ಲ ' ಎಂದೂ ಅವನ ಮನಸ್ಸಿನಲ್ಲಿ ಕೊರೆಯುತ್ತಿತ್ತು ಅದರೂ ಸುಮತಿಯ ಅಪಾರವಾದ ಸಹನೆಯನ್ನು ಕಂಡು ಅವನಿಗೆ ಆಶ್ಚರ್ಯವಾಗದೆ ಇರಲಿಲ್ಲ ತನ್ನನ್ನು ಯಾವ ಕೊಂಕು ಮಾತಿಲ್ಲದ ಆದರದಿಂದ ಸ್ವೀಕರಿಸಿದಳಲ್ಲ—ಎಂದು ಅವನಿಗೆ ಅವಳ ಮೇಲೆ ಅಪೂರ್ವದ ಕರುಣೆ ಹುಟ್ಟಿತು

ಒಂದೆರಡು ದಿನಗಳು ಕಳೆದ ಮೇಲ ಅವನಿಗೆ " ತಾನಿನ್ನು ಎಲ್ಲರಿಗೂ ಭಾರವಾಗಿ ಜೀವ ಬಿಡುವುದಕ್ಕಿಂತ ಯಾರಿಗೂ ಕಷ್ಟಕೊಡದೆ ಪ್ರಾಣ ಕಳೆದುಕೊಳ್ಳುವುದು ಲೇಸು " ಎಂಬ ವಿಚಾರ ಬಂತು ಅಂತೇ ರಾತ್ರಿಯಲ್ಲಿ ಎದ್ದು ಹತ್ತಿರದ ಬಾವಿಯ ವರೆಗೆ ನಡೆಯಬೇಕಾದರೆ ಅವನಿಗೆ ಕಣ್ಣೀರು ಬಂತು ! ನೊಂದ ಮನಸ್ಸಿನಿಂದ ಹೇಗಾದರೂ ಮಾಡಿ ಅಲ್ಲಿಗೆ ಮುಟ್ಟಿದ ಬಾವಿಯು

ಕಟ್ಟೆಯ ಮೇಲೆ ಕುಳಿತುಕೊಂಡು ಒಂದು ದೀರ್ಘವಾದ ಪತ್ರ ಬರೆದ ಅದ ರಲ್ಲಿ ತನ್ನ ಜೀವನವನ್ನೆಲ್ಲ ಚಿತ್ರಿಸಿದ

"ಪ್ರಿಯ ಸುಮತೀ, ಮಾವಯ್ಯನವರೇ, ನನ್ನ ಹಿತೈಷಿ ಶಂಕರಾ, ರಾಘ ವೇಂದ್ರಾ" ಎಂದು ಹೆಸರು ಬರೆದು, ಅವರಿಗೆ ತನ್ನ ಆಶೀರ್ವಾದ ವಂದನೆಗ ಳನ್ನು ಮೊದಲು ಅರ್ಪಿಸಿ—ಆಮೇಲೆ ಪತ್ರರಂಗಕ್ಕೆ ಇಳದಿದ್ದ ಎರಡು ಮೂರು ತಾಸುಗಳ ತನಕ ಅತ ಕಾಗದ ಬರೆದಿರಬಹುದು ಅದನ್ನೆಲ್ಲ ಓದ ಬೇಕಾದರೆ ಮರುದಿನ ಅವರೆಲ್ಲ ಒಂದೆರಡ ತಾಸುಗಳನ್ನೇ ಕಳೆಯಬೇಕಾ ಯಿತು ಅದರಲ್ಲಿಯ ಕೆಲವು ಮಾತುಗಳನ್ನು ನೆನೆದು ಶಂಕರನ ಮುಖ ಕಪ್ಪಾಯಿತು

" ನನ್ನ ಈ ಮರಣ ಬೇನೆ ಸುಮತಿಗೂ ಅಂಟಿರಬಹುದು ಶಂಕರಾ! ನೀನು ಅವಳನ್ನು ಹೇಗಾದರೂ ಮಾಡಿ ಬದುಕಿಸು ನಿನ್ನ ಮಾತನ್ನು ನಾನು ಮೀರಿ ನಡೆದೆ ಅದಕ್ಕೆ ಹೀಗಾಯಿತು! ನೀನು ಹೇಳಿದಂತೆ . ನನಗೆ ಅದದ್ದು ಅಂಟುರೋಗವೇ! ಆದರೆ ನಿನ್ನಂಥ ವೈದ್ಯರಿಗೆ ಅದನ್ನು ಗುಣಪಡಿಸುವ ಶಕ್ತಿ ಇರುತ್ತದೆ ಅವಳಿಗೆ ಈ ಬೇನೆ ಅಂಟಿರ ದಿದ್ದರೂ ನೀನು ಅವಳಿಗೆ ಉಪಚಾರ ಮಾಡು ಶಂಕರಾ " ಎಂದು ಶಂಕರನಿಗೆ ಬರೆದಿದ್ದ

ಪತ್ರವನ್ನು ಎಲ್ಲರೂ ಓದಿದರು ಶಿವರಾಯ ಯಾಕೆ ಬಾವಿಗೆ ಬಿದ್ದು ಆತ್ಮಹತ್ಯ ಮಾಡಿಕೊಂಡ ಎಂಬುದಕ್ಕೆ ಅದರಲ್ಲಿ ತಕ್ಕ ಕಾರಣಗಳಿದ್ದವು ಪೋಲಿಸರು ಬಂದು, ಪಂಚನಾಮೆ ಮಾಡಿದರು ಹೆಣ ಒಯ್ಯಲಿಲ್ಲ, ಆ ಪತ್ರ ಒಯ್ದರು

* * * * *

ಅಣ್ಣಪ್ಪಯ್ಯನವರ ಅಳಿಯ ಊರಿಗೆ ಬಂದು ಒಮ್ಮೆ ಅವರಿಗೆ ಸಮಾ ಧಾನ ಮಾಡಿದ್ದನಷ್ಟೆ ಸಂಜೀವಿ ಒಂದು ಗಂಡು ಮಗುವನ್ನು ಅರ್ಪಿಸುವ ವರೆಗೂ ಅವನು ಊರಲ್ಲಿ ಇದ್ದ. ಆ ಮಗುವೂ ನಾರಾಯಣಯ್ಯನಂತೆ ನೀಳವಾಗಿತ್ತು ಅದಕ್ಕೆ "ವಿದ್ಯಾಸಾಗರ" ಎಂಬ ನಾಮಕರ್ಣವನ್ನು ನಾರಾಯ ಣಯ್ಯನೇ ಮಾಡಿದ್ದ ಆದರೆ ವಿದ್ಯಾಸಾಗರನಿಗೆ ಮೂರು ತಿಂಗಳು ತುಂಬು

ವುದರೊಳಗೆ ನಾರಾಯಣಯ್ಯ ಮತ್ತೆ ಊರು ಬಿಟ್ಟು ಹೋಗಿಬಿಟ್ಟ ಈ ಸಲ ಹೋದವನ ಪತ್ತೆ ಅಣ್ಣಪ್ಪಯ್ಯನವರಿಗೆ ತಿಳಿಯುವುದು ಕಠಿಣವೇ ಆಗಿತ್ತು

ಕೆಲವರೆನ್ನುತ್ತಿದ್ದರು "ಹಿಮಾಲಯಕ್ಕೆ ಹೋದ" ಎಂದು

"ಅಲ್ಲಿಗೂ ಹೋಗುವವನೇ ತನ್ನ ಅಳಿಯ" ಎಂದು ಅಣ್ಣಪ್ಪಯ್ಯ ಹೆಮ್ಮೆ ಪಟ್ಟಿದ್ದರೇನೋ ಹೌದು ಆದರೆ ಹೀಗೆ ಪುನಃ ಹೆಂಡತಿ ಮಕ್ಕಳನ್ನು ತನ್ನ ತಲೆಯ ಮೇಲೆ ಹಾಕಿ ಹೋದದ್ದು ಅವರಿಗೆ ಸರಿ ಎನಿಸಲಿಲ್ಲ ಒಂದೆರಡು ವರುಷಗಳೂ ದಾಟಿ ಹೋದವು ಅವರು ಹಿಂದೆ ಮಾಡಿದ ಕಿತಾಮತಿಗಳೂ ಆಗಾಗ ನೆನಪಿಗೆ ಬರುತ್ತಿದ್ದವು ಆದರೆ ಅವುಗಳಿಗೆ ಎಡೆ ಸಿಗಬಾರದೆಂದು ದೇವರ ಭಕ್ತಿಯೂ ಜಪ ಸರದ ಮಾಲೆ ತಿರುಗಿಸುವ ಮೂಲಕ ಪ್ರಾರಂಭ ವಾಯಿತು

"ಹಿಂದೆ ಹೇಗಾದರೂ ನನ್ನ ಒಂದೇ ಜೀವ ಇತ್ತು ಎಲ್ಲಿಯಾದರೂ ನನ್ನ ಹೊಟ್ಟೆ ತುಂಬಿನಬಹುದಿತ್ತು ಈಗ ಇನ್ನೊಂದು ಜೀವವನ್ನೂ ನನ್ನ ಬೆನ್ನಿಗೆ ಕಟ್ಟಿ ಅವರು ಓಡಿದರಲ್ಲ !" ಎಂದು ಸಂಜೀವಿಯೂ ಆಗಾಗ ಅನ್ನುತ್ತಿದ್ದಳು

ಆಗ ಅಣ್ಣಪ್ಪಯ್ಯ "ನೀನೇನು ಚಿಂತಿಸುವುದು ಬೇಡ ನಾನಿಲ್ಲವೋ ? ಅವನು ಹೋದರೇನಾಯಿತು? ನಿನಗೆ ಏನೂ ಕಡಿಮೆ ಮಾಡುವುದಿಲ್ಲ ನಿನ್ನ ಮಗ ವಿದ್ಯಾನಿಗೂ ಏನೂ ಕಡಿಮೆ ಬೀಳದು ನೀನು ಯಾಕೆ ಚಿಂತಿಸುವುದು?" ಎಂದು ಮಗಳಿಗೆ ಸಮಾಧಾನವನ್ನು ಹೇಳುತ್ತಿದ್ದರು

ಅಂತೇ ಮೊಮ್ಮಗನ ಬಾಲಲೀಲೆಗಳನ್ನು ನೋಡಿ ಅವರಿಗೆ ಹಿಂದಿನ ಯಾವ ಕೆಟ್ಟ ಸನ್ನಿವೇಶಗಳ ನೆನಪೂ ಬರುತ್ತಿರಲಿಲ್ಲ ಅವನು ನಾಲ್ಕೆಂಟು ವರುಷದ ಹುಡುಗನಾಗುತ್ತ ಬಂದಂತೆ ಅವನಿಗೆ ವಿದ್ಯೆ ಕಲಿಸುವ ಗುರುಸ್ಥಾನ ವನ್ನೂ ತಾವೇ ವಹಿಸಿದರು ಸಾಲೆಗೂ ಕಳುಹಿಸುತ್ತಿದ್ದರು

ಏನಾದರೂ ಅವರಿಗೆ ಮನಸ್ಸಿಗೆ ಸಮಾಧಾನವಿರಲಿಲ್ಲ ಅಳಿಯ ಮನೆಗೆ ಬಾರದ ಹೊರತು ಅದಕ್ಕಾಗಿ ಪ್ರಯತ್ನವನ್ನು ಮಾಡುತ್ತಲೇ ಇದ್ದರು ಗಟ್ಟದಿಂದ ಯಾರೇ ಬರಲಿ, ಅವರೊಡನೆ "ನಮ್ಮ ನಾರಾಯಣಯ್ಯನನ್ನು ನೋಡಿದ್ದಿರೋ ನೀವು ? ಈಗ ಒಂದು ಗಜ ಗಡ್ಡವನ್ನೂ ಬೆಳೆಸಿರಬಹುದು ಅವನು ಇಲ್ಲಿಂದ ಹೋಗುವಾಗ ಗಡ್ಡ ಬೆಳೆಸಿರಲಿಲ್ಲ ಆದರೂ ಅವನಿಗೆ

ಗಡ್ಡ ಬಿಡುವ ಚಟವುಂಟು" ಎಂದು ತನ್ನ ಅಳಿಯನ ಗುರ್ತು ಹೇಳಿ ಕೊಳ್ಳುತ್ತಿದ್ದರು

ಅದಕ್ಕೆ ಆ ರಾಯರುಗಳು ಕೂಡಾ, "ಏನೋ 'ಅಣ್ಣಾ ಮಾಮಾ' ನನ್ನದೂ ಪುಣೆಯಲ್ಲಿ ಏಕ ದುಕಾನು, ಧಾರವಾಡದತ್ತಲಾಗೆ ಎರಡು ಹೋಟ್ಲು ಅತ್ತ ಹೈದರಾಬಾದ ಕಡೆ ಒಂದು ಅಂಗಡಿ ಎಲ್ಲಾ ಉಂಟು" ಎಂದು ಮೊದಲು ತಮ್ಮ ಘನಸ್ಥಿಕೆಯನ್ನು ಈ ಹಳ್ಳಿಯ ಮುದಿಗೂಬೆಗೆ ತಿಳಿಸಲು ಹವಣಿಸುತ್ತಿದ್ದರು ಆ ಮೇಲೆ ದೇಶಾವರಿ ನಗು ಬೀರುತ್ತ ಮುಖ ಮುಸ್ನೂರ ಕಡೆಗೆ ತಿರುಗಿಸಿ, "ನಿಮ್ಮ ಅಳಿಯನ ಮುಖ ಅಷ್ಟು ಗಾಂವ್ .ಊರುಗಳಲ್ಲಿ ನನಗೇನು ಕಾಣಿಸಲಿಲ್ಲ ಅವನೇನು ಗಡ್ಡ ಬಿಟ್ಟಿದ್ದಾನೆಯೇ? ಹಾಗಾದರೆ ಹಿಮಾಲಯದತ್ತಲಾಗೆ ನೋಡಬೇಕು" ಎಂದು ಅಧಿಕಪ್ರಸಂಗ ತನವನ್ನೂ ಮಾಡುತ್ತಿದ್ದರು

ಆಗ ಅಣ್ಣಾಪ್ಪಯ್ಯನವರಿಗೂ ಅವರ ಆ ದೊಡ್ಡಿಸ್ತಿಕೆಯ ಮಾತುಗಳನ್ನು ಕೇಳಿ ಸಿಟ್ಟು ಬರುತ್ತಿರಲಿಲ್ಲವೆಂದಲ್ಲ ಆದರೆ ಆ ಸಿಟ್ಟನ್ನು ಅವರ ಮುಂದೆ ತೋರಿಸಲು ಇವರು ಸಮರ್ಥರಾಗಿರಲಿಲ್ಲ

ಅದೇ ಸಿಟ್ಟನ್ನು ಮನಗೆ ಬಂದು ಸಂಜೀವಿಗೆ ಕೇಳುವಂತೆ ವ್ಯಕ್ತ ಪಡಿಸುತ್ತಿದ್ದರು "ಅಲ್ಲಿ ಈ ನಮ್ಮ ಊರಿನ ಪೋರಗಳು ಗಟ್ಟ ಹತ್ತಿ ಒಂದು ಬಿಸಿನೀರಿನ ಅಂಗಡಿ ಇಟ್ಟಕೂಡಲೆ ತಮಗಿಂತ ದೊಡ್ಡವರು ಈ ಜಗತ್ತಿನಲ್ಲಿಯೇ ಇಲ್ಲವೆಂದು ತಿಳಿಯುತ್ತಾರೆ ಅಬ್ಬ ಇವರ ಸೊಕ್ಕೇ!" ಎಂದು ತಮ್ಮ ಮನೆಯ ಚಾವಡಿಯಲ್ಲಿ ಗದರುತ್ತಿದ್ದರು

ಅದು ಸಂಜೀವಿಗೆ ಕೇಳಿಸಿದರೆ ಕೇಳಿಸಬೇಕು ಆಗ ಅವಳು "ನೀನು ಯಾಕೆ ಅವರನ್ನು ಮಾತಾಡಿಸಲಿಕ್ಕೆ ಹೋಗುವುದು?" ಎಂದೂ ತಂದೆಗೆ ಬುದ್ಧಿ ಹೇಳುತ್ತಿದ್ದಳು "ಅಲ್ಲ, ಅವರ ಸೊಕ್ಕಿಗೆ ಹೇಳುವುದು" ಎಂದು ಅಣ್ಣಾಪ್ಪಯ್ಯ ಸಮಾಧಾನದಿಂದ ಮಗಳಿಗೆ ಹೇಳುತ್ತಿದ್ದರು

ಅವರ ಮೊಮ್ಮಗನ ಹೆಸರು "ವಿದ್ಯಾಸಾಗರ" ಎಂದು ಇದ್ದರೂ ಅವನು ಹಟನಾಗರನೂ ಆಗಿದ್ದ ತುಂಟ ಶಿಖಾಮಣಿಯೂ ಹೌದು ಅವನ ಮಂಗ ತನಕ್ಕೆ ಅಣ್ಣಾಪ್ಪಯ್ಯ ಬೇಸತ್ತು ಸಿಟ್ಟಿಗೇಳುತ್ತಲೂ ಇದ್ದರು ಆಗ ಮೊಮ್ಮಗ ನಿಗೆ ಬಯ್ಯುತ್ತಿರಲಿಲ್ಲ ಬದಲು ಗಡ್ಡದ ಅಳಿಯನಿಗೆ ಮಂಗಳಾರತಿಯಾಗು

ತ್ತಿತ್ತು "ನಿನ್ನನ್ನು ಒಯ್ದು ಆ ಬಾವಾಜಿಯ ಗಡ್ಡಕ್ಕೆ ಕಟ್ಟುತ್ತೇನೆ ಅಬ್ಬ! ಅವನೊಬ್ಬ ನಿನಗೆ ಅಪ್ಪನೋ! ಒಮ್ಮೆ ಅವನು ನನಗೆ 'ಇಂಥಲ್ಲಿ ಇದ್ದಾನೆ' ಎಂದು ಗೊತ್ತಾಗಬೇಕು ನಾನೇ ಅಲ್ಲಿಗೆ ಹೋಗುತ್ತೇನೆ ಅವನ ಗಡ್ಡ ಹಿಡಿದು ಎಳೆದು ತರುತ್ತೇನೆ ಇಲ್ಲಿ ಹೆಂಡತಿ ಮಕ್ಕಳನ್ನು ಹೀಗೆ ಬಿಟ್ಟು ಅವನು ಓಡಿ ಹೋಗುವುದೇ?" ಎಂದು ಬಾಯಿಗೆ ಬಂದಂತೆ ಮಾತಾಡುತ್ತಿದ್ದರು ಆ ವಿದ್ಯಾಸಾಗರನಿಗೆ ಏನು ಗೊತ್ತು ಅವರು ಯಾರಿಗೆ ಬಯ್ಯುತ್ತಿದ್ದರೆಂದು ಅವನು ಇಲ್ಲಿಯ ವರೆಗೆ ಅಪ್ಪ ಎಂಬ ಸಬ್ದವನ್ನು ಉಚ್ಚರಿಸಿದವನಲ್ಲ ಅವನಿಗೆ ಗೊತ್ತಿದ್ದ ಹೆಸರುಗಳು ಅಂದರೆ ಮೂರೇ ಮೂರು "ಅಮ್ಮ" "ಅಜ್ಜ" ಮತ್ತು "ತಾಂತಪ್ಪ" ಎಂಬವು ಅವನ ಬಾಯಿಯಲ್ಲಿ "ಕಾಂತಪ್ಪ" "ತಾಂತಪ್ಪ"ನಾಗಿದ್ದ ಈ ಅಜ್ಜ ಗಡ್ಡ—ಅಪ್ಪ ಎಂದು ಹೇಳುವಾಗ ಒಮ್ಮೆ ವಿದ್ಯಾಸಾಗರ ಕೇಳಿಯೇ ಬಿಟ್ಟ "ನಿನ್ನ ಅಪ್ಪನೋ ಅಜ್ಜಾ ಅವನು ಗಡ್ಡ?" ಎಂದು

ಅಣ್ಣಪ್ಪಯ್ಯನವರಿಗೆ ನಕ್ಕು ನಕ್ಕು ಹೊಟ್ಟೆ ಹಣ್ಣಾಯಿತು ಈ ವಿದ್ಯಾಸಾಗರನೊಡನೆ ಮಾತಾಡುವುದು ಕಷ್ಟವೆಂದು ಅವರಿಗೂ ಅನಿಸಿರಬೇಕು ಅವನಿಗೆ ಏನು ಉತ್ತರ ಕೊಡಬೇಕೆಂದು ತಿಳಿಯಲಿಲ್ಲ ಮೊಮ್ಮಗ ನಂತೂ ಪುನಃ ಅದೇ ಪ್ರಶ್ನೆಯನ್ನು ಕೇಳುತ್ತಿದ್ದ ಆಗ ಹೇಗಾದರೂ ಅಣ್ಣಪ್ಪಯ್ಯ "ಅಲ್ಲ ಮಗೂ ಅಲ್ಲ" ಎಂದರು.

"ಹಾಗಾದರೆ ಅವನು ಯಾರು?"

"ನಿನ್ನ ಅಪ್ಪ"

"ನನಗೆ ಒಬ್ಬ ಅಪ್ಪ ಉಂಟೇ?"

"ಹೌದು"

"ಅವನು ನಿನ್ನ ಹಾಗೆ ಇದ್ದಾನೆಯೇ?"

"ಇಲ್ಲ"

"ಅವನು ಈಗ ಎಲ್ಲಿದ್ದಾನೆ?"

"ಗಟ್ಟದಲ್ಲಿ"

"ಅವನು ಇಲ್ಲಿ ಇರಲಿಲ್ಲವೋ?"

"ಇದ್ದ"

"ಆಗ ನಾನು ಎಲ್ಲಿದ್ದೆ ?" ಎಂಬ ಈ ಪ್ರಶ್ನೆಗೆ ಅಣ್ಣಪ್ಪಯ್ಯನವರಿಗೆ ಉತ್ತರಿಸುವುದು ಕಷ್ಟವಾಯಿತು ಪುನಃ ನಕ್ಕರು ಸಂಜೀವಿಯನ್ನು ಕರೆದು ಮಗನ ತುಂಟತನವನ್ನು ವರ್ಣಿಸಿದರು ಅವಳೂ ನಕ್ಕಳು

"ಇಂಥ ಸುಖವನ್ನು ಬಿಟ್ಟು ಅವನು ಊರು ಬಿಟ್ಟು ಅಡವಿ ಸೇರುವುದೆಂದರೆ ಎಂಥ ನಾಚಿಗೆಗೇಡು!" ಎಂದು ಅಣ್ಣಪ್ಪಯ್ಯ ಮಗಳಿಗೆ ನಾರಾಯಣಯ್ಯನ ಮೂರ್ಖತನದ ಅರಿವು ಮಾಡಿಕೊಡುತ್ತಲೂ ಇದ್ದರು

ಕಾಂತಪ್ಪ ಅಲ್ಲಿಗೆ ಬಂದಾಗಂತು ವಿದ್ಯಾಸಾಗರ ಅವನ ತಲೆಯ ಮೇಲೆ ಏರುತ್ತಿದ್ದ ಅವನೂ ಸುಮ್ಮನೆ ನಗುತ್ತ ಅವನೊಡನೆ ಆಟವಾಡುತ್ತಿದ್ದ ಆಗ ಸಂಜೀವಿಯೇ ಮಗನಿಗೆ ಕಣ್ಣು ಕೆರಳಿಸುತ್ತಿದ್ದಳು

"ನಿನಗೂ ಆಟವೋ ಕಾಂತಪ್ಪಾ ? ಸಣ್ಣ ಹುಡುಗರಿಗೆ ಅಷ್ಟು ಸಲಿಗೆ ಕೊಡಬಾರದು" ಎಂದು ಅವನಿಗೆ ಹೇಳುವುದೂ ಸಂಜೀವಿಯ ರೂಢಿ

"ನೀವೂ ನಿಮ್ಮ ಅಪ್ಪನ ಹಾಗೆ ದೊಡ್ಡ ಮನುಷ್ಯರಾಗಬೇಕು ಸಾಗರ ಭಟ್ಟರೇ" ಎಂದು ಕಾಂತಪ್ಪ ಅವನಿಗೆ ಉಪದೇಶವನ್ನೂ ಕೊಡುತ್ತಿದ್ದ

"ನೀನೂ ಆಗಬೇಕು" ಎಂದು ಅವನಿಗೂ ವಿದ್ಯಾಸಾಗರ ಮಾರುತ್ತರ ಕೊಡುತ್ತಿದ್ದ

ಅವನು ಹೀಗೇ ಕಾಂತಪ್ಪನೊಡನೆ ಗುದ್ದಾಡುವಾಗ ಒಮ್ಮೆ ಅಣ್ಣಪ್ಪಯ್ಯನವರೂ ಬಂದು ಸಂತೋಷದಿಂದ, "ನಿನ್ನೊಡನೆ ಅವನಿಗೆ ಬಹಳ ಇಷ್ಟ" ಎಂದು ಕಾಂತಪ್ಪನಿಗೆ ಹೇಳಿದರು

"ನನಗೆ ಸಣ್ಣ ಮಕ್ಕಳೆಂದರೆ ಬಹಳ" ಎಂದು ಅವನೂ ಹೇಳಿದ

"ಇನ್ನು ನಮ್ಮ ಮನೆಗೆ ಅವನ ಹೆಂಡತಿಯೂ ಬರುತ್ತಾಳೆ" ಎಂದು ಅಣ್ಣಪ್ಪಯ್ಯ ಒಂದು ಹೊಸ ಸುದ್ದಿಯನ್ನು ಹೇಳಿದರು

"ಯಾರು ?" "ಯಾರು ?" ಎಂದು ಕಾಂತಪ್ಪ ಹಾಗೂ ಸಂಜೀವಿ ಇಬ್ಬರೂ ಕುತೂಹಲದಿಂದ ಕೇಳಿದರು

"ವರಲಕ್ಷ್ಮಿ" ಎಂದರು ಅಣ್ಣಪ್ಪಯ್ಯ

"ಶಾಸ್ತ್ರಿ ಮಗಳೇ ?" ಎಂದನು ಕಾಂತಪ್ಪ

"ಅವರು ಊರಿಗೆ ಬರುತ್ತಾರಂತೆಯೇ ?" ಎಂದಳು ಸಂಜೀವಿ

ಇಬ್ಬರ ಎರಡೂ ಪ್ರಶ್ನೆಗಳಿಗೂ ಅಣ್ಣಪ್ಪಯ್ಯ, "ಹೌದು" ಎಂದು

ಉತ್ತರಿಸಿದರು

"ವರಲಚಿಮಿಗೆ ಎಷ್ಟು ವರ್ಷ?" ಎಂದು ಕೇಳಿದ ಕಾಂತಪ್ಪ

"ಅವಳಿಗೆ ನಾಲ್ಕು ವರ್ಷ ಇವನಿಗೆ ಆರು ವರ್ಷ ಜೋಡಿ ಸರಿಯಾಯಿತು" ಎಂದರು ಅಣ್ಣಪ್ಪಯ್ಯ ನಗುತ್ತ

"ನಿಜವಾಗಿಯೂ ಬರುತ್ತಾನೆಯೇ ದಾಸ ಊರಿಗೆ ?" ಎಂದು ಉತ್ಸುಕತೆ ಕೆರಳಿ ಕೇಳಿದಳು ಸಂಜೀವಿ

"ಹೌದು ಇವತ್ತು ಕಾಗದ ಬಂದಿದೆ"

"ನಿಮ್ಮಿಯೂ ಬರುತ್ತಾಳೆಯೇ ?"

"ಅವಳೂ ಬರುವವಳೇ"

"ಎಷ್ಟು ದಿನ ಇಲ್ಲಿ ಇರುತ್ತಾರಂತೆ ? ಈಗಲೇ ಹೇಳಿಬಿಡು. ಅಂದರೆ ಸಂಡಿಗೆ, ಹಪ್ಪಳ, ಸಾಟ—ಎಲ್ಲ ಇಂದಿನಿಂದಲೇ ತಯಾರು ಮಾಡಲಿಕ್ಕೆ ಆಗುತ್ತದೆ ಅವರು ಊರಿಗೆ ಬಾರದೆ ಐದಾರು ವರುಷಗಳಾದವು ಹೋಗುವಾಗ ಸ್ವಲ್ಪ ಸಂಡಿಗೆ—ಹಪ್ಪಳ ಒಯ್ಯಲಿಕ್ಕೆ ಅನುಕೂಲವಾಗಲಿ" ಎಂದು ಸಂಜೀವಿ ಮುಂದಾಲೋಚನೆಯಿಂದ ಹೇಳಿದಳು ಆಗ ಅಣ್ಣಪ್ಪಯ್ಯ ನಗುತ್ತ ಕೇಳಿದರು

"ಮತ್ತೆಲ್ಲಿಗೆ ? ಗಟ್ಟಕ್ಕೆ"

"ಧಾರವಾಡಕ್ಕೆ ಅಲ್ಲವೋ ?"

"ಹೌದು"

"ಅದಕ್ಕೆ ಶರಣು ಹೊಡೆದನಂತೆ! ಪತ್ರ ಹಾಗೆಂದು ಬಂದಿದೆ ಇನ್ನೇನು ಹೇಳುವುದು ನಿನಗೆ ?"

"ನಿಮ್ಮಿಯೂ ಇಲ್ಲಿಯೇ ಉಳಿಯುತ್ತಾಳೆಯೇ ?"

"ಗಂಡ ಇಲ್ಲಿ ಇರುವಾಗ ಅವಳು ಅಲ್ಲಿ ಹೇಗೆ ಇರುತ್ತಾಳೆ ?"

"ಎಷ್ಟೆಂದರೂ ಅವಳ ಪೂರ್ವಜರ ಊರಲ್ಲವೇ ಇದು ? ತಾವು ಬಿದ್ದು-ಎದ್ದು ಬೆಳೆದ ಮಣ್ಣು ಯಾರಿಗೂ ಬೇಡವೆನಿಸುವುದಿಲ್ಲ ಅದರ ಪ್ರೀತಿ ಅವರಿಗೆ ಇದ್ದೇ ಇರುತ್ತದೆ ನಮ್ಮ ದಾಸನಂತೂ ಆ ಪೇಟೆಯಲ್ಲಿ ಬಹಳ ದಿನ ವಾಸಿಸುವುದಿಲ್ಲವೆಂದು ನನಗೆ ಗೊತ್ತೇ ಇತ್ತು. ನಿಮ್ಮಿ ಹೇಳುತ್ತಿದ್ದಳು 'ಈ ಊರು ಬಹಳ ಚಂದ' ಎಂದು ಇಲ್ಲಿ ಅಬ್ಬಿ ಇದೆ ಅದು ಇದ—

ಗುಡ್ಡ ಏರಿವೆ, ಬೆಟ್ಟ ಮಲಗಿವೆ—ಹಾಗೆ ಹೀಗೆ ಎಂದು ದಿವಸಾಗಲೂ ನನ್ನೊಡನೆ ಹೇಳುತ್ತಿದ್ದಳು ಧಾರವಾಡದ ಗುಡ್ಡ ಬೆಟ್ಟಗಳಿಗೆ ನೆಲ ಬಿಟ್ಟು ಮುಗಿಲಿಗೆ ಏರುವ ಹವ್ಯಾಸ ಇಲ್ಲವಂತೆ—ಅವಳೇ ಹೇಳುತ್ತಿದ್ದಳು ಅಂಥವಳು ಈ ಊರಿಗೆ ಬರದೆ ಏನು ಮಾಡುತ್ತಾಳೆ? ಅವಳ ಗುಣಗಳು ಸುಧಾರಿಸಿರಬಹುದು ಈಗ ಇಲ್ಲಿಂದ ಹೋಗುವಾಗಲೇ ಅವಳ ಸ್ವಭಾವ ಬದಲಾಗಿತ್ತು ನಮ್ಮೂರಿನ ನೀರು ಅವಳನ್ನು ದಾರಿಗೆ ತಂದಿತ್ತು ಅಪ್ಪಾ, ನೀನು ಅವಳಿಗೆ ಏನೂ ಅನ್ನಬಾರದು ಮೊದಲಿನ ಹಾಗೆ" ಎಂದು ಸಂಜೀವಿ ಎಷ್ಟೋ ಹೊತ್ತಿನ ವರೆಗೆ ಮಾತಾಡಿದಳು

"ನಾನೇಕೆ ಅವಳಿಗೆ ಮಾತಾಡಲಿ? ಅವಳ ಗಂಡ ಇದ್ದಾನೆ—ಅವಳಿಗೆ ಬುದ್ಧಿ ಹೇಳಲಿಕ್ಕೆ ಈಗ ಅವಳ ಸೇಲೆ—ಸೋಗುಗಳೆಲ್ಲ ಹೋಗಿವೆಯಂತೆ ಸಾಧು ಆಕಳದಂತೆ ಆಗಿದ್ದಾಳಂತೆ—ಅವಳ ಅಪ್ಪನೇ ಹೇಳುತ್ತಿದ್ದ" ಎಂದು ಅಣ್ಣಪ್ಪಯ್ಯ ಮಗಳಿಗೆ ಉತ್ತರ ಹೇಳಿದರು ಆಗ ಸಂಜೀವಿಯೂ ಮಗನನ್ನು ಕಾಂತಪ್ಪನಿಂದ ತೆಗೆದುಕೊಂಡು ಒಳಗೆ ಹೋದಳು

ಚಾವಡಿಯಲ್ಲಿ ಕಾಂತಪ್ಪ ಹಾಗೂ ಅಣ್ಣಪ್ಪಯ್ಯ ಇಬ್ಬರೇ ಇದ್ದರು ಮಗ ಬರೆದಿರುವ ಪತ್ರ ಓದಿದುದರಿಂದ ಅವರು ಸಂತೋಷಪಟ್ಟಿದ್ದರು

ಅವನಿಗೊಂದು ಎಲೆ ಅಡಿಕೆ ತಿನ್ನಲಿಕ್ಕೆ ಕೊಡುತ್ತ ಅಣ್ಣಪ್ಪಯ್ಯ ಪ್ರಸನ್ನ ವದನದಿಂದ, "ನಮ್ಮ ದಾಸ ಇನ್ನು ಇಲ್ಲಿಯೇ ಇರುತ್ತಾನೆ ನನಗೂ ಒಳ್ಳೆಯದಾಯಿತು ನನಗೆ ಪ್ರಾಯವೂ ಆಯಿತು ಬಿಡು ಅವನೇ ಎಲ್ಲ ವ್ಯವಸ್ಥೆ ನೋಡಿಕೊಳ್ಳಲಿ ನಾನು ದೇವಸ್ಮರಣೆಯಲ್ಲಿ ಕಾಲ ಕಳೆಯುತ್ತೇನೆ" ಎಂದು ಹೇಳಿದರು

"ಅಲ್ಲಿ ಅವರಿಗೆ ಭಾರೀ ಸಂಬಳದ ಜಾಗೆ ಇತ್ತಂತೆ! ಅದನ್ನು ಬಿಟ್ಟು ಇಲ್ಲಿ ಬರುತ್ತಾರೆಯೇ?" ಎಂದನು ಕಾಂತಪ್ಪ

"ಆ ಸಂಬಳ ಸುಡಲಿ ಮಹಾರಾಯಾ ಆ ಊರಿಗೂ ಈ ಊರಿಗೂ ಸರಿಯೇ ಹೇಳು? ಈ ನಂದನವನದಲ್ಲಿ ಮಂಗನಾಗಿ ಜೀವಿಸಿದರೂ ಅಲ್ಲಿಯ ರಂಗನ ಜೀವನ ಬೇಡವೆನಿಸುತ್ತದೆ"

"ಅವರಿಗೆ ಎಷ್ಟು ಮಕ್ಕಳು ಈಗ?"

"ಎರಡೇ"

"ಹೆಣ್ಣೋ ಗಂಡು ?"

"ಒಂದು ಹೆಣ್ಣು, ಒಂದು ಗಂಡು ಆ ಹಿರಿಯ ಹೆಣ್ಣೇ ವರಲಕ್ಷ್ಮಿ ಅವಳನ್ನೇ ನಮ್ಮ ಈ ವಿದ್ಯಾಸಾಗರನಿಗೆ ಮದುವೆ ಮಾಡಬೇಕು ಅವರ ಮದುವೆಯಾಗುವ ವರೆಗೆ ಉಳಿಯಬೇಕೆಂಬುವದು ನನ್ನ ಆಸೆ ಜಾತಕ ಗೀತಕ ನೋಡುವ ಆವಶ್ಯಕತೆಯೇ ಇಲ್ಲ ಆ ಗಡ್ಡದವನು ಬಾರದಿದ್ದರೆ ಬಿಡಲಿ ನಾನೇ ಮದುವೆ ಮಾಡಿಸುತ್ತೇನೆ ಹೇಗಾದರೂ ಒಂದೇ ಮನೆಯೊಳಗಿನ ಗಂಡು ಮತ್ತು ಹೆಣ್ಣು ಯಾವ ಹೆದರಿಕೆಯೂ ಇಲ್ಲ ಹೆಣ್ಣಿನ ಮನೆಯಂತೂ ಇದೇ ಆಗುತ್ತದೆ ಗಂಡಿನ ಮನೆಯೂ ಇದೇ ಆಗುತ್ತದೆ ಶಾಸ್ತ್ರಕ್ಕೆ ಮಾತ್ರ ಗಂಡಿನ ದಿಬ್ಬಣವನ್ನು ಓ ಆ ಮೇಲಿನ ಬೆಟ್ಟ ಗದ್ದೆಯಿಂದ ಭಾರೀ ಗಡದ್ದಿನಿಂದ ಬೇಂಡು ಗರ್ನಾಲುಗಳ ಗರ್ಜನೆಯಿಂದ ಮೆರೆದಾಡಿಸುತ್ತ ತರುವುದು ಆಯಿ ಷ್! ಆಗ ನಾನು ಹೇಗೆ ನಡೆಯುತ್ತೇನೆ" ಎಂದು ಅಣ್ಣಪ್ಪಯ್ಯ ಮೊಮ್ಮಗನ ದಿಬ್ಬಣವನ್ನೂ ಹೊರಡಿಸಿದರು—ಮಾತಿನಲ್ಲಿ

"ದಾಸ ಮಾಸ್ತ್ರು ಒಪ್ಪುತ್ತಾರೆಯೇ ?" ಎಂದನು ಕಾಂತಪ್ಪ

"ಅವನೇ ಮೊದಲು ಈ ಪ್ಲಾನ್ ಹಾಕಿದ್ದು ಅವನ ಹೆಣ್ಣು—ನಿಮ್ಮಗೂ ಸಂತೋಷವಾಗಿದೆ—ಈ ಸುದ್ದಿ ಕೇಳಿ ಹಾಗೆ ಈ ನನ್ನ ಮೊಮ್ಮಗ ಏನು ಚಲ್ಲೆ ? ಹುಡುಗ ಜೋಡು ಎಲುಬಿನ ಗೂಡು ಇದ್ದ ಹಾಗೆ ಇದ್ದಾನೆ. ರೂಪವಂತ ಅಲ್ಲವೋ ? ..ಹಾಗೆ ಆವನಿಗೆ ಬೀಜ ಯಾವುದು ?. ಆ ಗಡ್ಡದವನು—ಬಾಲಸನ್ಯಾಸಿ ನಾರಾಯಣಯ್ಯ . ಅವನು ನಿಜಕ್ಕೂ ಲೋಕದ ಅರಸು! ಮದುವೆ ಆಯಿತೆಂದೇ ತಿಳಿ"

"ಹಾಂ ಹೌದೋ!" ಎಂದು ಉದ್ಗಾರ ತೆಗೆದನು ಕಾಂತಪ್ಪ

"ಆದರೆ ಇಬ್ಬರೂ ಇನ್ನೂ ಬೆಳೆಯಬೇಕು ನಮ್ಮ ವಿದ್ಯಾಸಾಗರ ಇನ್ನೂ ಮೈನರ್ (Minor) ಅವನಿಗೆ ಯಾವುದಕ್ಕೂ ಹದಿನೆಂಟು ವರುಷ ತುಂಬಲಿ ಆಮೇಲೆ ಕಯಿಪೆತ್ (ಖಟ್ಲೆ) ಮಾಡಿ, ಅವನು ಇದ್ದಾನಲ್ಲ . ಆ ಕದೀಮ—ವೆಂಕಣ್ಣಯ್ಯ--ಫಲಮಾರಿನವನು, ಅವನ ಆಸ್ತಿಯ ಅರ್ಧ ಪಾಲು ಇವನ ಹೆಸರಿನಲ್ಲಿ ಮಾಡಿಸುತ್ತೇನೆ ನಾನೇನು ಹೆದರುತ್ತೇನೆಯೇ ? ಅವನು ಅದನ್ನೆಲ್ಲ ಬಿಡಲಿ. ಯಾವುದಕ್ಕೂ ಇನ್ನೊಂದು ಹತ್ತು ಹನ್ನೆರಡು

ವರುಷ ದಾಟಬೇಕು ಆ ಮೇಲೆ ನಂಬ್ರ ಹಾಕುವುದೇ" ಎಂದು ಅಣ್ಣಪ್ಪಯ್ಯ ಹರುಷದಿಂದ ನುಡಿದರು

"ನ್ಯಾಯ ಪ್ರಕಾರ ನಿಮ್ಮ ಮೊಮ್ಮಗನಿಗೆ ಆಸ್ತಿಯ ಅರ್ಧ ಪಾಲು ಸಿಗುತ್ತದೆ ಬಿಡಿ ಅದರಲ್ಲೇನು?"

"ಮತ್ತೇ!.... ಅಲ್ಲ ಮಹರಾಯಾ ಕಾಂತಪ್ಪ ನಾಳೆ ನೀನು ಮತ್ತೆ ಎಲ್ಲಿಗಾದರೂ ಕೋಳಿ ಅಂಕಕ್ಕೆ ಓಡಿ ಹೋಗಬೇಡ ನಮ್ಮ ಮಕ್ಕಳು ಗಟ್ಟದಿಂದ ಬರುವವರು ಇದ್ದಾರೆ ಆ ಧನಿಯನಿಗೂ ಬರಲಿಕ್ಕೆ ಹೇಳು ಒಂದು ನಾಲ್ಕೈದು ಜನ ಸಂಪಿಗೆಗೆ ಹೋಗಿ—ಮೋಟರ ನಿಲ್ಲಿಸಬೇಕು"

"ನಾಲ್ಕೈದು ಜನರೇ!"

"ಹೌದು! ಬೇಡವೋ ಅಷ್ಟು ಜನ ಇಬ್ಬರು ಎರಡು ಹುಡುಗರನ್ನು ಎತ್ತಿಕೊಳ್ಳಲಿಕ್ಕೆ ಮತ್ತೆ ಮೂವರು ಸಾಮಾನು ಹೊರಲಿಕ್ಕೆ ಬೇಡವೋ?"

"ಅದಕ್ಕಿಂತ ಒಂದು ಗಾಡಿ ಮಾಡಿದರೆ ಹೇಗೆ?"

## ೧೦

ಪತಿಯ ವಿಯೋಗಕ್ಕಿಂತ ದಾರುಣವಾದ ದುಃಖ ಸುಮತಿಗೆ ಬಂದೊದಗಿತು ಅದು ಅವಳ ಪತಿರಾಯನ ಪ್ರಸಾದಲೇ ಆಗಿತ್ತು. ಶಿವರಾಯ ಸತ್ತನೇನೋ ನಿಜ ಅವನ ಗುಹ್ಯರೋಗ ಸುಮತಿಗೂ ಅಂಟಿಕೊಳ್ಳದೆ ಬಿಡಲಿಲ್ಲ ಆಕೆ ಅವನನ್ನು ಯಾವ ಪಾವನ ಹೃದಯದಿಂದ ಸ್ವೀಕರಿಸಿಕೊಂಡಿದ್ದಳೆಂಬುದು ತಿಳಿಯಲಸಾಧ್ಯವಾದ ಸಂಗತಿ ತನ್ನ ಪತಿಯೇ ತನಗೆ ಪರದೈವವೆಂದು ಅನ್ಯಾಯವಶವಾದ ಭಕ್ತಿ ಪ್ರೇಮಗಳಿಂದ ಶಿವರಾಯನನ್ನು ಆರಾಧಿಸುವುದರಲ್ಲಿದ್ದಳು ಸುಮತಿ ಆದರೆ ಅವಳ ಬೆನ್ನ ಹಿಂದೆ ಯಾವ ಕಾಣದ ಭೂತ

ಅಂಥ ಆಟ ನಡೆಸುತ್ತಿತ್ತೆಂದು ತಿಳಿಯಲಾರದ ಮಾತು

ಕೆಲ ದಿವಸಗಳ ತನಕ ವೈಯ ಕಾಯಿಲೆಯನ್ನೆಲ್ಲ ಮನದಲ್ಲೇ ನುಂಗಿ ಹಿಡಿದಳು ಆದರೆ ಮನಸ್ಸಿಗೂ ಅದನ್ನು ತಡೆಯುವ ಶಕ್ತಿ ಇಲ್ಲದಾಗುವ ದಿನಗಳುಃಬಂದವು ಅವಳಿಂದ ಸರಾಗವಾಗಿ ನಡೆಯುವುದೂ ಅಸಾಧ್ಯವಾಗುತ್ತ ಬಂತು ಈಗ ಮಾತ್ರ ಆಕೆ ಬಾಯಿ ಬಿಡಲೇ ಬೇಕಾಯಿತು

ಶಂಕರನೂ ಹಲವಾರು ಸಲ ಅವಳಿಗೆ ಹಲವಾರು ಪ್ರಶ್ನೆಗಳನ್ನು ಕೇಳಿ ಅವಳ ಆರೋಗ್ಯವನ್ನು ನಿರೀಕ್ಷಿಸುತ್ತ ಇದ್ದ ಆದರೆ ಚಿಕಿತ್ಸೆಗಿಂತ ಹೆಚ್ಚು ಹೊತ್ತನ್ನು ಆತ ಅಳಿಗೆ ಸಮಾಧಾನ ಹೇಳುವುದರಲ್ಲಿ ಕಳೆಯಬೇಕಾಗಿ ಬಂದಿತ್ತು ಪತಿಯ ಆತ್ಮಹತ್ಯವು ಅವಳ ಪಾಲಿಗೆ ನರಕಯ್ಯಾತನೆಗಿಂತಲೂ ಮಿಗಿಲಾದ ನೋವನ್ನು ತಂದೊಡ್ಡಿತ್ತು ಅವಳೂ ಅವನ ಹಿಂದೆ ಹೋಗುವ ನಿರ್ಧಾರವನ್ನು ಒಂದೆರಡು ಸಲ ಮಾಡಿದ್ದಳು ಶಂಕರ, ಅವನ ತಾಯಿ—ಸುಬ್ಬಿ, ಅಣ್ಣಾಪ್ಪಯ್ಯ, ಹೊನ್ನಪ್ಪಯ್ಯ—ಸಕಲರೂ ಅವಳನ್ನು ಸಂತೈಸಿದ್ದರು ಮುಖ್ಯವಾಗಿ ಶಂಕರನ ಅನ್ಯಾದೃಶ ಪ್ರೇಮದ ಕವಚವೇ ಅವಳಿಗೆ ಬಾಳ ಜ್ಯೋತಿಯಾಗಿತ್ತು ಅದರ ಜಾಜ್ವಲ್ಯಮಾನವಾದ ಕಾಂತಿಯೆ ಅವಳ ಮುಂದಣ ಬಾಳ ಬಟ್ಟೆಯನ್ನು ಬೆಳಗಿಸಿ—ತೋರಿಸುತ್ತಿತ್ತು

ತನ್ನ ಕನಸಿನ ಕೋಣೆ ಈ ತೆರದಿಂದ ಕುಪ್ಪಳಿಸೀತೆಂದು ಆಕೆ ಬಗೆದಿರಲಿಲ್ಲ ಅವಳ ಬಾಳಿನ ಬಗ್ಗೆ ಅನೇಕರು ಅನೇಕ ಚಂದ್ರಕಾಂತ ಮಂದಿರಗಳನ್ನು ಕಲ್ಪನಾ ಲೋಕದಲ್ಲಿ ನಿರ್ಮಿಸಿದ್ದರು ಅವೆಲ್ಲ ಅವಳ ಮನೋಭೂಮಿಯ ಮೇಲೆ ಜೀವ ತಾಳಿ ಬಂದು ಅವಳ ಕಲ್ಪನೆಯ ರಾಜ್ಯದಲ್ಲಿ ಮುಳ್ಳಿನ ಹಾಸಿಗೆ ಬಿಡಿಸಿಟ್ಟು ಅವಳನ್ನು ನರಳಿಸುತ್ತಿದ್ದವು

ಅದೆಲ್ಲಕ್ಕೂ ಮಿಗಿಲಾಗಿ ಹಾಳು ಬೇನೆಯೊಂದು ಅವಳ ಭೌತಿಕ ದೇಹವನ್ನು ಆವರಿಸಿ ತಲೆಯೆತ್ತಿ ತಿರುಗದಂತೆ ಮಾಡಿತ್ತು ಅದನ್ನು ಆಕೆ ಸಹಿಸದಾದಳು. ಅವಳ ತಾಳ್ಮೆಯ ಸಾಗರವೆ ತಳಮಳಿಸಹತ್ತಿತು ಭೀಕರವಾದ ಅಮಾವಾಸ್ಯೆಯ ಅಲ್ಲೋಲ ಕಲ್ಲೋಲ ಅವಳ ಚಿತ್ತಸಮುದ್ರದಲ್ಲಿ ಹೊಯ್ದಾಟ ನಡೆಸಲುದ್ಯಮಿಸಿತು

ಸುಮತಿ ಅಬಲೆಯಂತೆ, ಹೆಣ್ಣಿನಂತೆ—ಶಕ್ತಿಹೀನಳಂತೆ ಇಲ್ಲಿಯ ವರೆಗೆ ಕಾದು ಕಾದು ಕುಳಿತಿದ್ದಳೆಂದು ಕಾಣುತ್ತದೆ ಅವ್ಯಕ್ತ ದೈತ್ಯಶಕ್ತಿ ಅವಳ

ದೇಹದೊಳಗೆ ಆದಾವ ಮೂಲೆಯಲ್ಲಿ ಅಡಗಿ ಕೂತು ಅಂಗಸಾಧನೆ ನಡೆಸುತ್ತಿತ್ತೆಂದು ಹೇಳಲಳವಲ್ಲ ಆಕೆ ಅಬಲಾವತಾರ ತೊರದು ತಾಟಕಿ, ಕಾಳಿ, ಶಿವೆ, ಶಕ್ತಿ—ಯಾಗಿ ಅವತರಿಸುವವಳಂತೆ ಮನದಲ್ಲಿ ಕುದಿಯುತ್ತ ರೂಪಾಂತರಗೊಳ್ಳುತ್ತಿದ್ದಳು

ಮಾನವ ಲೋಕವನ್ನು ಉದ್ಧರಿಸಲೋ—ದಹಿಸಲೋ ಹೊರಡುವ ಅಗ್ನಿ ಶಿವೆಯೇ ಅವಳೆಂದರೂ ತಪ್ಪಾಗದು ಹೆಣ್ಣು ಲೋಕವನ್ನು ಆಳುವಲ್ಲಿಂದ ಅಳಿಸುವ ವರೆಗೆ, ಆಳಿಸಿಕೊಳ್ಳುವವರಗೆ ತನ್ನ ಶಕ್ತಿಗಂಗೆಯ ಅವರಾವತಾರವನ್ನ ಪ್ರತ್ಯಕ್ಷಿಸಬಲ್ಲಳು ಒಲಿದರೆ, ನಲಿದರೆ, ಮನವಿದ್ದರೆ—ಮಾತ್ರ ನಾರಿ, ಇಲ್ಲದಿದ್ದರೆ ಜಗತ್ತನ್ನೇ ಗೋರಿಗೊಳಿಸುವ ಮಾರಿ ಅವಳು! ಅವಳಲ್ಲಿ ಮಾತ್ರ ಹೆಣ್ಣು-ಗಂಡುಗಳಲ್ಲಿರಬೇಕಾದ ಗುಣನಾಣ್ಯದ ಎರಡೂ ಮಗ್ಗಲುಗಳೂ ಸಮಾವೇಶಗೂಂಡಿವೆ ಹೆಣ್ಣಿನಲ್ಲಿ ತಾನು ಹೆಣ್ಣು—ಎಂಬ ವಿವೇಕೋದಯವಾದಾಗಲೇ ಗಂಡುತನವೂ ಚೇತನಗೊಳ್ಳುತ್ತದೆ

ಸುಮತಿಯ ವನಿತಾವತಾರವೀಗ ಅಸಾದೃಶ್ಯವಾದ ರೂಪದಾಳಿ ಬೆಳೆಯತೊಡಗಿತು

" ನಿನಗೇನಾಗಿದ್ದರೂ ನಿರ್ಭೀತಿಯಿಂದ—ಸಂಕೋಚಪಡದೆ ನನಗೆ ಹೇಳು ನಾನದಕ್ಕೆ ತಕ್ಕ ಔಷಧ ಕೊಡುತ್ತೇನೆ " ಎಂದು ಶಂಕರ ಅವಳಿಗೆ ಶಿವರಾಯ ತೀರಿಕೊಂಡ ನಾಲ್ಕಾರು ದಿನಗಳಲ್ಲೆ ಹೇಳಿಯಾಗಿತ್ತು. ಅವನ ಗುಹ್ಯರೋಗ ಅವಳ ದೇಹಕ್ಕೂ ಅಂಟದಂತೆ ಪ್ರತಿಬಂಧಕ ಮದ್ದನ್ನು ಆತ ಅವಳಗೆ ಕೊಟ್ಟಿದ್ದ ಅದನ್ನು ಅವಳು ಸೇವಿಸಿರಲಿಲ್ಲ " ಅವರು ಹೋದ ಮೇಲೆ ನಾನು ಯಾವ ಸೌಭಾಗ್ಯಕ್ಕೆ ಅದನ್ನು ನುಂಗಲಿ ?" ಎಂದಾಕ ಅವನ ಮದ್ದನ್ನು ನಿರಾಕರಿಸಿದ್ದಳು ಶಂಕರನಿಗೆ ಇದರಿಂದಾಗಿ ತುಂಬ ವ್ಯಸನವೂ ಆಗಿತ್ತು ಅವನಿಗೆ ಅಪಾರವಾದ ಕರುಣೆಯೂ ಹುಟ್ಟಿತ್ತು ಸುಮತಿಯನ್ನು ಹೇಗೆ ಯೋಗ್ಯ ದಾರಿಗೆ ಹಚ್ಚಬೇಕೆಂಬ ಸಮಸ್ಯೆಯಂತೂ ಅವನನ್ನು ಈಗ ದಿವಾರಾತ್ರಿ ಪೀಡಿಸುತ್ತಿತ್ತು ಅದರೊಡನೆ ಅವಳ ಆರೋಗ್ಯವನ್ನು ಕಾಯುವುದೊಂದು ಅವನಿಗೆ ಭೂತ ಕಾರ್ಯವಾಗಿಟ್ಟುಕೊಂಡಿತು

"ಅವನ ಆ ರೋಗವು—ಇವಳಿಗೂ ಅಂಟಿಕೊಳ್ಳಬಹುದೇ ? " ಎಂದು ಆತ ಆಲೋಚಿಸಿ—ಆಲೋಚಿಸಿ ಆ ಪ್ರಶ್ನೆಯನ್ನು ಒಮ್ಮೆ ಡಾ ಕೃಷ್ಣರಾಯ

ರಿಗೂ ಕೇಳಿಯಾಗಿತ್ತು

"ಒಮ್ಮೆಲೆ ಹಾಗೆ ಅದು ಮೇಲೆ ಬೀಳಲಾರದು ಅವಳಿಗೂ ಅದು ಅಂಟುತ್ತದೆಂಬುದರಲ್ಲಿ ಅನುಮಾನವಿಲ್ಲ ಎಂಥ ಆರೋಗ್ಯ ಶರೀರವಾದರೂ ಅಂಥ ಪ್ರಬಲವಾದ ರೋಗಗಳನ್ನು ತಡೆಯಲಾರದು ಅದ್ದರಿಂದ ಅವಳಿಗೆ ಪ್ರತಿಬಂಧಕ ಮದ್ದನ್ನು ಕೊಟ್ಟು ಚಿಕಿತ್ಸೆ ಮಾಡಿಸುವುದು ಲೇಸು " ಎಂದು ಚಿಕಿತ್ಸೆಯ ಪದ್ಧತಿಯನ್ನೂ ರಾಯರು ಶಂಕರನಿಗೆ ವಿಶದಗೊಳಿಸಿಟ್ಟಿದ್ದರು

ಅದರಂತೆ ಶಂಕರ ಮುಂಜಾಗ್ರತೆ ವಹಿಸಿದ್ದ ಆದರೆ ಸುಮತಿಯನ್ನು ಆ ದಿನಗಳಲ್ಲಿ ಚಿಕಿತ್ಸೆಗೊಳಪಡಿಸಿ ಕಾಳಜಿ ಮಾಡುವುದು ಸಾಕಷ್ಟು ಪ್ರಯಾಸದ ಕೆಲಸವಾಗಿತ್ತು ಆ ನಿಮಿತ್ತ ಶಂಕರನ ಪ್ರಯತ್ನವು ತುಸು ತಡವಾಗಿಯೇ ಪ್ರಾರಂಭವಾಯಿತಷ್ಟೆ

ಇಷ್ಟು ದಿನ ತನಗೆ ಔಷಧೋಪಚಾರ ಬೇಡವೆಂದು ಕುಂದಿ ಹಿಂಜರಿಯುತ್ತಿದ್ದ ಸುಮತಿ ಇಂದು ಉತ್ಸಾಹದಿಂದ ಅತ್ಯಂತ ದರ್ಪದಿಂದ ಪುರುಷವಾಣಿಯಲ್ಲಿ ಶಂಕರನ ಆಸ್ಪತ್ರೆಗೆ ಬಂದು ಅವನನ್ನು ಮಾತಾಡಿಸಿದಳು ಅದೂ ತನಗೆ ಚಿಕಿತ್ಸೆ ಮಾಡಬೇಕೆಂಬ ವಿಷಯದ ಬಗ್ಗೆ! ಶಂಕರನಿಗೆ ಮಹದಾಶ್ಚರ್ಯವಾಯಿತು ಅದರಲ್ಲೂ ಅವಳ ಮಾತಿನ ಸರಣಿಯಲ್ಲಿ ವ್ಯಕ್ತವಾಗುತ್ತಿದ್ದ ಅಪ್ರತಿಮ ಪುರುಷಸದೃಶ ದಿಟ್ಟತೆ ಅವನನ್ನು ಭ್ರಾಂತನನ್ನಾಗಿ ಮಾಡಿತು ಇವಳ ತಲೆಯೆಲ್ಲಿಯಾದರೂ ಕೆಟ್ಟಿರಬಹುದೇ—ಎಂಬ ಸಂಶಯವೂ ಅವನಿಗೆ ಬಾರದಿರಲಿಲ್ಲ!

"ಪತಿಯ ಉಣಿಸಿನ ಫಲವಿದು ಶಂಕರಾ!" ಎಂದಾಕೆ ಆಸ್ಪತ್ರೆಯ ಚಿಕಿತ್ಸಾಲಯದೊಳಗೆ ಪ್ರವೇಶಿಸಿ ಬಾಗಿಲು ಮುಚ್ಚಿದಳು!

"ಸುಮತಿಯೇ?"

"ದೆವ್ವವೆಂದು ತಿಳಿದಿಯಾ ?"

"ಏನು ?"

"ನನಗೆ ಇಂಜಕ್ಷನ್ನೇ ಗತಿಯಿನ್ನು !"

"ನೀನೇಕೆ ಹೀಗೆ ಮಾತಾಡುವೆ ? "

"ಬಾ.. .ಬಾ....ಒಳಗೆ—ನನ್ನಿಂದ ಇನ್ನು ತಡೆಯಲಿಕ್ಕೆ ಸಾಧ್ಯವಿಲ್ಲ! ನಾನಿನ್ನು ಹೆಣ್ಣಲ್ಲ! ನನ್ನ ಹೆಣ್ಣುತನ ಹೋಯಿತು, ಒಬ್ಬ ಪತಿಯ ಹಿಂದೇ

ನನ್ನ ಅಬಲಾವತಾರ ಕಳಚಿ ಹೋಗಿವೆ ನೀನು ಹೆದರಬೇಡ ನಿನ್ನಿಂದ ನನ್ನ ಕಾಯಿಲೆಯು ಗುಣವಾಗಬೇಕು ನಾನಿನ್ನು ಗಂಡೋ—ಹೆಣ್ಣೋ ಆಗಬೇಕು. " ಎಂದು ದಿಟ್ಟತನದಿಂದ ಅವನನ್ನು ಕರೆದು ಚಿಕಿತ್ಸೆ ಮಾಡಲು ಕೇಳಿಕೊಂಡಳು

ಶಂಕರ ಭೂಮಿಗಿಳಿದು ಬಿಟ್ಟ ಇವಳು ಸುಮತಿ ಹೌದೋ ಅಲ್ಲವೋ ಎಂಬ ಸಂಶಯವೂ ಅವನಿಗೆ ಬಂತು ಅವನಿಗೆ ಭಯವೂ ಬಂತು ಒಂದು ಕಾಲಕ್ಕೆ ತಾನಿವಳ ಸ್ನೇಹ ಸಾನ್ನಿಧ್ಯದಲ್ಲಿ ಇದ್ದೆನೋ–ಇಲ್ಲವೋ ಎಂಬ ಕರಾಳ ದ್ವೈತ್ಯಸಮಸ್ಯೆ ಅವನನ್ನು ನಡುಗಿಸಿತು

ಅವಳ ಮಾತಿನ ಲೋಹಚುಂಬಕ ಶಕ್ತಿ ಶಂಕರನನ್ನು ಅವಳೆಂದುದೆಲ್ಲ ವನ್ನು ನಿರುತ್ತರನಾಗಿ ಕೇಳುವಂತೆ ಇಂದ್ರಜಾಲ ಹೂಡಿತ್ತು ದೇಹದಾದ್ಯಂ ತವೆಲ್ಲ ಚಿಕಿತ್ಸೆ ಮಾಡಿದೊಡನೆ ಅವಳಿಗೂ ಶಿವರಾಯನ ಸಿಫಿಲಿಸ್ಸೋ, ಗನೋ ರಿಯಾವೋ ಅಂಟಿಕೊಂಡದ್ದು ಖಚಿತವಾಯಿತು ತಲೆಗೆ ಸಿಡಿಲೆರಗಿದಂತೆ ಹತ್ತು ನಿಮಿಷ ನಿರುಪಾಯನಾಗಿ ನಿಂತುಬಿಟ್ಟ ಅವಳ ವಚನ ಉಕ್ತಿಗಳಲ್ಲೂ ಸಮತೋಲವಿರದ್ದು ಅವನನ್ನು ಭ್ರಾಂತಿಗೀಡು ಮಾಡಿತು ದೇಹ ಜಾಡ್ಯ ದೊಡನೆ ಮನೋರೋಗವೂ ಇವಳನ್ನಾವರಿಸಬಹುದೆಂಬ ಸಂಶಯವೂ ಅವನಿಗೆ ಬಾರದಿರಲಿಲ್ಲ ತನ್ನ ಕೈಯಿಂದ ಇವಳನ್ನು ಗುಣಪಡಿಸಬಹುದೆಂಬ ಮನೋ ಧೈರ್ಯವೂ ಅವನಿಗೆ ಕಾಣದಾಯಿತು ಆದರೂ ರಾಯರನ್ನು ಕೇಳಿ, ಸಲಹೆ ಪಡೆದು–ಶತಪ್ರಯತ್ನ ಮಾಡಿ ಅತ್ಯಂತ ಆಧುನಿಕ ರೀತಿಯಿಂದ ಕೂಡ ಅವಳ ಚಿಕಿತ್ಸೆಯನ್ನು ಮಾಡಬಹುದೆಂಬ ವಿಚಾರಧಾರೆ ಬಹಳ ಹೊತ್ತಿನ ಮೇಲಾದರೂ ಬಾರದಿರಲಿಲ್ಲ

ಕೆಲ ದಿನಗಳ ಮಟ್ಟಿಗೆ ಅವಳನ್ನು ಸಂಪಿಗೆಯ ಪ್ರಶಸ್ತವಾದ ದವಾಖಾ ನೆಯಲ್ಲಿಟ್ಟು ಚಿಕಿತ್ಸೆಗೊಳಿಸುವುದೆಂದು ಆತ ನಿರ್ಧರಿಸಿದ ಅಲ್ಲಿ ಅನೇಕ ವೈದ್ಯ ಕೀಯ ಪ್ರವೀಣರೂ ಇದ್ದರು ಅಂಥವರ ಸಹಾಯದಿಂದ ಮಾತ್ರ ಇಂಥ ಸಾಂಕ್ರಾಮಿಕ ರೋಗ ಗುಣ ಹೊಂದಿಸಬಹುದೆಂದು ನೆನೆಸಿ ಆದರಂತೆ ನಡೆ ಯಲು ಹೊನ್ನಪ್ಪಯ್ಯನವರನ್ನು ವಿನಂತಿಸಬೇಕಾಯಿತು ಅವರು ಈಗ ಯಾವ ಕುಂಟುಪಂಕ್ತಿಯನ್ನು ಮಧ್ಯೆ ನೇರಿಸದೆ ಒಪ್ಪುತ್ತಿದ್ದರು ಯಾಕೆಂದರೆ ಅವರ ವೃದ್ಧಾಪ್ಯದ ಹಿಂದಿನ ಉಪಕಾರ ಅಪಕಾರಗಳ ಚಲನಚಿತ್ರ ಅವರ

ಮನೋಮಂದಿರದಲ್ಲಿ ತನ್ನಷ್ಟಕ್ಕೆ ಪ್ರದರ್ಶಿಸಲ್ಪಡುತ್ತಿತ್ತು. ಜಾನಕಿಯ ಸಹವಾಸದಿಂದ ಅವರು ಗೈದ ಅಪಾರ ಅನ್ಯಾಯದ ಚಿತ್ರ ಅವರ ಬಗೆಗಣ್ಣಿನೆದುರು ವಿಕಟಾಟ್ಟಹಾಸದಿಂದ ನರ್ತಿಸುತ್ತಿತ್ತು. ಎಷ್ಟು ದೇವಧ್ಯಾನದಲ್ಲಿ ಮನಸ್ಸನ್ನು ತಲ್ಲೀನಗೊಳಿಸಿದರೂ ಅವರ ನಿಗ್ರಹವನ್ನು ಉಲ್ಲಂಘಿಸಿ ಅದು ತನ್ನ ಚಾಂಚಲ್ಯ ವೃತ್ತಿಯನ್ನು ಅನುಸರಿಸದಿರುತ್ತಿದ್ದಿಲ್ಲ. ಹೀಗಾಗಿ ಹೊನ್ನಪ್ಪಯ್ಯ ಕೊನೆಯ ಕಾಲಕ್ಕಾದರೂ ಮಗಳ ಸುಖ ನೋಡಿ ಸಾಯಬೇಕೆಂದು ಬಯಸಿದಂತೆ ಇತ್ತು.

ಯಾರ ಆತಂಕವೂ ಇಲ್ಲದೆ ಸುಮತಿಯನ್ನು ಸಂಪಿಗೆಯಲ್ಲಿರುವ ಡಾಕ್ಟರ್ ಕೃಷ್ಣರಾಯರ ಧರ್ಮಾರ್ಥ ಚಿಕಿತ್ಸಾನಿಲಯಕ್ಕೆ ಕರೆದೊಯ್ಯಲಾಯಿತು. ಹೊನ್ನಪ್ಪಯ್ಯನವರೂ ಈ ಕಾರ್ಯದಲ್ಲಿ ನೆರವಾದರು. ತನ್ನ ಮಗಳ ದಾರುಣ ಸ್ಥಿತಿಯನ್ನು ಕಂಡು ಅವರೂ ನೊಂದುಕೊಳ್ಳುವಂತಾಯಿತು. ತಾನು ಹಲವಾರು ವರುಷಗಳ ಹಿಂದೆ ಅವಳ ಬಗ್ಗೆ ನಿರ್ಮಿಸಿದ ಕನಸಿನ ಮಂದಿರಗಳೆಲ್ಲ ಅವರ ಮನೋನಿಲಯದಲ್ಲಿ ಓತಪ್ರೋತವಾಗಿ ಕಾಣಿಸಿಕೊಳ್ಳತೊಡಗಿದವು.

ಮಗಳ ಜಾತಕ ತಿದ್ದಿದರೂ ಹಣೆಯ ಬರೆಹ ತಿದ್ದಲು ತಾನು ಅಸಮರ್ಥನೆಂಬುದರ ಅರಿವು ಅವರಿಗೆ ಎಂದೋ ಆಗಿತ್ತು. ಆದರೂ ಅದು ಪುನಃ ಮರುಕಳಿಸದಿರಲಿಲ್ಲ. ಸ್ವಪ್ನವೃಕ್ಷವನ್ನು ಬೇಕಾದವರು ಬೇಕಾದಂತೆ ಸಾಕಿ ಸಲುಹಬಹುದು. ಆದರೆ ಅದರ ಫಲ ಕಲ್ಪನೆಯಲ್ಲೇ ಸಿಗುವಂತಹದ್ದು ಮಾತ್ರವೆಂದು ಅವರು ಆಲೋಚಿಸತೊಡಗಿದರು. ದೈವದ ತಲೆಯ ಮೇಲಂತು ಭಾರ ಹೊರಿಸಿದ್ದು ಸಹಜವೇ ಆಗಿತ್ತು. ಎಲ್ಲವೂ ಅದೃಷ್ಟವೆಂಬುದು ನಿತ್ಯಮಂತ್ರದಂತೆ ಅವರು ಜನರಿಗೆ ಬೋಧಿಸತೊಡಗಿದರು. ವೃದ್ಧಾಪ್ಯದ ಮಕ್ಕಳಾಟಿಕೆ ಅದು ಯೆಂದು ಜನ ತಿಳಿಯುತ್ತಿದ್ದರು! ಆದರೂ, ಮಗಳು ಸುಖಪಡಬೇಕೆಂಬ ಆಶಾಶಿಶು ಅವರ ಪಿತೃವಾತ್ಸಲ್ಯದ ಗರ್ಭದಲ್ಲಿ ಬೆಳೆಯತೊಡಗದೆ ಇರಲಿಲ್ಲ. ಹಿಂದೆ ಆ ಹೆಣ್ಣು ಜಾನಕಿಯ ಬಲೆಯಲ್ಲಿ ಸಿಲುಕಿ ತಾನು ಮಾಡಿದ್ದು ಅನ್ಯಾಯ ಅನಂತ ಅಪರಾಧವೆಂದೂ ಅವರಿಗೆ ಅನಿಸತೊಡಗಿತ್ತು.

"ನಾನು ನನ್ನ ಮಗಳನ್ನು ಕೊಲ್ಲದೆ ಬಿಟ್ಟದ್ದು ದೊಡ್ಡದು! ಹೆಣ್ಣಿನ ಶಲುವಾಗಿ ಮನುಷ್ಯ ಏನೆಲ್ಲ ಮಾಡುತ್ತಾನೆಂದು ಹಣೆಗಣ್ಣಿನಿಂದಲೂ ಹೇಳಲು ಸಾಧ್ಯವಿಲ್ಲ" ಎಂದು ಎಲ್ಲ ಹೊಣೆಯನ್ನು ಮಾಯದ ಅಬಲೆಯರ ಮೇಲೆ

ಹೊರಿಸಲೂ ಹೊನ್ನಪ್ಪಯ್ಯ ಹಿಂದೆಮುಂದೆ ನೋಡುವವರಲ್ಲ

ಅದಲ್ಲದೆ ಅವರಲ್ಲಿ ತಮ್ಮ ಪೂರ್ವಜರ ವೀರ—ಶೂರತ್ವಗಳ ಪ್ರದರ್ಶನದ ಬಡಾಯಿ ಕೊಚ್ಚಿಕೊಳ್ಳುವ ಹವ್ಯಾಸವೂ ಇತ್ತು ಅದರಿಂದ ತನ್ನ ತಪ್ಪನ್ನು ಕಡಿಮೆ ಮಾಡುವ ಹಂಬಲವೂ ಅವರಲ್ಲಿತ್ತೆಂದರೂ ತಪ್ಪಾಗದು ಹೆಣ್ಣನ್ನು ಆಳಿದವ ತಾನೆಂಬ ಶೌರ್ಯದ ಗೌರವವೂ ತನಗೆ ಬರುತ್ತದೆಂಬ ಹೆಮ್ಮೆಯೂ ಅವರಿಗಿದ್ದಿರಬಹುದು ಅಂತೇ ಜನರೊಡನೆ, ತನ್ನ ತಾತ—ಮುತ್ತಾತಂದಿರು ಕಾಮಿನಿಯರನ್ನು ಕಟ್ಟಿದ ಶೌರ್‍ಯವನ್ನು ಹೇಳುವುದು ಹೊನ್ನಪ್ಪಯ್ಯನವರಿಗೆ ಒಂದು ರೀತಿಯಲ್ಲಿ ಗೌರವವನ್ನು ತಂದೊಡ್ಡುತ್ತಿತ್ತು ಯಾಕಂದರೆ— ಅವರ ಶ್ರೋತೃಗಳು ಆ ವೇಳೆಯಲ್ಲಿ, "ಒಳ್ಳೇ ಹೆಸರುವಾಸಿ ಮನೆತನ ಬಿಡಿ ನಿಮ್ಮದು! ಹೆಣ್ಣು ಕಟ್ಟುವುದೆಂದರೆ ಕೋಣ—ಎಮ್ಮೆ ಕಟ್ಟಿದ ಹಾಗಲ್ಲ! ಹಾಯುವ ಕಂಬಳದ ಕೋಣಗಳನ್ನು ಕಟ್ಟಿ ಕೀರ್ತಿಶೇಷರಾಗಬಹುದು ಆದರೆ—ಕಾಮಿನಿಯರನ್ನು ಕಟ್ಟಿ ಮೆರೆದಾಡುವುದು ಮೊನೆಯ ಮೇಲೆ ನಿಂಬೆಹಣ್ಣು ನಿಲ್ಲಿಸಿದಂತೆ—ಮನೆತನಕ್ಕೆ ಮರ್ಯಾದೆ ತರುವ ಕೀರ್ತಿ ಕಾರ್‍ಯ!" ಎಂದು ಹೊಗಳುತ್ತಿದ್ದರು

"ನಮ್ಮ ಅಜ್ಜನ ಅಜ್ಜನಂತೆ! ಎಂಥ ವಿಲಾಸಿ ಗೊತ್ತೇ? ಭಾರೀ ಭೀಮ ಶರೀರ—ಬೇರೆ ತಿನ್ನುವುದೂ ಹಾಗೆ—ಉಣ್ಣುವುದೂ ಹಾಗೆ ಬೇರೆಯವರಿಗೆ ಉಣ್ಣಿಸುವುದೂ ಹಾಗೇನೆ! ಹತ್ತು ಹೆಣ್ಣು ಕಟ್ಟಿದ್ದನಂತೆ! ಒಂದೇ ರಾತ್ರಿಯಲ್ಲಿ ಹತ್ತೂ ಕಾಮಿನಿಯರ ಕುಟೀರಗಳನ್ನು ಸರತಿಯಿಂದ ಹೊಕ್ಕು ಬರುತ್ತಿದ್ದನಂತೆ! ಕಟ್ಟಿದರೆ ಅವನಂತೆ ಕಾಮಿನಿಯರನ್ನು ಕಟ್ಟಬೇಕು—ಅಂದರೆ ಅದಕ್ಕೊಂದು ಮರ್ಯಾದೆ ನಮ್ಮ ಹಾಗೆ ಎಲ್ಲ—ಅಲ್ಲ ಬಿಡಿ ಅವರು!

"ಮತ್ತೊಂದು ಮೋಜಿನ ಮೋಹಿನಿ ವಿದ್ಯೆಯೆಂದರೆ ಧರ್ಮಪತ್ನಿಯ ಸಮ್ಮತಿಯಿಂದಲೇ ಕಾಮಿನಿಯರನ್ನು ಕಟ್ಟುತ್ತಿದ್ದರಂತೆ! ಸ್ವತಃ ನಮ್ಮ ತಂದೆ ಸುಬ್ರಾಯರು ಇದ್ದರಲ್ಲ—ಏನು ಕಡಿಮೇ—ಇಸಂ ಅಲ್ಲ! ಈ ವಿಷಯವನ್ನೆಲ್ಲ ನಮ್ಮ ಅಣ್ಣು ಹೇಳಬೇಕು ಅಂದರೇನೆ ಅದಕ್ಕೊಂದು ರಂಗು ಇರುತ್ತದೆ ಆದರೂ ನಾನು ಹೇಳುತ್ತೇನೆ ಕೇಳಿ

"ಸ್ವತಃ ಕೈಧಾರೆಯ ಹೆಂಡತಿಯೆ ಒಳ್ಳೇ ಪ್ರೀತಿಯಿಂದ 'ಚಂದ್ರಮಂಚ'

ತಯಾರಿಸುತ್ತಿದ್ದಳಂತೆ! ಡಬ್ಬಲ್—ಡಬ್ಬಲ್ ಹಾಸಿಗೆ! ಹಾಸಿಗೆ ಅಂದರೆ ಹಾಸಿಗೆ ಈಗಿನಂಥ ಹಸಿತೊಗಟೆಯಂಥ ಬಿರುಸು ಚಾಪೆಗಳಲ್ಲ ಮೂರು ಜನ ಎತ್ತಲಿಕ್ಕೇ ಬೇಕು ಅಂಥ ಶಯ್ಯೆಗಳನ್ನು! ಚಿಲ್ಲರೆಯವರಲ್ಲ—ನಮ್ಮ ತಾತಂದಿರು

"ಆಮೇಲೆ ಚಕೋರಿಗೆ ದಾಲಚೀನಿ, ಗೋಡಂಬಿ, ಎಳೆ—ಅಡಿಕೆ ಚಿಗುರೆಲೆ ಲವಂಗ, ಬಣ್ಣ ಕಟ್ಟಿದ ಕೊಬ್ಬರಿ, ಇತ್ಯಾದಿಗಳಿಂದ ರಸಭರಿತವಾದ ತಾಂಬೂಲ ತಯಾರಿಯಾಗಿರುವ ಸಜ್ಜಾದ 'ಸಿಲ್‌ವರ್ ಜಾರ್ಮನ್' ಪ್ಲೇಟಿನಲ್ಲಿ ಕೊಟ್ಟು ಧರ್ಮಪತ್ನಿಯೇ ಚಂದ್ರಮಂಚಕ್ಕೆ ನಿಲ್ಲಿಸಿ—ಮುಗುಳ್ನಗೆ ನಕ್ಕು ಚಿಗರಿ ಮರಿಯಂತೆ ಚಿಕ್ಕನೆ ಹೊರಗ ಓಡಿ ಬರುವವಳೇ—ಧರ್ಮಪತ್ನಿ! ಅದಕ್ಕೆ ಎನ್ನುತ್ತಾರೆ—ರಂಗು, ಮೋಜು, ಸ್ತ್ರೀಸೌಖ್ಯ

"ಅದೆಲ್ಲ ಬಿಟ್ಟು ನಮ್ಮ ಹಾಗೆ ಕದ್ದು ಮುಚ್ಚಿ ಪಾಪ ಪುಣ್ಯ ಲೆಕ್ಕ ಹಾಕುತ್ತ, ತೂಕ ಮಾಡುತ್ತ—ಆಳಿದೂ ಸುರಿಯುವುದೂ ಅಂದಿನವರಿಗೆ ಸಲ್ಲದ ಮಾತು ಎಲ್ಲ ಪಬ್ಲಿಕ್ಕೇ! ಅವರ ಮನಸ್ಸೂ ಅಷ್ಟೆ ಪಬ್ಲಿಕ್ಕು! ಭಾರೀ ವಿಶಾಲ! ಅಂದಿನ ಸಂಸ್ಕೃತಿ ಏನು? ಇಂದಿನ ಸಂಸ್ಕೃತ ಏನು? ಇಂದಿನ ಸಂಸಾರವಾದರೂ ಏನು? ದಾಸರು ಹೇಳುವ ಹಾಗೆ ಸಾರವಿಲ್ಲದ ಸಂಸಾರವೇ—ಇದು!" ಎಂದು ಹೊನ್ನಪ್ಪಯ್ಯ ಕೇಳುವವರನ್ನು ಎಷ್ಟೋ ಸಲ ತಮ್ಮ ಅಸ್ಖಲಿತ ಪ್ರಚಂಡ ವಾಣಿಯಲ್ಲಿ ತೇಲಿಸಿಬಿಡುತ್ತಿದ್ದರು ಅವರ ಮುಂದೆ ತನ್ನ ಮತ್ತು ಜಾನಕಿಯ ಸಂಬಂಧವನ್ನು ಸಾಸಿವೆಯಷ್ಟು ಸಣ್ಣದು ಮಾಡಿ ಬಣ್ಣಿಸಿ ಪಾಪ ಹರಣ ಮಾಡಿಕೊಳ್ಳುತ್ತಿದ್ದರು ಆದರೂ ಅವರ ಅಂತರಾತ್ಮ ತನ್ನ ಮಿಡಿತದ ಶ್ರುತಿಯನ್ನು ಹಿಡಿದೇ ಇರುತ್ತಿದ್ದ

ಮಗಳು ಸಂಪಿಗೆಯ ದವಾಖಾನಯಲ್ಲಿ ತಜ್ಞ ವೈದ್ಯರ ಆರೈಕಯಲ್ಲಿ ಗುಣಹೊಂದುತ್ತಿರುವುದು ಹೊನ್ನಪ್ಪಯ್ಯನವರಿಗ ಶಾಂತಿ—ಸುಖಗಳನ್ನು ನೀಡಿತ್ತು ಡಾ ಕೃಷ್ಣರಾಯರು ಇಷ್ಟು ನಯಜ್ಞರೆಂದು ಅವರಿಗೆ ತಿಳಿದಿರಲಿಲ್ಲ ಅವರು ಸರ್ವಜ್ಞರೆಂಬ ಅರಿವು ಹೊನ್ನಪ್ಪಯ್ಯ ಸಂಪಿಗೆಯ ಆಸ್ಪತ್ರೆಯಲ್ಲಿ ತನ್ನ ಮಗಳು ಅನಾರೋಗ್ಯದಿಂದ ಮಲಗಿದಾಗಲೆ ತಿಳಯಿತೆಂದರೂ ತಪ್ಪಾಗದು

ವಾರಕ್ಕೆ ನಾಲ್ಕಾರು ಸಲ ಹೊನ್ನಪ್ಪಯ್ಯ ಸಂಪಿಗೆಯ ದವಾಖಾನೆಗೆ

ಭೇಟಿ ಕೊಟ್ಟು ಬರುತ್ತಿದ್ದರು ಮಗಳ ಆರೋಗ್ಯದ ಸ್ಥಿತಿಗತಿಯನ್ನು ನೋಡಿ ಕೊಂಡು ಬರುವ ಉದ್ದೇಶವೇ ಅವರದಾಗಿರುತ್ತಿತ್ತು ಆ ಹೊತ್ತಿನಲ್ಲಿ ಅವರು ಡಾ ಕೃಷ್ಣರಾಯರ ಸಮಕ್ಷಮಕ್ಕೆ ತನ್ನವರ ಹಾಗೂ ತನ್ನ ವೀರ—ಶೂರತನ ಗಳನ್ನು ಹೇಳದೆ ಹಿಂದಿರುಗುತ್ತಿದ್ದಿಲ್ಲ ಕೃಷ್ಣರಾಯರೂ ಅವರ ಮಾತುಗ ಳನ್ನು ಕೇಳಿದಂತೆ ಮಾಡಬೇಕಿತ್ತು ಅವರಿಗೂ ಹೊನ್ನಪ್ಪಯ್ಯನವರಿಗೆ ಎಷ್ಟು ವಯಸ್ಸೆಂಬುದು ತಿಳಿದಿರಲಿಲ್ಲ ಎಂದಲ್ಲ

ಡಾಕ್ಟರರ ದವಾಖಾನೆಯಲ್ಲಿದ್ದ ಪ್ರತ್ಯೇಕ ಪ್ರಶಸ್ತ ವಾಚನಾಲಯ, ಪುಸ್ತಕ ಭಂಡಾರಗಳನ್ನು ಕಂಡು ಹೊನ್ನಪ್ಪಯ್ಯ ಬೆರಗಾಗಿದ್ದರು ಅಲ್ಲಿದೆ ಅಲ್ಲಿಯ ರೋಗಿಗಳಿಗೆ ಮನೋರಂಜನೆಗಾಗಿ ಪುಸ್ತಕ ಓದಲಿಕ್ಕೆ ಕೊಡುವ ಪದ್ಧ ತಿಯನ್ನೂ ಹೊನ್ನಪ್ಪಯ್ಯ ನಿರೀಕ್ಷಿಸಿವರು ಇಂಥ ಶ್ರೇಷ್ಠ ತರಗತಿಯ ಆದರ್ಶ ಪ್ರಾಯವಾದ ದವಾಖಾನೆ ತಮ್ಮೂರಲ್ಲಿ ಇದ್ದದ್ದು ಹೆಮ್ಮೆಯ ಮಾತೆಂದು ಹೊನ್ನಪ್ಪಯ್ಯ ಅವರ ಮುಂದೇ ಹೇಳಿದರು ಆ ಮಾತಿನಲ್ಲಿ ದುರುಳತನ ಹುದುಗಿರಲಿಲ್ಲವೆಂದು ಡಾಕ್ಟರರಿಗೂ ಅರಿವಾಯಿತು ಮೊದಲಿನಿಂದಲೂ ಹೊನ್ನಪ್ಪಯ್ಯ ಡಾಕ್ಟರರ ಬಗ್ಗೆ ಆದರಭಾವನೆಯನ್ನೆ ತೋರ್ಪಡಿಸುತ್ತಿದ್ದರಷ್ಟೆ ಅಲ್ಲದೆ ಹೊನ್ನಪ್ಪಯ್ಯ ಅಧಿಕಪ್ರಸಂಗತನದ ಮಾತುಗಳನ್ನು ಅವರ ಮುಂದೆ ಆಡದೆ ಕೊಡುತ್ತಿದ್ದಿಲ್ಲ

"ನಮ್ಮ ಶಂಕರನನ್ನೂ ಇದೇ ದವಾಖಾನೆಗೆ ಸೇರಿಸಿಕೊಂಡು ನೀವಿ ಬ್ಬರೂ ಸೇರಿ ಒಳ್ಳೆ ಪ್ರಭಾವಶಾಲಿಯಾದ ದೇಶಸೇವೆಮಾಡಬಹುದಲ್ಲ?" ಎಂದು ಹೊನ್ನಪ್ಪಯ್ಯ ಹೇಳಿದ್ದರು ಡಾಕ್ಟರರು ಅದಕ್ಕೆ ಉತ್ತರವನ್ನೆ ಇತ್ತಿರಲಿಲ್ಲ.

ಇನ್ನೊಮ್ಮೆ "ಶಂಕರನ ಮದುವೆಯೊಂದು ಆಗದೆ ಉಪಾಯವಿಲ್ಲ ಡಾಕ್ಟ ರರೇ ಅವನ ತಾಯಿ ಸಾಯುವವಳು ಮಗನ ಮದುವೆ ನೋಡಲು ಬದುಕಿ ದ್ದಾಳೆ" ಎಂದು ಹೇಳಿದ್ದರು.

"ಅಂದರೆ ಅವನ ತಾಯಿಯನ್ನು ಇವನ ಮದುವೆ ಮಾಡಿ ಕಳುಹಿಸಬೇ ಕೆಂಬುದು ನಿಮ್ಮ ಆಲೋಚನೆಯೇ?" ಎಂದು ಕೃಷ್ಣರಾಯರು ಲೇವಡಿ ಮಾಡಿಯಾಗಿತ್ತು

"ಛೇ ಛೇ—ಅಲ್ಲ! ನಮ್ಮ ತಮ್ಮನ ಮಗಳ ಗಂಡನ ಹಾಗೆ ಅರ್ಜುನ ಸನ್ಯಾಸಿಯೋ—ರಾವಣ ಸನ್ಯಾಸಿಯೋ ಶಂಕರ ಆಗಬಾರದಲ್ಲ" ಎಂದು

ಹೊನ್ನಪ್ಪಯ್ಯ ನಾರಾಯಣಯ್ಯನನ್ನು ತ್ಯಗಳಿದ್ದರು ಡಾಕ್ಟರರಿಗೆ ಆ ಮಾತಿನ ಅರ್ಥವಾಗಿರಲಿಲ್ಲ ಅತ್ತ ಲಕ್ಷವೂ ಅವರು ಈಯುವ ಗೋಜಿಗೆ ಹೋಗಲಿಲ್ಲ

ಶಂಕರನೂ ಸುಮತಿಯ ಕಾಯಿಲೆಯ ಬಗ್ಗೆ ಅಪಾರವಾದ ಆಸ್ಥೆ ವಹಿಸಿದ್ದನಷ್ಟೆ? ರಾತ್ರಿ ಅವಳ ಹಾಸಿಗೆಯ ಬಳಿ ಅವನೇ ಕಾವಲಿರುತ್ತಿದ್ದ ಸುಮತಿ ಅವನೊಡನೆ ಮಾತಾಡುವ ರೀತಿ ಮಾತ್ರ ನವೀನವಾಗಿತ್ತು ಅವಳು ಶಂಕರನ ಸಹಾಯದಿಂದಲೇ ತನ್ನ ಬಾಲ್ಯತನದಲ್ಲಿ ಕಲಿತ—ಅಳಿದುಳಿದ ಓದು ಬರಹವನ್ನು ರೂಢಿಸಿಕೊಂಡು ಕನ್ನಡ ಓದಲು ಬರೆಯಲು ಚೆನ್ನಾಗಿ ಕಲಿತುಕೊಂಡಾಗಿತ್ತು ಆಸ್ಪತ್ರೆಯಲ್ಲಿ ಮಲಗಿದಾಗಂತು ಡಾಕ್ಟರರ ವಿಶ್ವಜ್ಞಾನ ಸಂಪತ್ತೇ ಅಲ್ಲಿಯ ರೋಗಿಗಳಿಗೆ ದೊರೆಯುತ್ತಿತ್ತೆಂದ ಮೇಲೆ ಅದರ ಉಪಯೋಗ ಸುಮತಿಗೂ ಸಿಗದೆ ಹೋಗಲಿಲ್ಲ

ಅವಳ ಸಾನಿಧ್ಯದಲ್ಲಿದ್ದು ಶಂಕರನೂ ಅನೇಕ ಕ್ಲಿಷ್ಟ ವಿಷಯಗಳನ್ನು ವಿವರಿಸಿ ಹೇಳಲು ಯತ್ನಿಸುತ್ತಿದ್ದ ಕೆಲ ಸಂದಿಗ್ಧ ಸಮಸ್ಯೆಗಳು ಶಂಕರನ ತಲೆಯನ್ನೂ ಕೆಡಿಸುತ್ತಿದ್ದವು ಅಂಥ ವೇಳೆಯಲ್ಲಿ ಕೃಷ್ಣರಾಯರೂ ತಮ್ಮ ಪಾಂಡಿತ್ಯದ ಸುಲಭೋಪಾಯಗಳನ್ನು ಉಪಯೋಗಿಸಿ ಅಂಥ ಜಟಿಲತೆಯನ್ನು ಬಿಡಿಸಿ ತೋರಿಸುತ್ತಿದ್ದರು.

ಶಂಕರನು ಸುಮತಿಯೊಡನಿರುವುದು ಆಸ್ಪತ್ರೆಯ ದಾದಿಯರಿಗೆ ಅಸೂಯೆ ತಂದೊಡ್ಡುತ್ತಿರಲಿಲ್ಲ ಆ ದವಾಖಾನೆಯ ದಾದಿಯರು ಸರಕಾರದ ಸಿವಿಲ್ ಹಾಸ್ಪಿಟಲ್‌ಗಳ ನರ್ಸಗಳಂತೆ ಬಣ್ಣದ ಚಿಟ್ಟೆಗಳಾಗಿರಲಿಲ್ಲ ಅಲ್ಲಿಯ ರೋಗಿಗಳ ಆರೈಕೆಯನ್ನು ಚಿಕಿತ್ಸಾದೃಷ್ಟಿಯನ್ನಳಿದು ಗುಪ್ತವಾದ ಆಶಾದೃಷ್ಟಿಯಿಂದ ಗ್ರಹಿಸುವ ಸರಕಾರದ ನರ್ಸಗಳೆಲ್ಲಿ? ಇಲ್ಲಿಯ ನಯಜ್ಞರಾದ ಕರ್ಮಕುಶಲ ದಾದಿಯರೆಲ್ಲಿ? ಅಲ್ಲದೆ ಶಂಕರನೂ ಒಬ್ಬ ಪ್ರಸಿದ್ಧ ವೈದ್ಯನೆಂಬುದು ಅವರಿಗೂ ತಿಳಿದಿತ್ತು ಶಂಕರನೂ ಅಲ್ಲಿ ಈಗೀಗ ತನ್ನ ಸೇವೆಯನ್ನು ಸಲ್ಲಿಸುತ್ತಿದ್ದ ಅವನ ಸೇವಾಬುದ್ಧಿ, ನಯ—ವಿನಯ, ರೋಗವನ್ನು ಗುರುತಿಸುವ ನಿಪುಣತನ, ಚಿಕಿತ್ಸಿಸುವ ಚುರುಕುತನ—ಎಲ್ಲವೂ ಅಲ್ಲಿಯವರಿಗೆ ಬೆರಗು ಹುಟ್ಟಿಸಿತ್ತು ಅಂತೇ ಶಂಕರ–ಸುಮತಿಯರ ನಡುವಿನ ಗುಪ್ತಸ್ನೇಹದ ಉದ್ದೇಶವಾವುದೋ ಭಿನ್ನವಿದೆಯೆಂದೂ ಅವರಿಗೆನಿಸದಿರಲಿಲ್ಲ ಆದರೆ ಅದನ್ನು ಅವರು ಅಲ್ಲಿಯ ವಾತಾವರಣದಲ್ಲ ಉಗುಳಿರಲಿಲ್ಲ! ಅವರತ್ತ ವಕ್ರದೃಷ್ಟಿಯನ್ನೂ

ಬೀರಿ ಗೊತ್ತಿದ್ದವರಲ್ಲ

ಊರಲ್ಲಿ ಮಾತ್ರ ಶಂಕರರಾಯರು ಸುಮತಿಯನ್ನು ಮದುವೆಯಾಗುತ್ತಾರೆಂಬ ಸುದ್ದಿ ಹಬ್ಬತೊಡಗಿತ್ತು ರೋಗಿಷ್ಠಳನ್ನು ರಮಿಸಿ ರಮಿಸಿ ಲಗ್ನವಾಗುವವನಂತೆ ನಮ್ಮೂರ ಹರಿಜನಭಕ್ತ—ಎಂದು ಶ್ರೀಮಾನ್ ಮುಕ್ತೇಶ್ವರರು ತಾವೇ ಹೊಸೆದುಕಟ್ಟಿದ ಸುದ್ದಿಯನ್ನು ಊರಲ್ಲಿ ಹಬ್ಬಿಸತೊಡಗಿದ್ದರು

ಶಂಕರ ಇತ್ತೀಚೆಗೆ ಸಂಪಿಗೆಯ ದವಾಖಾನೆಯಲ್ಲೇ ತನ್ನ ಹೆಚ್ಚಿನ ಸಮಯವನ್ನು ಕಳೆಯುವುದೇ ಆ ಸುಳ್ಳು ಸುದ್ದಿಗೆ ಕಾರಣವನ್ನೊದಗಿಸಿ ಕೊಟ್ಟಿತು ವಾರದಲ್ಲಿ ನಾಲ್ಕು ದಿನಗಳನ್ನು ಸಂಪೂರ್ಣವಾಗಿಯೆ ಆತ ಸಂಪಿಗೆಯಲ್ಲಿ ಕಳೆಯತೊಡಗಿದ್ದ ಉಳಿದ ದಿನಗಳಲ್ಲಿ ತನ್ನ 'ಧರ್ಮಾರ್ಥ ದವಾಖಾನೆ'ಯನ್ನು ತೆರೆದು ಬಂದ ರೋಗಿಗಳಿಗೆ ಔಷಧ ಕೊಡುತ್ತಿದ್ದ ಊಟ ಉಪಚಾರಗಳಿಗೂ ಸಂಪಿಗೆಯ ಡಾಕ್ಟರರ ಮನೆಯಲ್ಲಿ ವ್ಯವಸ್ಥೆ ಮಾಡಲಾಗಿತ್ತು ಅಲ್ಲದೆ ಡಾಕ್ಟರರ ಮನೆಯಲ್ಲಿ ವ್ಯವಸ್ಥೆ ಮಾಡಲಾಗಿತ್ತು ಅಲ್ಲದೆ ಡಾಕ್ಟರರ ಮನಸ್ಸಿನಲ್ಲೂ ಶಂಕರನೂ ತಮ್ಮ ದವಾಖಾನೆಯಲ್ಲಿ ಉಳಿದುಕೊಂಡು ತನ್ನ ತನು ಮನಗಳನ್ನು ಅರ್ಪಿಸಿದ್ದರೆ ಚೆನ್ನು—ಎಂದೂ ಇತ್ತಂತೆ ಈ ವಿಷಯವನ್ನು ಕೃಷ್ಣರಾಯರ ಮಡದಿಯವರೆ ಶಂಕರನಿಗೆ ತಿಳಿಯಪಡಿಸಿದ್ದರು ಶಂಕರನೂ ಒಪ್ಪುವ ವಿಚಾರ ಮಾಡಿದ್ದನೆಂಬುದಕ್ಕೆ ಅವನೂ ಅಲ್ಲಿ ಡಾಕ್ಟರಿಕೆ ನಡೆಸುತ್ತಿದ್ದದ್ದೇ ಸಾಕ್ಷಿಯಾಗಿತ್ತು

ಒಮ್ಮೆ ಶಂಕರನೇ ಕೃಷ್ಣರಾಯರ ಮತ್ತು ಅವರ ಮನೆಯವರ ಸಮ್ಮುಖದಲ್ಲಿ ತನ್ನ ಅಭಿಲಾಷೆಯನ್ನು ಸ್ಪಷ್ಟವಾಗಿ ವ್ಯಕ್ತ ಮಾಡಿದ ತಾನೂ ಇಲ್ಲಿಯೆ ಇದ್ದು ತನ್ನ ಸರ್ವಸ್ವವನ್ನು ರಾಯರ ದವಾಖಾನೆಗೆ ಮುಡಿಪಿಡುತ್ತೇನೆಂದು ಅವನ ಬಾಯಿಯಲ್ಲೇ ಕೇಳುವಾಗ ರಾಯರಿಗೆ ಅಮರ ಆನಂದವಾಯಿತು ಆದರೂ ಅವರು ನಡುವೆ ತಮ್ಮ ಒಂದು ಮಾತನ್ನು ಹೇಳಿ ತಮ್ಮ ಘನವ್ಯಕ್ತಿತ್ವಕ್ಕೆ ತ್ರುಟಿ ಬಾರದಂತೆ ವರ್ತಿಸಿದರು

"ನನ್ನದೆಂಬುದು ಈ ದವಾಖಾನೆಯಲ್ಲಿ ಏನೂ ಇಲ್ಲ ನಾನೂ ಈ ದವಾಖಾನೆಯವನು ಹೊರತು ಇದು ನನ್ನ ದವಾಖಾನೆಯಲ್ಲ! ಇದು ನಿನ್ನ ದವಾಖಾನೆಯೂ ಅಲ್ಲ ಆದರೆ ನೀನೂ ಈ ಆಸ್ಪತ್ರೆಯವನೆಂಬುದು ನಿನ್ನಲ್ಲಿ ಹೊಳೆಯಬೇಕು ನಾನು ಎಂಬ ಶಬ್ದ ವಿಶಾಲಿಸಿ ನಾವು ಎಂಬಲ್ಲಿಗೆ ಬರ

ಬೇಕು ನಾವು ಈ ದವಾಖಾನೆಯಿಂದ ಗಳಿಸಿದ್ದನ್ನು ಯಾವ ಬಾಹ್ಯ ಹೇಯ ಆಡಂಬರಗಳಿಗೆ ದುಂದುಗಾರಿಕೆ ಮಾಡಬಾರದು ಮರ್ಯಾದೆಯಿಂದ ಒಂದು ನಿರ್ದಿಷ್ಟವಾದ ಪ್ರಮಾಣದ ಮೇರೆಗೆ ನಮಗೆ ಉಂಡು ಉಟ್ಟು ಬಾಳಲು ಎಷ್ಟು ಬೇಕೋ ಅಷ್ಟನ್ನು ನ್ಯಾಯವಾದ ರೀತಿಯಿಂದ ಬಳಸಬೇಕು ಉಳಿದ ಸರ್ವಸ್ವವನ್ನು ಈ ಪುಣ್ಯಾಲಯಕ್ಕೆ ವಿನಿಯೋಗಿಸಬೇಕು

"ಈಗಂತು ದೇಶದಾದ್ಯಂತದಿಂದ ಇಲ್ಲಿಗೆ ಜನರು ಬರತೊಡಗಿದ್ದಾರೆ ಇಂಥ ವೇಳೆಯಲ್ಲಿ ನಿನ್ನಂಥವರ ನೆರವೂ ನಮ್ಮ ದವಾಖಾನೆಗೆ ಬೇಕೇ ಬೇಕು ಅಲ್ಲದೆ ಊರಿನಲ್ಲಿ ಏನು ನಮ್ಮಲ್ಲಿಗೆ ಬರುವ ದೀನ ರೋಗಿಗಳು ಕಡಿಮೆಯಿಲ್ಲ ಎಂದ ಮೇಲೆ ನಮ್ಮ ಕೈಲಾದಷ್ಟು ಈ ಕಾರ್ಯಕ್ಕೆ ಎರೆಯಲೇ ಬೇಕು

"ಸದ್ಯದಲ್ಲೆ ನನ್ನ ಚಿರಂಜೀವಿಯೂ ವೈದ್ಯಕೀಯ ಪ್ಯಾಸು ಮಾಡಿ ಬರುವವನಿದ್ದಾನೆ ಅವನನ್ನು ಈ ಕ್ಷೇತ್ರದಲ್ಲೆ ಕೆಲಸಕ್ಕೆ ತೊಡಗಿಸುವ ವಿಚಾರವೂ ಇದೆ! ಅಲ್ಲದೆ ಮಿಕ್ಕ ವೈದ್ಯರು, ಶೂಲಗಿತ್ತಿಯರು, ದಾದಿಯರು ಅಂತೂ ಇದ್ದೇ ಇದ್ದಾರೆ " ಎಂದು ಪ್ರದೀರ್ಘವಾಗಿ ತಮ್ಮ ಹೃತ್‌ಕಮಲವನ್ನು ಅರಳಿಸಿಯೆ ತೋರಿಸಿದರು ರಾಯರು

"ನೀವೆಂದುದು ನಿಜ" ಎಂದು ಶಂಕರನೂ ನುಡಿದು ಅವರ ಮಾತಿಗೆ ಒಪ್ಪಿಗೆಯಿತ್ತಾಯಿತು

ಮುಂದೆ ಕೆಲ ದಿನಗಳಲ್ಲೆ ರಾಯರಿಗೆ ಮತ್ತೊಂದು ಸಮಸ್ಯೆ ತಲೆ ತಿನ್ನತೊಡಗಿತು ಅದೇನು ದೈತ್ಯಸಮಸ್ಯೆಯಲ್ಲ ಆದರೂ ಅದು ಸಮಸ್ಯೆಯೇ ಶಂಕರನ ಬಾಳಿನ ಸಮಸ್ಯೆ ಅದಾಗಿತ್ತು ತಾವು ಅಂಥ ಕಾರ್ಯಗಳಲ್ಲಿ ಒಮ್ಮೆಲೆ ತಲೆ ಹಾಕುವುದು ಸರಿಯಲ್ಲವೆಂದು ಬಗೆದ ಅವರು ಆಬಗ್ಗೆ ಮಧ್ಯಸ್ತಿಕೆ ವಹಿಸಲು ಹಿಂಜರಿದಿದ್ದರೂ—ಅದಕ್ಕೆ ಕಲ್ಲು ಹಾಕುವ ದುಷ್ಕೃತ್ಯ ಅಂಥವರ ಜನ್ಮಕ್ಕೇ ಹೇಳಿದ ಮಾತಲ್ಲ

ಈಗ ಮಾತ್ರ ಡಾಕ್ಟರರು ಆ ವಿಷಯವನ್ನು ತಲೆಗೊಯ್ಯಬೇಕಾಯಿತು ಶಂಕರನ ತಾಯಿ—ಸುಬ್ಬಿಯ ಆಗ್ರಹಪೂರ್ವಕ ವಿನಂತಿಯೂ ಅವರನ್ನು ತಲಪಿತ್ತು ಊರಲ್ಲಿಯ ಮೂರು ಕಾಸಿನವರ ಮಾತುಕತೆಗಳನ್ನು ಅವರು ಕೇಳುವ ಗೋಜಿಗೆ ಹೋಗದಿದ್ದರೂ ಅಂಥವರ ನಿಂದೆಯ ಮಾತುಗಳು ಹೆಚ್ಚಾಗತೊಡಗಿದವು. ಅಲ್ಲದೆ ಇತ್ತ ಶಂಕರನೂ ಅವರೊಡನೆ ಆ ವಿಷಯವನ್ನು

ಪ್ರಸ್ತಾಪಿಸಬಹುದೆಂಬ ಆಲೋಚನೆಯೂ ಅವರಿಗೆ ಬಂದಿತ್ತು ಆತನ ನಡಾವಳಿಗಳೂ ಅದನ್ನು ಸೂಚಿಸುತ್ತಿದ್ದವು ಆದರೂ ಹಿಂಜರಿಯುವ ಶಂಕರನನ್ನು ಅವರೇ ಮಾತಾಡಿಸಬೇಕಾಯಿತು

"ಅದೆಲ್ಲ ಆಯಿತು, ನಿನ್ನ ಮುಂದಿನ ಜೀವನಕ್ಕೇ ಊರುಗೋಲು ಬೇಕಲ್ಲ ? ಅದರ ವಿಷಯ ಏನಾದರೂ ನೀನು ನಿರ್ಧರಿಸಿದ್ದರೆ ಹೇಳು" ಎಂದು ಸ್ಪಷ್ಟವಾಗಿ ರಾಯರು ಶಂಕರನಿಗೆ ಕೇಳಿಯೇ ಬಿಟ್ಟರು

"ಸ್ವಯಂವರವೆ ?"

ರಾಯರು ನಗುಮೊಗದಿಂದ ಇದ್ದರು.

"ಅದೊಂದು ಸಮಸ್ಯೆಯೇ ?"

"ಜಟಿಲವಾದ ಜೀವನ ಸಮಸ್ಯೆಯೇ ಅದು!"

"ನಿಜವನ್ನೆ ನುಡಿದಿರಿ"

"ನಿನ್ನ ವಿಚಾರ ಹೇಳು"

"ಊರಲ್ಲಿಯ ತಂಡೂಲಧ್ವಂಸ ಸಮಾಜದ ಸುದ್ದಿ ನಿಮಗೂ ಮುಟ್ಟಿರಬಹುದು ಆದರೂ ನಾನು ಅಂಥ ಲೂಸ್ ಲಾಯಿಫ್ (Loose Life) ಬಾಳುತ್ತಲಿಲ್ಲವೆಂದು ನಿಮಗೆ ತಿಳಿದಿರಬಹುದ"

"ನಿನಗೆ ನೀತಿ ಕಲಿಸಲು ನಾನು ನಿನ್ನನ್ನು ಮಾತಾಡಿಸಿದ್ದಲ್ಲ ನಿನ್ನ ವ್ಯಕ್ತಿತ್ವ ನನಗೆ ಗೊತ್ತಿಲ್ಲದ್ಧೇ ಶಂಕರಾ ? ಮಾನವ ಒಬ್ಬಂಟಿಗನಾಗಿ ಬಾಳಲಾರ ಹುಟ್ಟು ಸಾವುಗಳ ಮಧ್ಯ ಧಾರಾವಾಹಿಯಾಗಿ ಹರಿಯುವ ಜೀವನ ಪ್ರವಾಹಕ್ಕ ಜೋಡಿ ಬೇಕು ಎರಡು ದಡಗಳಿಲ್ಲದೆ ಜೀವಗಂಗೆ ಓತಪ್ರೋತವಾಗಿ ಸಾಗಲಾರಳು ಹೆಣ್ಣು—ಗಂಡುಗಳೆರಡರ ಸಮರಸ ಬಾಳೇ ಲೋಕದಲ್ಲಿ ಸುಖವೀಯುವ ಸ್ವರ್ಗ ತಾವು ಸುಖಿಸುವಾಗ ಪರರನ್ನು ಮರೆಯದಿರುವುದು ನಮ್ಮ ವ್ಯಕ್ತಿತ್ವಕ್ಕೆ ಸ್ವರ್ಣಕಲಶವಿಡಬಲ್ಲ ಗಣವಾಗಿರುತ್ತೆ ಒಟ್ಟು ಜೀವನ ಪ್ರವಾಹಕ್ಕ ನಮ್ಮ ಕೈಯಿಂದ ಪ್ರತ್ಯೇಕವಾದ ಕಾಣಿಕೆಯನ್ನು ಏನಾದರೂ ಸಲ್ಲಿಸಲು ಸಾಧ್ಯವಿದ್ದರೆ ನಾವು ಅಂದರೆ—ಅಂಥ ವ್ಯಕ್ತಿಗಳು ಧನ್ಯರೆನ್ನಬೇಕು ಇಂಥ ಪ್ರತ್ಯೇಕ ಪಾರಿತೋಷಕಗಳೆಂದರೆ ಕಲೆಯ ಮುಖಾಂತರ ಸಲ್ಲಿಸುವ ಸೇವೆ ಅಥವಾ ಮತ್ತಾವ ವಿಧದಿಂದಲೋ ಸಲ್ಲಿಸುವ ಸೇವೆ ಅದರಿಂದ ತನಗೂ ತೃಪ್ತಿ, ಮಿಕ್ಕವರಿಗೂ ಹಿತವುಂಟು

"ಮಾತಾಡುತ್ತ ಸರಣಿ ತಪ್ಪಿತು ಇರಲಿ, ನೀನು ಸುಮತಿಯನ್ನು ಮದುವೆಯಾಗಬೇಕೆಂದು ನಿಶ್ಚಯಿಸಿದ್ದಿಯಾ ? ಬಯಸಿದ್ದಿಯಾ?" ಎಂದು ರಾಯರು ಸಂಕೋಚಪಡದೆ ಕೇಳಿದರು

ಶಂಕರ ಕ್ಷಣ ಹೊತ್ತು ಕಲ್ಲಾದರೂ ಮರುಕ್ಷಣಕ್ಕೆ ತನ್ನ ಉತ್ತರವನ್ನು ಕೊಡದಿರಲಿಲ್ಲ

"ಬಯಸಿದ್ದೇನೇನೋ ನಿಜ ಆದರೆ ನಿರ್ಧರಿಸುವ ಕೆಲಸ ನನ್ನದೊಬ್ಬನದ್ದೇ ಅಲ್ಲವಷ್ಟೇ ?"

"ಅದು ನಿಜ ಅವಳೂ ಕಾಯಾ-ವಾಚಾ ಮನಸಾ ನಿನ್ನನ್ನು ಒಪ್ಪಬೇಕು ಆದರೆ ನೀನೇನು ಅವಳನ್ನು ಮದುವೆಯಾಗಲು ಬೆದರಬೇಡ ಅಂದರೆ—ಅವಳ ಗುಹ್ಯರೋಗದ ಬಗ್ಗೆ ನೀನು ಅಂಜುವ ಕಾರಣವಿಲ್ಲ ಅದೀಗ ಸಂಪೂರ್ಣ ಗುಣವಾಗಿದೆಯೆಂದರೂ ಸರಿಯೆ ಆದರೆ ರೋಗಿಷ್ಠಳನ್ನು ಮದುವೆಯಾಗುವ ವಿಚಾರ ನಿನ್ನ ತಾಯಿಗೆ ಸರಿದೋರಿ ಬರಲಿಲ್ಲ ಅವಳ ಸಮ್ಮತಿ ನಿನಗೆ ಸಿಗಲಾರದು ಹಾಗೆಂದು ನೀನೇನು ಚಿಂತಿಸುವ ಕಾರಣವಿಲ್ಲ ನಿಮ್ಮಿಬ್ಬರ ಸಮ್ಮತಿಯಿದ್ದರೆ ನಿನ್ನ ತಾಯಿಗೆ ತಿಳಿಹೇಳಿ ಅವಳ ಒಪ್ಪಿಗೆಯನ್ನು ಆಶೀರ್ವಾದವನ್ನು ದೊರಕಿಸಿ ಕೊಡುವುದು ನನ್ನ ಕೆಲಸ ಮುಖ್ಯವಾಗಿ ನಿಮ್ಮಿಬ್ಬರ ಸಮರಸವಾದ ಸಮ್ಮತಿ ನನಗೆ ಬೇಕಾಗಿದೆ, ಹಾಗಿದ್ದರೆ ಹೇಳಿಬಿಡು ಆಡಂಬರವಿಲ್ಲದೆ ಮದುವೆಯ ಶಾಸ್ತ್ರವನ್ನು ಮುಗಿಸಿ ಬಿಡುವ"

ಶಂಕರ ವಿಚಾರ ಮಗ್ನನಾಗಿ ಕುಳಿತುಬಿಟ್ಟ ಅವನ ತಲೆಯಲ್ಲಿ ಹಿಂದಿನ ಘಟನೆಗಳ ತಾಂಡವ ನೃತ್ಯ ತೊಡಗಿತ್ತು

ಸುಮತಿ ತನ್ನ ಮಾತಿಗೆ ಒಪ್ಪಲಾರಳೆಂಬ ಕರಾಳ ಸಮಸ್ಯೆ ಅವನೆದುರು ಕುಣಿಯತೊಡಗಿತು ಈಗ ಈಗಿನ ಸುಮತಿಯೆ ಬೇರೆಯೆಂಬ ಭಾವನೆ—ಅನುಭವ ಅವನಿಗ ಇಷ್ಟರಲ್ಲೆ ಆಗಿತ್ತು ಹಿಂದಿನ ಸುಮತಿ ಕ್ಷಮಾಮೂರ್ತಿ ! ತಾಳ್ಮೆಯ ಸಾಗರವೇ ಆ ಸುಮತಿ ! ಸಹನೆಯ ಸಮುದ್ರವೆ ಅವಳ ಹೃದಯವಾಗಿತ್ತು ಅಂದಿನ ದಿನಗಳ ಸುಮತಿಯ ಸ್ವಭಾವಕ್ಕೂ ಇಂದಿನದಕ್ಕೂ ಅಜಗಜಾಂತರ ಇಂದಿನ ಸುಮತಿ ಶಿವೆ—ಕಾಳಿ—ಚಂಡಿ—ಮಾಕಾಳಿ! ಲೋಕವನ್ನು ನುಂಗುವಷ್ಟು ಶಕ್ತಿಯುತವಾಗಿದ್ದಾಳೆ ಅವಳು ರಕ್ಕಸಿಯೇ ? ಸ್ತ್ರೀ ರಾಕ್ಷಸಿಯೇ ಅವಳು—ಖಂಡಿತಕ್ಕೂ ! ದೇಹಬಲದಿಂದ ಅವಳು ರಕ್ಕಸಿಯಂತೆ

ಕಾಣಲಾರಳು ಅವಳ ಮನೋಭೂಮಿ—ಕುರುಭೂಮಿ! ಅಲ್ಲಿ ಸೀತೆ ಪಾರ್ವತಿ, ದ್ರೌಪದಿ, ಶೂರ್ಪನಖಿ, ಮಂಡೋದರಿ, ಸಾವಿತ್ರಿ, ಅಹಲ್ಯೆ, ಕೌಸಲ್ಯೆ, ಕೈಕೆ—ಮೊದಲಾದ ಭಾರತದ ಪುರಾಣ ಸ್ತ್ರೀಯರು ಪ್ರತ್ಯಕ್ಷರಾಗಿ ತಮ್ಮ ತಮ್ಮ ಗುಣಾವಗುಣಗಳ ಮೂರ್ತಿಮಂತ ಚಿತ್ರಗಳನ್ನು ಕನ್ನಡಿಸಿದ್ದರು ಭಾರತದ ಸ್ತ್ರೀಜೀವಜ್ಯೋತಿಗಳೆಲ್ಲ ಅಲ್ಲಿ ಬೆಳಗಿದ್ದರು! ಜಗತ್ತಿನ ಸ್ತ್ರೀಜೀವ ಜ್ಯೋತಿಗಳ ಅವತಾರವನ್ನೂ ಆಕೆ ಅಭ್ಯಸಿಸಿದ್ದಳು!

ಮ್ಯಾಡಂ ಕ್ಯೂರಿ, ಜೋನ್ ಆಫ್ ಆರ್ಕ, ನೈಟಿಂಗೇಲ್, ವಿಕ್ಟೋರಿಯಾ ಮಹಾರಾಣಿ, ಈಜಿಪ್ಟಿನ ರೋಮಿನ ರಾಣಿಯರ ಅಮರಣ ಶೃಂಗಾರ ವೃತವನ್ನೂ ಆಕೆ ತುಲನಾತ್ಮಕ ದೃಷ್ಟಿಯಿಂದ ವಿವೇಚಿಸಿದ್ದಳು ಹಲವಾರು ದಿವಸಗಳ ಜಾಡ್ಯದ ಚಿಕಿತ್ಸಾ ದಿನಗಳಲ್ಲಿ ಆಕೆ ತನ್ನ ಸರ್ವಸ್ವವನ್ನು ಜಗತ್ತಿನ ಸ್ತ್ರೀಜ್ಯೋತಿಗಳನ್ನು ಕಾಣುವುದರಲ್ಲಿ ತೊಡಗಿಸಿದ್ದಳು ಆ ಬಗ್ಗೆ ಶಂಕರನೊಡನೆ ಸುಮತಿ ಮುಸಲಧಾರೆಯಂತೆ ತರ್ಕವಾಣಿ ಹರಿಯಿಸಿದ್ದಳು ಶಂಕರ ಬೆಕ್ಕಸ ಬೆರಗಾಗಿದ್ದ! ಅವಳನ್ನು ಆತ ಮಾತಾಡಿಸಲು ಹವಣಿಸುತ್ತಿದ್ದ ಉದ್ದೇಶ ತೀರ ಭಿನ್ನವಾಗಿತ್ತು! ವಾದರಂಗಕ್ಕೆ ಇಳಿದಾಗ ತನ್ನ ಉದ್ದೇಶವನ್ನು ತೊರೆದು ಪ್ರಸ್ತುತಕ್ಕೆ ಹೆಚ್ಚು ಲಕ್ಷವಿತ್ತು ಸೋತು ಹೋಗುತ್ತಿದ್ದ

ಸರಲ ಹೃದಯದ—ಸೌಮ್ಯ ಹೆಣ್ಣೊಂದು ಈ ತೆರದಿಂದ ಅದ್ಭುತ ರೂಪ ತಾಳೀತೆಂಬ ಕಲ್ಪನೆಯನ್ನು ಆತ ಮಾಡಿರಲಿಲ್ಲ ಸುಮತಿ—ಕಾಮ-ಪ್ರೇಮಗಳ ವಿಷಯವನ್ನೆ ಎತ್ತುತ್ತಿರಲಿಲ್ಲ ಅದು ಅವಳಲ್ಲಿ ಬತ್ತಿ ಹೋದಂತೆ ಶಂಕರನಿಗೆ ಭಾಸವಾಗುತ್ತಿತ್ತು! ಮುಂದೆ ಬರಲಿರುವ ಯಾವ ಘಟನೆಗಾಗಿ ಇವಳ ಮನವಿಂತು ಬಲಗೊಳ್ಳುತ್ತಲಿದೆಯೆಂಬುದು ಅವನಿಗೆ ತಿಳಿಯದಾಯಿತು! ಅವಳ ವಿಚಾರಧಾರೆಯೇ ಪರಿವರ್ತನೆಗೊಂಡಿತ್ತು ತಾನು ಹೆಣ್ಣು—ಎಂಬುದನ್ನು ಮರೆತಂತೆಯೂ ಅವಳು ವರ್ತಿಸುತ್ತಿದ್ದಳಂತೆ!

ಕೆಲ ದಿವಸಗಳ ಪರ್ಯಂತ ಅವಳ ಪಾಂಡಿತ್ಯಪೂರ್ಣ ವಾಕ್ಸರಣಿಯನ್ನು ಕೇಳಿ ಶಂಕರ ಅವಳಿಗೆ ಯಾವುದೋ ಮನೋರೋಗ ವ್ಯಾಪಿಸಿರಬೇಕೆಂದು ತಪ್ಪು ನಿರ್ಧಾರಕ್ಕೆ ಬಂದಿದ್ದ ಆದರೆ ದಿನಗಳೆದಂತೆ ಅವಳ ಕಾಯಿಲೆ ಶಮನವಾದಷ್ಟಕ್ಕೆ ಅವಳ ಓದು ಶರಗತಿಯಿಂದ ಸಾಗುತ್ತಿತ್ತು ಅಲಗಿನಂತೆ ಅವಳ ತರ್ಕ ಸರಣಿ ಪರಪಕ್ಷವನ್ನು ಸೀಳುತ್ತಿತ್ತು ತನ್ನ ಅಸ್ವಾಸ್ಥ್ಯದ ಅವಸ್ಥೆಯಲ್ಲಿ

ಆಕೆ ಡಾಕ್ಟರ ಕೃಷ್ಣರಾಯರ ದವಾಖಾನೆಯಲ್ಲಿರುವ ಸಮಸ್ತ ಕನ್ನಡ ಪುಸ್ತಕಗಳನ್ನು ಓದಿ ನೀರು ಕುಡಿದಿದ್ದಳು ತಾನು ಇಂಗ್ಲೀಷನ್ನೂ ಕೆಲ ದಿನಗಳಲ್ಲಿ ಕರತಲಾಮಲಕಗೊಳಿಸುವೆನೆಂಬ ಆತ್ಮವಿಶ್ವಾಸ ದೃಢತ್ವ ಅವಳಿಗಿತ್ತು !

ವಿಶ್ವದ ಸ್ತ್ರೀಜೀವನದ ಐತಿಹ್ಯವೇನೆಂದು ಆಕೆ ಸಂಶೋಧಿಸಬೇಕೆಂದು ರಾಯರೊಡನೆಯೂ ವಾದಿಸಿದ್ದಳು ! "ಸ್ತ್ರೀಯಸ್ಯ ಚರಿತ್ರಂ ದೇವೋ ನ ಜಾನಾತಿ ಕುತೋ ಮನುಷ್ಯಃ" ಎಂದು ರಾಯರು ಹೇಳಿದಾಗ ಸುಮತಿಗೆ ನಿಜವೆನಿಸಿದರೂ ಅದನ್ನು ಆಕ ತನ್ನ ತಲೆಯ ತರ್ಕದ ತಕ್ಕಡಿಯಲ್ಲಿ ತೂಕಮಾಡುವುದನ್ನು ತೊರೆಯಲಿಲ್ಲ ಆ ಮಾತು ಅವಳಿಗೆ ಯೋಗ್ಯವೆನಿಸಲಿಲ್ಲ ಅದರಲ್ಲಿ ಹುರುಳಿಲ್ಲವೆಂದು ಬಗೆದಳಾಕ ಹೆಣ್ಣು ಗಂಡಿನಂತೆ ದೇಶವನ್ನು ನೋಡಬಲ್ಲದು—ಕಾಪಾಡಬಲ್ಲದು ಎಂಬ ವಿಚಾರವಾಣಿಯನ್ನು ಸುಮತಿ ವ್ಯಕ್ತಪಡಿಸಿ ಶಂಕರನೊಡನೆ ತರ್ಕಕ್ಕೆ ಇಳಿದು ರಾತ್ರಿ ಇಡೀ ನಿದ್ದೆಯಿಲ್ಲದೆ ಕಳೆದಿದ್ದಳು

ತಾನೂ ಒಬ್ಬಳು ನೈಟಿಂಗೇಲ್ ಆಗುವೆ, ಒಬ್ಬಳು ಮ್ಯಾಡಂ ಕ್ಯೂರಿ ಯಾಕೆ ಆಗಬಾರದು ? ಒಬ್ಬಳು ಜೋನ್ ಆಫ್ ಆರ್ಕ ಆಗಬಾರದೇ ? ಕಿತ್ತೂರು ಚೆನ್ನಮ್ಮನಂಥವರು ನಮ್ಮ ಭಾರತದಲ್ಲಿ ಜನಿಸಿದರು ಲಕ್ಷ್ಮಿಬಾಯಿ ಝಾಂಸಿ ಜನ್ಮದಾಳಿದ ನಮ್ಮ ಭಾರತ ಕೇವಲ—ಪುರಾಣದ ಸೀತೆ ಸಾವಿತ್ರಿ ಅಹಲ್ಯ ಪಾರ್ವತಿಯರ ಸಹನಶೀಲತೆಗಳನ್ನು ಅಲಂಕರಿಸಿ ಹೆಣ್ಣಾಗಿ ಕೂಡುವುದು ನ್ಯಾಯವೇ ? ಸರಿಯೇ ? ನಮ್ಮಲ್ಲಿ ಯಾಕೆ ನೈಟಿಂಗೇಲ್ ಇಲ್ಲ ? ಮ್ಯಾಡಂ ಕ್ಯೂರಿ ಭಾರತದಲ್ಲಿ ಜನಿಸಬಾರದೇಕೆ ? ಅಲ್ಲ-ಭಾರತ ಮ್ಯಾಡಂ ಕ್ಯೂರಿಯಂಥವಳನ್ನು ಯಾಕ ಪಡೆಯಬಾರದು ? ಭಾರತದ ಸ್ತ್ರೀಯರು ಇಂದಿನಂತೆ ಬಣ್ಣದ ಚಿಟ್ಟೆಗಳಾಗಬೇಕೆ ಹಾಗಾದರೆ ? ಭಾರತದಲ್ಲಿ ಸ್ತ್ರೀಗೆ ಎಂಥ ಸ್ಥಾನವಿತ್ತು ? "ನಸ್ತ್ರೀ ಸ್ವಾತಂತ್ರ್ಯ ಮರ್ಹತಿ"ಯಿಂದ ಹಿಡಿದು ಎಲ್ಲಿ ನಾರಿಯರು ಪೂಜಿಸಲ್ಪಡುತ್ತಾರೋ ಅಲ್ಲಿ ದೇವರೂ ಪೂಜಿಸಲ್ಪಟ್ಟಂತೆ—ಎಂಬ ವಿರುದ್ಧ ವಾಣಿಗಳ ವರೆಗೆ ನಮ್ಮ ಸ್ತ್ರೀಸಮಸ್ಯೆ ತಲೆಗೆಡಿಸಿದೆ ! ನಮ್ಮ ಭಾರತೀಯ ಸಂಸ್ಕೃತಿ ಉಚ್ಚವೋ—ನೀಚವೋ ? ಪಾಶ್ಚಾತ್ಯ ಸಂಸ್ಕೃತಿ ನಮಗೆ ಶ್ರೇಯಸ್ಸನ್ನುಂಟು ಮಾಡಬಲ್ಲುದೋ ? ನಮ್ಮದು ನಮಗೆ—ಅವರದು ಅವರಿಗ, ಎಂಬ ತತ್ವ ಪ್ರನಾಳಿಕೆಯಲ್ಲಿ ನಾವು ನರಳಬೇಕೋ ? ಅಥವಾ ಅವರಲ್ಲಿನ ಒಳಿತನ್ನು ನಮ್ಮಲ್ಲಿಯ ಒಳಿತಿನಲ್ಲಿ ಸೇರಿಸಿ ರಸಪಾಕ ಮಾಡಿ ಸಂತೋಷಿ

ತೆರಬೇಕೇಕೇ? ಎಂಬ ನಾನಾ ತರಹದ ಜಟಿಲ ಸಮಸ್ಯೆಗಳ ರಣಾಂಗಣ ವಾಗಿತ್ತು—ಸುಮತಿಯ ತಲೆ!

ನಿಜಕ್ಕೂ ಶಂಕರ ಅವಳ ಕಾಯಿಲೆಯನ್ನು ಗುಣಪಡಿಸಿ ವರಿಸಬೇಕೆಂದು ಹಂಬಲಿಸಿದ್ದ ಆ ದಿಸೆಯಲ್ಲಿ ಆತ ಸಾಕಷ್ಟು ಪ್ರಯತ್ನವನ್ನೂ ಮಾಡಿಯಾಗಿತ್ತು ಅವಳು ಗುಣಹೊಂದುತ್ತಿರುವ ಒಂದು ರಾತ್ರಿ ಅವಳ ಕೈಯನ್ನು ಪ್ರೇಮಾತುರನಾಗಿ ಹಿಡಿದುಕೊಂಡು "ಸುಮಾ" ಎಂದಿದ್ದ ಶಂಕರ

ಅವನ ಲಲ್ಲೆ ಅವಳಿಗೆ ಬೇಕಾಗಿರಲಿಲ್ಲ ಅವಳ ವಿಚಾರವೇ ಬೇರೆ ದಿಸೆಯಲ್ಲಿ ಹೊರಟಿದ್ದ ಕಾಲವದು ಅವಳಿಗೆ ಜ್ಞಾನ ಪಿಶಾಚಿ ಅಂದು ಬಡಿದಿತ್ತೆಂದರೂ ಸರಿಯೇ ಆದರೆ ಆಕೆ ಶಂಕರನ ಮೇಲೆ ದೇಹಸುಖದ ಪ್ರೇಮವನ್ನು ತೋರಿಸುವುದನ್ನೇ ಬಿಟ್ಟಿದ್ದಳಷ್ಟೇ ಮೊದಲಿಂದಲಾದರೂ ಅವಳು ಅವನೊಡನೆ ಅಂಥ ದೈಹಿಕ ಕಾಮ ಪ್ರೇಮಗಳಿಗೆ ವಿರುದ್ಧವಾಗಿಯೆ ನಡೆದುಕೊಂಡು ಮಾನಸಿಕ ಸುಂದರ ಪ್ರೇಮದ ಸ್ನೇಹವನ್ನು ಅವನಿಗೆ ಎರೆಯುತ್ತಿದ್ದಳ ಇಂದಾದರೂ ಆ ಬಗೆಯ ಸುಂದರ ಪ್ರೇಮ ಅಡಗಿ ಹೋಗಿರಲಿಲ್ಲ ಅದು ವಿಶಾಲಿಸಿತ್ತು ಅದು ಅನಂತವಾಗುತ್ತಲೂ ನಡೆದಿದೆ ಮಾನವ ಕುಲಕ್ಕೆ ಎಲ್ಲಿ ಅಂತ್ಯವಿದಯೋ ಅಲ್ಲಿಯೇ ಅದರ ಕೊನೆಯೂ ಇದೆಯೆನ್ನಬೇಕು ಹಿಂದೆ ಕೆಲವೊಮ್ಮೆ ಆಕೆ ಅವನೊಡನೆ ತುಸು ಸಡಿಲಾಗಿ ಅಂಥ ಸುಂದರ ಪ್ರೇಮ ನಡೆಸಿರಬಹುದು ಆದರೆ ಅದೆಲ್ಲ ಈಗ ಅವಳ ಚಿತ್ತಫಲಕದಿಂದ ತೊಳೆದು ಹೋಗಿದೆ ಅದಕ್ಕೆ ಅಂಟಿದ ಚಿತ್ರವೇ ವಿಶ್ವಸುಂದರ ಪ್ರೇಮ! ಹಿಂದೆ ಅವಳು ಸೀತೆಯಾಗಿರಬಹುದು, ಪಾರ್ವತಿಯಾಗಿರಬಹುದು!

ಸ್ತ್ರೀ ಕೇವಲ ಸೀತೆಯಲ್ಲ

ಸ್ತ್ರೀ ಕೇವಲ ಸಾವಿತ್ರಿಯಲ್ಲ.

ಸ್ತ್ರೀ ಕೇವಲ ಅಹಲ್ಯೆಯೂ ಅಲ್ಲ!

ಅವಳು ಜಗನ್ಮಾತೆಯಾಗಬೇಕು ಜಗತ್ತನ್ನು ಉದ್ಧರಿಸುವ ಉದ್ಧಾರ ಶಕ್ತಿಯ ಎರಡರಲ್ಲಿ ಒಂದು ಭುಜ ಸ್ತ್ರೀಯದು—ಮತ್ತೊಂದು ಪುರುಷನದು! ಎಂದು ಮುಂತಾಗಿ ಅವಳು ಶಂಕರನೊಡನೆ ವಾದಿಸುತ್ತಿದ್ದ ದಿನಗಳವು ಈಗ ಆಕೆ ಶಂಕರನಿಗೇನು ಉತ್ತರಿಸಬೇಕು?

"ನನ್ನ ಕೈ ಬಿಡುತ್ತೀಯಾ ಸ್ವಲ್ಪ!"

ಶಂಕರನಿಗೆ ಆಕಾಶದಿಂದ ಧರೆಗೆ ತೂರಿದಷ್ಟು ನೋವು—ಅಚ್ಚರಿಗಳನ್ನು ತಂದೊಡ್ಡಿತು ಅವಳ ಆ ಮಾತು

"ನೀನು ನನ್ನನ್ನು ಬಿಟ್ಟು ಹಾಕುತ್ತೀಯಾ ಸುಮತೀ ?"

"ನಾನು ನಿನ್ನನ್ನು ಎಲ್ಲಿ ಕಟ್ಟಿಕೊಂಡಿದ್ದೇನೆ ?"

ಈ ಮಾತನ್ನು ಕೇಳಿ ಇವಳಿಗಿನ್ನೂ ಚಿತ್ತಸ್ವಾಸ್ಥ್ಯವಿಲ್ಲವೆಂದು ಒಮ್ಮೆ ಬಗೆದ ಶಂಕರ ಆದರೂ ಅವನ ಮನಸ್ಸು ಕೇಳದು ಮತ್ತೊಮ್ಮೆ ಅವಳನ್ನು ಕೇಳಬೇಕು ಎಂದದು ಬಯಸಿತು

ಬಿಟ್ಟ ಕೈಯನ್ನು ಪುನಃ ಹಿಡಿದು—

"ಸುಮತೀ!" ಎಂದು ಅಕ್ಕರೆಯ ಧ್ವನಿ ತೆಗೆದ ಶಂಕರ

"ಶಂಕರಾ—ನೀನು ನನಗೆ ತಲೆ ಸರಿಯಿಲ್ಲವೆಂದು ತಿಳಿಯಬೇಡ ನಾನು ಸಂಪೂರ್ಣ ನೆಟ್ಟಗಿದ್ದೇನೆ ನನಗೆ ಬುದ್ಧಿ ಭ್ರಮೆಯಾಗಿಲ್ಲ ನೀನು ತಪ್ಪು ತಿಳಿದುಕೊಂಡಂತೆ ನನಗೆ ಅನಿಸುತ್ತದೆ ನಾನು ನರಳುತ್ತಿದ್ದ ದೈಹಿಕ ಕಾಯಿಲೆಯೂ ನಿನ್ನ ಮತ್ತು ನಿನ್ನ ಹಿತೈಷಿ ರಾಯರ ಕೃಪೆಯಿಂದ ಕಡಿಮೆಯಾಗುತ್ತಿದೆ—ಆಗಿದೆ ನಿನ್ನ ಸ್ನೇಹದಿಂದಲ ನಾನು ದೊಡ್ಡವಳಾಗುತ್ತಿದ್ದೇನೆ ನಿನ್ನ ವ್ಯಕ್ತಿತ್ವವೇ ನನ್ನ ಈ ಸ್ತ್ರೀ ವ್ಯಕ್ತಿತ್ವಕ್ಕೆ ಹೊಸ ನೋಟವನ್ನು ಕೊಡಲು ಸಹಾಯಕಾರಿಯಾಯಿತು ನೀನು ನನ್ನನ್ನು ನಿಜಕ್ಕೂ ಅಮರಳನ್ನಾಗಿ ಮಾಡಿದಂತಾಯಿತು ನಿನ್ನಿಂದ ನನ್ನ ಕಣ್ಣು ತೆರೆದವು ನಿನ್ನಿಂದ ನನಗೆ ಸುಂದರ ಪ್ರೇಮದ ಸ್ವರ್ಗಸುಖವೂ ಸಿಕ್ಕಿತು ಇದಕ್ಕೂ ಹೆಚ್ಚು ಇನ್ನೇನು ಬೇಕು ನನಗೆ ?

"ಶಂಕರಾ ನೀನು ಇನ್ನಾದರೂ ನನ್ನವನು ನಾನೂ ನಿನ್ನವಳು, ಆದರೆ ಇಬ್ಬರು ಸ್ತ್ರೀಪುರುಷರಲ್ಲಿ ಕೇವಲ ಕಾಮ, ದಾಂಪತ್ಯ, ಶೃಂಗಾರ—ಇವುಗಳ ಹೊರತಾಗಿ ಬೇರೆ ರೀತಿಯಲ್ಲಿ ಸಂಬಂಧವಿರಬಾರದೆಂದು ನಿಸರ್ಗ ನೀತಿಯೇನಾದರೂ ಶಾಸನವಾಗಿದೆಯೇ? ಜಗತ್ತು ಏನೋ ತಿಳಿದಿರಬಹುದು, ಒಬ್ಬ ಪುರುಷ—ಒಬ್ಬಳು ಸ್ತ್ರೀಯ ನಡುವೆ ಸುಂದರ—ಸ್ನೇಹ, ಪ್ರೇಮ ಅಸಾಧ್ಯ ಎಂದು! ನಿಜ—ಸಡಿಲು ಜೀವಿಗಳಾದ ಇಬ್ಬರು ಸ್ತ್ರೀಪುರುಷರ ನಡುವೆ ಕೇವಲ ಇಬ್ಬರು ಪುರುಷರ ನಡುವೆ ನಡೆಯಬಹುದಾದ ಸ್ನೇಹವಿರಲಾರದು ಅಲ್ಲಿ ಕೇವಲ ದೂಷಣೆ, ಕಾಮ, ಘರ್ಷಣೆ, ಅಸಂತೃಪ್ತಿ—ಇವೇ ಮತ್ತೆ ಮತ್ತೆ

ಕಾಣಬಹುದು—ಹೊರತು ಸುಂದರ ಪ್ರೇಮ ಇಬ್ಬರು ಅಂಥ ವಿವಾಹ ಬಾಹಿರ ಸ್ತ್ರೀಪುರುಷರ ಮಧ್ಯದಲ್ಲಿ ಎಂದಿಗೂ ಇರಲಾರದು! ಜಗತ್ತಿನ ಚಕ್ಷು ಗಗನ ನೇತ್ರವಲ್ಲ" ಎಂದು ಸುಮತಿ ತನ್ನನ್ನು ದೂಷಿಸುತ್ತಿದ್ದ ಜಗತ್ತನ್ನೂ ನಿಂದೆಗೀಡು ಮಾಡುವಾಗ ಶಂಕರ ಬಿಮ್ಮಗಾದ

"ಶಂಕರಾ" ಎಂದು ಅವಳೇ ಕರೆದಳು

"ಸುಮತೀ"

"ನೀನು ಒಂದು ಒಳ್ಳೆಯ ಸುಂದರ ಹೃದಯವುಳ್ಳ ಹೆಣ್ಣನ್ನು ಮದುವೆಯಾಗು"

"ಇದೆಯೋ ನಿನ್ನ ಉಪದೇಶ ?"

"ನೀನು ಮದುವೆಯಾದರೂ ನನ್ನ ಪರದೈವವಾಗಿ ಉಳಿಯುವಿ ಲೋಕಕ್ಕೆ ಹೆದರಬೇಡ ನಾನು ನಿನ್ನ ಕೈ ಹಿಡಿದವಳಿಗೆ ಸವತಿಯಾಗುವುದಿಲ್ಲ—ಸುಮತಿಯಾಗುತ್ತೇನೆ ನನ್ನನ್ನು ಒಬ್ಬ ನಿನ್ನ ಗಂಡಸು ಸ್ನೇಹಿತನೆಂದು ತಿಳಿದುಕೋ ನಾನು ನಿನ್ನ ದೈಹಿಕ ಪ್ರೇಮವನ್ನು ಬಯಸುವುದಿಲ್ಲ ನೀನೂ ಅದನ್ನು ನನ್ನಿಂದ ಬಯಸಬೇಡ ನನ್ನ ಹೃದಯದಲ್ಲಿ ಇರಬಹುದಾದ ಪ್ರೇಮವೆಲ್ಲ ನಿನ್ನಂಥ ವಿಶ್ವಕ್ಕೆ ಮೀಸಲಿಟ್ಟಿದ್ದೇನೆ ನನ್ನಲ್ಲಿ ನರಕಾಮದ (Passion) ನಾಶವಾಗಿದೆ ಗಂಡಸಿಗೆ ಪತಿಯೇ ಪರದೈವವೆಂದು ಸಾರುವ ನಮ್ಮ ಭಾರತೀಯ ಉಚ್ಚ ಸಂಸ್ಕೃತಿಯ ಆಲದ ಮರದಡಿಯಲ್ಲಿ ಸೀತೆಯಾಗಿ ನಾನು ಒಂದೇ ಪತಿದೈವವನ್ನು ನೆಚ್ಚಿದೆ ನೇಣು ಹಾಕಿಕೊಂಡೂ ಆಯಿತು—ಅಂಥ ಪಾವಿತ್ರ್ಯ ಜೀವನಕ್ಕೆ ಆದರೆ ಲೋಕ ದೂಷಿಸುವ—ದೂಷಿಸಬಹುದಾದ ನಿನ್ನ—ಸಂಘದಿಂದ ನನ್ನ ಸುಂದರ ಪ್ರೇಮದ ಕಣ್ಣು ತೆರೆಯಿತು ನಾ-ನಿನ್ನು ಸ್ನೇಹಿತೆಯಾಗಬಹುದು! ಮತ್ತಾವಳೋ ಒಬ್ಬಳು ಸ್ತ್ರೀಯಾಗಬಹುದು

"ನಿನ್ನ ನೆರವು ಮಾತ್ರ ನನ್ನ ಜೀವನಕ್ಕೆ ಸದಾ ಸಿಗುತ್ತಿರಲಿ ನಿನ್ನ ಕೈ ಹಿಡಿದವಳ ದಾಸಿಯಾಗಲೂ ನಾನು ಸಿದ್ಧಳು ನೀನು ಮದುವೆಯಾಗು. ನಿನ್ನ ಜೀವನ ಪುಷ್ಪ ಅರಳಲಿ ಆದರ ಮಂದಾನಿಲವನ್ನು ನಾನೂ ಸುಖದಿಂದ ಸೇವಿಸಿ ಸಂತೋಷಿತಳಾಗುತ್ತೇನೆ ನಿನಗೊಂದು ಯೋಗ್ಯ ಹೆಣ್ಣು ಸಿಗುವುದು ಅಂಥ ದುಸ್ತರವೇನಲ್ಲ ನಿನ್ನ ಗುರುಸ್ಥಾನದಲ್ಲಿರುವ ಕೃಷ್ಣರಾಯ

ರನ್ನು ಕೇಳು" ಎಂದು ಹಿಮಾಲಯದಿಂದ ಸುರಿಯುವ ಬ್ರಹ್ಮಪುತ್ರಿಯ ಜಲ ಗತಿಯಿಂದ ಸುಮತಿ ತನ್ನ ವಾಕ್ಸರಣಿಯನ್ನು ನುಡಿಯುವುದನ್ನು ಕೇಳಿ ಶಂಕರ ತಬ್ಬಿಬ್ಬಾದ!

"ನಾನು ನಿನ್ನನ್ನೆ ಮದುವೆಯಾಗುವವನು!" ಎನ್ನಲು ಅಂಥ ಘನ ವ್ಯಕ್ತಿಯ ನಾಲಗೆ ಚಲಿಸಲಿಲ್ಲ ಆ ಸುಂದರ—ಪ್ರೇಮಿ ಸ್ತ್ರೀಯ ವ್ಯಕ್ತಿತ್ವದ ಪ್ರತಾಪ ಅಸ್ಥಿತ್ತು ಆವಳ ಮುಂದೆ ಇವನ ಶಕ್ತಿಸಿಂಧು ಉಡುಗಿ ಹೋದಳು

ಶಂಕರ ನಾಲ್ಕು ಹನಿ ಕಣ್ಣೀರೂ ಸುರಿಸಿದ!

ಸುಮತಿ ಕಿಲ್ಲನೆ ನಕ್ಕಳು

ಅವನ ಮುಖ ಕಪ್ಪಾಯಿತು

"ನೀನು ಹೆಣ್ಣು!" ಎಂದಳಾಕೆ

"ನೀನು ಎಂಥ ಪಾಶಾಣ ಹೃದಯಿ!"

"ಈ ಮಾತನ್ನು ಹಿಂದೆ ತೆಗದುಕೊಳ್ಳು ಶಂಕರಾ"

"ತೆಗೆದುಕೊಂಡೆ ಸುಮತೀ!"

"ಹೂಂ—ಹಾಗೆ ಹೇಳು"

"ಮತ್ತೇನು ಹೇಳಲಿ?"

"'ನಾನು ಮದುವೆಯಾಗುತ್ತೇನೆ' ಅನ್ನು"

"ನಾನು ಮದುವೆಯಾಗುತ್ತೇನೆ."

"ತಾ ನಿನ್ನ ಕೈ"

ಶಂಕರ ಅವಳಿಗೆ ತನ್ನ ನೀಳವಾದ ಕೈಯನ್ನು ಕೊಟ್ಟನು ಆಕೆ ಅದನ್ನು ಚುಂಬಿಸಿದಳು ಎಂಥ ಮೋಹಿನಿ ಶಕ್ತಿ ಅದರಲ್ಲಿ ಇತ್ತೋ—ಬಲ್ಲವ ರಾರು?

ಶಂಕರನ ದೇಹದಾದ್ಯಂತ ವಿದ್ಯುತ್ತು ಸಂಚರಿಸಿತು. ಅವನ ಮೈ ಕುದಿ ಯಿತು! ಮುಖ ಕೆಂಪೇರಿತು! ನಾಲಗೆಯ ಶಕ್ತಿ ಉಡುಗಿ ಹೋಯಿತು! ಹೃದಯ ನೂರ್ಮಡಿಸಿತು ಮೈ ಬೆವರತೊಡಗಿತು ಅವನಲ್ಲಿ ಇಲ್ಲಿಯ ವರೆಗೆ ಸುಪ್ತಚಿತ್ತನಾಗಿ ನಿದ್ರಿಸುತ್ತಿದ್ದ ಕಾಮಪುರುಷ ಎಚ್ಚರಗೊಂಡೇ ಬಿಟ್ಟ' ಕುಂಭಕರ್ಣನ ಎಚ್ಚರ ಅವನದು! ಶಂಕರನ ಮೈಯಲ್ಲಿ ನಡುಗು ಪ್ರಾರಂಭಿ ಸಿತು.

ದೈತ್ಯನಂತೆ ಅವಳ ಮೇಲೆ ಎರಗುವ ಶಕ್ತಿ ಅವನಿಗೆ ಬಂತು ಏನು ಮಾಡಲೂ ಶಕ್ತಿ ಇಲ್ಲದಂತೆ ಅನಿಸತೊಡಗಿತು ಕೊನೆಗೆ ಅವಳ ಕೈಯನ್ನಾದರೂ ಹಿಡಿಯಬೇಕೆಂದು ತನ್ನ ಕೈನೀಡಿದ ಅವಳ ಕೈಯ ಬದಲು-ಕಂಪಾದ ಗುಲಾಬಿ ತುಟಿಗಳು ತಾಗಿದವು! ಅಲ್ಲಿಗೇ ಮಾಂಸಕ್ಕೆ ಎರಗುವ ರಣಹದ್ದಿನಂತೆ ತನ್ನ ನರ ತುಟಿಗಳನ್ನು ಒಯ್ದು ಅವಚಿ ಬಿಟ್ಟ ಕೈಗಳೆರಡೂ ಅವಳ ರುಂಡವನ್ನು ಬಳಸಿದವು ಅವಳು ಅವನಿಂದ ಕೂಸರಿಕೊಳ್ಳಲು ಯತ್ನಿಸಲಿಲ್ಲ, ನರಪ್ರೇಮ ನರಾಹುತಿಯ ರಸವನ್ನು ಹೀರಿತು!

ನಾಲ್ಕುದಿನ ಶಂಕರ ಸಂಪಿಗೆಗೆ ಕಾಲಿಡಲಿಲ್ಲ ಸುಮತಿಯೂ ಪುಸ್ತಕ ಓದುತ್ತ ಓದುತ್ತ ಕಳೆದು ಹೋದ ಸನ್ನಿವೇಶವೊಂದನ್ನು ನೆನೆ-ನೆನೆದು ನಗುತ್ತಿದ್ದಳು ತನ್ನ ಅಳವು ಮೀರಿ ಯಾವ ಶಕ್ತಿ ಅಂತು ಶಂಕರನನ್ನು ಸ್ವೀಕರಿಸಿತು—ನೆಳೆಯಿತು—ಎಂಬುದನ್ನು ಆಕೆ ಅರಿತವಳಲ್ಲವಾದರೂ ಅಂದಿನಿಂದ ದೇಹಾಂತ ಪರ್ಯಂತ ಪುರುಷ ಸಾನ್ನಿಧ್ಯವನ್ನು—ಸಂಘವನ್ನು ಮಾಡಲಾರೆನೆಂಬ ಪಣ ತೊಟ್ಟಳೋ—ಅವಳ ದೇಹ—ಮನಸ್ಸುಗಳ ಸ್ಥಿತಿಯೇ ಅದರಂತೆ ವರ್ತಿಸತೊಡಗಿತೋ ಎಂಬುದು ಮೇರು—ಪ್ರಶ್ನೆ, ತಿಳಿಯ ಲಾರದ್ದು ಹಿರಿಯ ಪ್ರಶ್ನೆಯೇ ಅದು

ಕಾಲಪುರುಷ ಆ ಸನ್ನಿವೇಶವನ್ನು ಅವಳ ಚಿತ್ತದಿಂದ ಬೇಗನೆ ಸೆಳೆದೊಯ್ದು ಬಿಟ್ಟನು ಬದಲು ಅವಳಲ್ಲಿ ಜ್ಞಾನದೈತ್ಯನನ್ನು ಪ್ರವೇಶಗೊಳಿಸಿದನೆಂದರೂ ತಪ್ಪಾಗದು ಅಂತೇ ಶಂಕರ ಬೆದರುವಂತೆ ಅವನನ್ನು ಮೊದಲು ಮಾತಾಡಿಸಿದವಳೂ ಸುಮತಿಯೇ! ಈಗ ಅವನೊಡನೆ ಮಾತಾಡುವಾಗ ಆಕೆ ಮೊದಲಿನ ಸಲುಗೆಗಿಂತ ಸುಂದರತ್ವವನ್ನು, ಅಜ್ಞಾನಗಿಂತ ಜ್ಞಾನವನ್ನು, ನಟನೆಗಿಂತ ನಯಜ್ಞತೆಯನ್ನು ಹೆಚ್ಚಾಗಿ ಪ್ರದರ್ಶಿಸತೊಡಗಿದಳು ಶಂಕರನೂ ಅವಳನ್ನು ಮದುವೆಯಾಗುವ ಆಸೆಯನ್ನು ತೊರೆಯಬೇಕಾಯಿತು ಆದರೆ ಆತ ಬೇರೆ ಹೆಣ್ಣಿನೊಡನೆ ಮದುವೆಯಾಗಬೇಕೆಂಬ ಅವಳ ಒತ್ತಾಸೆ, ಕಟ್ಟಪ್ಪಣೆ—ಮಿಗಿಲಾಗುತ್ತ ಬಂತು ಅವಳ ಅಜ್ಞಾಧಾರಕ ಸೇವಕನಂತೆ ಅವನು ನಡೆಯುವಂತಾಯಿತೆಂದರೂ ತಪ್ಪಲ್ಲ, ಹೆಚ್ಚಿನ ಮಾತೂ ಅಲ್ಲ

ಇತ್ತ ಶಂಕರ–ಸುಮತಿಯರಲ್ಲಿ ಈ ತರಹದ ನವ್ಯ ಭಾವನೆ ಮೈದೋರಿದ ಮೇಲೆ ಲೋಕಕ್ಕೆ ಅವರಿಬ್ಬರೂ ಮದುವೆಯಾಗುತ್ತಾರೆಂಬ ಸುಳ್ಳು ಸುದ್ದಿ ಹಬ್ಬಿ

ಸಿದ ಜನರಾರೆಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ ಕೃಷ್ಣರಾಯರಾದರೂ—ಮೇಲಿನ ಘಟನೆ ನಡೆದು ಎಷ್ಟೋ ದಿವಸಗಳಾದ ಮೇಲೆ ಯಾಕೆ?–ಎರಡು ಮೂರು ತಿಂಗಳು ದಾಟಿದ ಮೇಲೆ ಅವನ ಮದುವೆಯ ವಿಚಾರ ತೆಗೆದದ್ದು

ಮನಸ್ಸಿಲ್ಲದಿದ್ದರೂ ಆತ ಸುಮತಿಯ, ಸುಬ್ಬಿಯ ಹಾಗೂ ಕೃಷ್ಣರಾಯರ ಒತ್ತಾಯಕ್ಕೆ ಮದುವೆಯಾಗುವ ದಿನಗಳು ಬಾರದಿರಲಿಲ್ಲ

ಸುಮತಿಯೊಡನೆ ಅಂದು ಪಶುವಿನಂತೆ ವರ್ತಿಸಿದ ಮೇಲೆ ಅವನಿಗೆ ಮಾತಾಡಲಿಕ್ಕೆ ನಾಚಿಕೆ ಎನಿಸಿದ್ದೂ ಇದೆ ಧೈರ್ಯವೂ ಇರಲಿಲ್ಲ—ಎನ್ನುವುದಕ್ಕಿಂತ ಅದು ಕಡಿಮೆಯಾಗಿತ್ತೆನ್ನುವುದು ಲೇಸು ಅಪರಾಧಕ್ಕಿಂತ ಹೆಚ್ಚು ಅಸಹ್ಯತೆ ಆ ಬಗ್ಗೆ ಅವನಲ್ಲಿ ತಲೆದೋರಿತು ಅದೆಲ್ಲ ಬಹಳ ದಿನ ಉಳಿಯಲೂ ಇಲ್ಲ

ಮುಂದೆ ಒಂದು ವರ್ಷದ ಪರ್ಯಂತ ಶಂಕರನ ಮದುವೆಯಾಗಲಿಲ್ಲ. ಸುಮತಿಯೂ ಒಂದು ವರುಷವನ್ನು ಸಂಪೂರ್ಣ ದವಾಖಾನೆಯಲ್ಲೆ ಕಳೆಯಬೇಕಾಯಿತು ಕಾಯಿಲೆ ಸಂಪೂರ್ಣ ಗುಣವಾಗಿದ್ದರೂ ಅವಳ ಅಭ್ಯಾಸ ಕಾಮನೆ ವರ್ಧಿಸತೊಡಗಿತ್ತು ಒಬ್ಬ ಇಂಗ್ಲೀಸು ಬಲ್ಲ ತರುಣ ವೈದ್ಯನೊಡನೆ ಆಕೆ ಇಂಗ್ಲೀಷಿನ ಅಭ್ಯಾಸವನ್ನೂ ತೊಡಗಿದಳು ಆತ ಅದೇ ಹೊಸದಾಗಿ ಆ ದವಾಖಾನೆಗೆ ಬಂದಿದ್ದ ಸುಮತಿಯ ರೂಪ ಸೌಂದರ್ಯಕ್ಕೆ ಮರುಳಾದವರಲ್ಲಿ ಮೊದಲಿಗನೆಂದರೂ ಸರಿಯೆ ಅವಳ ಹೃದಯದೊಳಗೆ ಯಾವ ಬಡಬಾನಲದ ದಳ್ಳುರಿ ಇತ್ತೆಂದು ಅವನಿಗೆ ವಿದಿತವಾಗಿರಲಿಲ್ಲ ಆತ ಅವಳನ್ನು ಗುಪ್ತದೃಷ್ಟಿಯಿಂದ ನೋಡತೊಡಗಿದ್ದ

ಅವನೊಡನೆ ಸುಮತಿಯೆ ದಿಟ್ಟತನದಿಂದ ಸಂಭಾಷಣೆ ಗೈಯುತ್ತಿದ್ದಳು ಒಮ್ಮೆ ಅವಳು ನಿರ್ಭೀತಿಯಿಂದ "ನೀವು ನನಗೆ ಇಂಗ್ಲೀಸು ಹೇಳಿಕೊಡುತ್ತೀರಾ ?" ಎಂದು ಕೇಳಿದ್ದಳು ಆತ ಚಾತಕಪಕ್ಷಿಯಂತೆ ಅವಳ ಸಾನಿಧ್ಯವನ್ನು ಬಯಸುತ್ತಿದ್ದವನು ಮರುನುಡಿಯದೆ "ಓ ಎಸ್ ಮ್ಯಾಡಮ್" ಎಂದುಬಿಟ್ಟ

"ನಿಮಗೆ ಯಾವ ಸಮಯ ಅನುಕೂಲವಾಗುತ್ತೆ ?" ಎಂದು ಸುಮತಿ ಕೇಳಿದ್ದಳು

"At any time you can come" ಎಂದು ಅವನು ಇಂಗ್ಲೀಷಿನಲ್ಲೆ ಅವಳಿಗೆ ಹೇಳಿದ್ದ

"ರಾತ್ರಿ ಒಂಬತ್ತು ಗಂಟೆಯ ಮೇಲೆ ನಿಮಗೆ ಅನುಕೂಲವಾಗಬಹುದೆ ?" ಎಂದು ಕೇಳಿದಾಗ ಅವನಿಗೆ ಸುಮತಿಯ ಮಾತು ಸ್ವರ್ಗಸುಖವನ್ನು ಎರೆದಿತ್ತು "Very Convenient time indeed" ಎಂದು ಆತ ನಲಿದಾಡಿದ್ದ ಅಲ್ಲದೆ "ಇಂದೇ ರಾತ್ರಿಯಿಂದ ಅಭ್ಯಾಸ ತೊಡಗುವ" ಎಂದು ಸುಮತಿ ಹೇಳಿದಾಗ ಅವನು ತಿಳಿದುಕೊಂಡ ಅರ್ಥವೇ ಬೇರೆಯಾಗಿತ್ತು

ಸರಿ, ಸುಮತಿಯ ಇಂಗ್ಲೀಷು ವಿದ್ಯಾಭ್ಯಾಸ ಆ ವೈದ್ಯನ ನೇತೃತ್ವದಲ್ಲಿ ಪ್ರಾರಂಭವಾಯಿತು ಕೆಲ ದಿನಗಳಲ್ಲೆ ಆಕೆ ಅವನಿಗೆ ಗುರು ಆಗುವ ಸಂಭವವೂ ಬಂದಿತ್ತು ಯಾಕಂದರೆ ಅವನ ಲಕ್ಷ್ಯ ಪಾಠ ಹೇಳುವ ಕಡೆಗಿರದೆ ಅವಳ ಸೌಂದರ್ಯದ ಮಧುಚಷಕವನ್ನು ಈಂಟುವುದರಲ್ಲಿ ತೊಡಗಿತ್ತು ಹೀಗಾಗಿ ಸುಮತಿ ಅವನನ್ನು ಮರುಳನನ್ನಾಗಿ ಮಾಡುತ್ತಿದ್ದಳು ಆಕೆ ಹಾಗೆಂದು ಅವನು ಕಲಿಸುತ್ತಿದ್ದ ಪಾಠಗಳಲ್ಲಿ ಪಾರಂಗತಳಾಗುತ್ತಿದ್ದಿಲ್ಲ ಎಂದಲ್ಲ ಅವಳ ಪ್ರಖರ ಪಾಂಡಿತ್ಯದಲ್ಲಿ ಆ ಬಡ ವೈದ್ಯ ತೊಳಲಾಡುತ್ತಲೂ ಇದ್ದ ಅಂತೇ ಅವಳ ಸುಂದರ ದೇಹಕಾಂತಿಯನ್ನು ಕಂಡು ಅವನಿಗೆ ಕಾಮಜ್ವಾಲೆ ಸಹಿಸಿಕೊಳ್ಳಲಿಕ್ಕೆ ಸಾಧ್ಯವಾಗಲಿಲ್ಲ

ದಿನದಿಂದ ದಿನಕ್ಕೆ ಅವನ ಮನಸ್ಸು ಪ್ರೇಮಸಮಾಧಿಯಲ್ಲಿ ತಲ್ಲೀನಗೊಂಡು ತನ್ನ ಕರ್ತವ್ಯವನ್ನು ತೊರೆದು ಬಿಡುತ್ತ ಬಂತು ಅವನು ಯಾವುದೋ ಒಂದು ಗುಪ್ತ ಚಿಂತನೆಯಲ್ಲಿ ಬಿದ್ದಿದ್ದಾನೆಂದು ಆಸ್ಪತ್ರೆಯ ಜನರ ಅರಿವಿಗೂ ಬಾರದಿರಲಿಲ್ಲ ಅವರ ವಕ್ರದೃಷ್ಟಿಗೆ ಆತ ತುತ್ತಾದ

ಒಮ್ಮೆ ಸುಮತಿಗೆ ಇಂಗ್ಲೀಷಿನನಲ್ಲಿ ಒಂದು 'ಅನಂಗಲೇಖ' ಬರೆದು ನಾಲ್ಕು ದಿನ ರಜೆ ತೆಗೆದುಕೊಂಡು ಊರಿಗೆ ಹೋದ ಸುಮತಿ ಆ ಪತ್ರದ ಮುಲೋದ್ದೇಶವನ್ನು ತಿಳಿದಳು ಅವಳ ಮೊಗದ ಮೇಲೆ ವಿಕಟ ನಗೆಯೊಂದು ನಲಿದು ಮಾಯವಾಯಿತು !

ಆ ಸಂಗತಿಯನ್ನು ಯಾವನಿಗೂ ಗೋಚರಿಸದಂತೆ ಗುಟ್ಟಾಗಿಟ್ಟಳು ಶಂಕರನಿಗೂ ತಿಳಿಸಲಿಲ್ಲ ಆ ಪತ್ರವನ್ನು ಮಾತ್ರ ಕಾಯ್ದು ಇಟ್ಟಳು ಆ

ವೈದ್ಯ ರಜೆ ಮುಗಿದ ಮೇಲೆ ದವಾಖಾನೆಗೆ ಬರುವುದನ್ನೆ ಆಕೆ ಕಾಯುತ್ತಿದ್ದ ಳೆಂದು ಕಾಣುತ್ತದೆ ಇನ್ನು ಅವನ ಸಹಾಯವಿಲ್ಲದೆ ತಾನು ಇಂಗ್ಲೀಷನ್ನು ಅಭ್ಯಸಿಸಬಹುದೆಂಬ ಧೈರ್ಯ ಅವಳಿಗೂ ಬಂದಿತ್ತು ಆದರೆ ಅವನಿಗೆ ನಾಲ್ಕು ಮಾತು ಹೇಳಬೇಕೆಂಬ ಉತ್ಕಟವಾದ ಇಚ್ಛೆ ಅವಳಿಗಿತ್ತು

ರಜೆ ಮುಗಿಸಿಕೊಂಡು ವೈದ್ಯ ಮತ್ತೆ ತನ್ನ ಕಾಯಕಕ್ಕೆ ಹೆಗಲು ಕೊಟ್ಟು ದುಡಿಯತೊಡಗಿದ ಮೊದಲಿನಂತೆ ಅವನ ನಡಾವಳಿಕೆ ಇಲ್ಲವೆಂದು ಆಸ್ಪತ್ರೆಯ ಜನರಿಗೆ ಅವನನ್ನು ಕಂಡೊಡನೆ ಗೊತ್ತಾಯಿತು ಅಂದು ರಾತ್ರಿ ಸುಮತಿಯೇ ಅವನ ಕೋಣೆಗೆ ಅಭ್ಯಾಸದ ನೆವದಿಂದ ಹೋದಳು

"Come on" ಎಂದು ಆತ ಅವಳನ್ನು ಸ್ವಾಗತಿಸಿದ

"Thanks for your kind reception" ಎಂದು ಇಂಗ್ಲೀಷಿನಲ್ಲಿ ಅವನಿಗೆ ಉತ್ತರಿಸುವಷ್ಟು ಸುಮತಿ ಚತುರಳಾಗಿದ್ದಳು

"ನಾನಿನ್ನು ನಿಮ್ಮ ಮುಂದೆ ಶೇಕ್ಸಪಿಯರನ ಪ್ಲೇಯ್ಸ ರೀಡ ಮಾಡಬೇಕೆಂದಿದ್ದೇನೆ" ಎಂದು ಆತ ಮಾತಿಗೆ ಮೊದಲು ಮಾಡಿದ

"ಅವನ 'ರೋಮಿಯೋ ಎಂಡ್ ಜೂಲಿಯಟ್' ನಾನು ನಿನ್ನೆ ಓದಿ ಮುಗಿಸಿದ್ದೇನೆ ಜ್ಯೂಲಿಯಟ್ ಎಂಥ ಪುಕ್ಕಿ ಎಂದು ನಕ್ಕು ಮೂದಲಿಸಿದ್ದೂ ಆಯಿತು ಈಗ 'ಜ್ಯೂಲಿಯಸ್ ಸೀಜರ್' ನಾಟಕವನ್ನು ಓದುತ್ತ ಇದ್ದೇನೆ 'ಕಿಂಗ್ ಲಿಯರ್' ಓದಬೇಕೆಂಬ ಹಂಬಲ ತುಂಬವುಂಟು ಆದರೆ ಸದ್ಯ ಅದರ ಪ್ರತಿ ಆಸ್ಪತ್ರೆಯ ಪುಸ್ತಕ ಭಾಂಡಾರದಲ್ಲಿ ಇಲ್ಲ 'ಎಂಟನಿ ಎಂಡ್ ಕ್ಲಿಯೋಪ್ಯಾಟ್ರಾ'ವನ್ನೂ ಓದಬೇಕಾಗಿದೆ ಕ್ಲಿಯೋಪ್ಯಾಟ್ರಾಳಂಥ ದೃತ್ಯಳನ್ನು ನಾನೂ ನೋಡಬೇಕು" ಎಂದು ಸುಮತಿ ಹೇಳುವಾಗ ವೈದ್ಯ ತಬ್ಬಿಬ್ಬಾದ!

"ನಾನು ಬಯಸಿದ್ದನ್ನು ನೀವು ಮಾಡಿಯೆ ಬಿಟ್ಟಿರುತ್ತೀರಿ! I Think our reasoning is same" ಎಂದು ಒಂದು ವಿಧವಾಗಿಯೆ ವೈದ್ಯ ಅವಳಿಗೆ ಉತ್ತರಿಸಿದ

ಸುಮತಿಯ ಮುಖದ ಬಣ್ಣ ಬದಲಾಯಿತು

ಕ್ಷಣ ಹೊತ್ತು ಯೋಚಿಸಿ ಆಕೆ ಆವನತ್ತ ನೋಡಿದಳು

ಆಗ ಅವನು ಎದ್ದು ಹೋಗಿ ಬಾಗಿಲು ಮುಚ್ಚಿ ಬಂದು, "ನಾನು

ಕೋಣೆಯ ಬಾಗಿಲು ಮುಚ್ಚಿದ್ದೇನೆ ಇಲ್ಲಿ ಪರರಿಗೆ ಪ್ರವೇಶವಿಲ್ಲ! ಯಾರಿಗೂ ಪರ್ಮಿಶನ್ನೇ ಇಲ್ಲ" ಎಂದು ಆತ ಹೇಳುವಷ್ಟರಲ್ಲಿ ಸುಮತಿ, "except thieves!" ಎಂದು ನಕ್ಕಳು ಅವಳ ಲೇವಡಿ ಕೇಳಿ ನಗಬೇಕಾಯಿತು

ಮುಂದೆ ಆತ ಕ್ಷಣ ಹೊತ್ತು ಸುಮ್ಮನೆ ಕೂತು ಆಲೋಚಿಸುತ್ತಿದ್ದ ಏನೋ ಕೇಳಬೇಕೆಂದು ಅವನ ಮನಸ್ಸಿನಲ್ಲಿ ಇದ್ದಂತೆ ಸುಮತಿಗನಿಸ ತೊಡಗಿತ್ತು ಆದ್ದರಿಂದ ಆಕೆಯೇ ಅವನಿಗೆ "ತಾವು ಯಾಕೋ ಆಲೋಚ ನಾಪರವಶರಾದಂತಿದೆ!" ಎಂದು ಕೇಳಿದಳು

"ಸುಮತೀ!" ಎಂದು ಆತ ಅವಳ ಮುಖ ನೋಡಿದ

ಆಕೆ ಕ್ಷಣಮಾತ್ರದಲ್ಲೆ ಅವನ ಕಣ್ಣ ಮುಂದೆ ಅವನೇ ಬರೆದ ಅನಂಗ ಲೇಖವನ್ನು ಹಿಡಿದಳು

"ಓ ಮೈ ಗೋಡ್!" ಎಂದು ಆತ ತಲೆಯ ಮೇಲೆ ಕೈಯಿಟ್ಟು ಕಣ್ಣು ಮುಚ್ಚಿಕೊಂಡ

"Please dont fear ಹೆದರಬೇಡಿ I wont do any harm to you" ಎಂದು ಸುಮತಿ ಹೇಳಿದಾಗ ಅವನಿಗೆ ಧೈರ್ಯ ಬಂತು

"I am sorry sorry " ಎಂದು ಆತ ಅಲ್ಲಿಂದ ಏಳಲು ಪ್ರಯತ್ನಿಸುತ್ತಿದ್ದ

"ನಿಮಗೆ ನನ್ನ ಹೃದಯ ತಳಿಗೆಯನ್ನು ತೋರಿಸಬೇಕಾಗಿದೆ ನೀವು ನನ್ನ ಬಗ್ಗೆ ತಪ್ಪು ತಿಳಿದುಕೊಂಡಂತಿದೆ ನಿಮ್ಮಂಥ ಸಹಸ್ರಾರು ಜನ ಪುರು ಷರು ನನ್ನಂಥವಳನ್ನು ಹೀಗೆ ಅರ್ಥಮಾಡಿಕೊಳ್ಳುತ್ತಾರೆ ನಿಮ್ಮ ಪತ್ರವನ್ನು ಓದಿದೆ ಅರ್ಥವಾಯಿತು!" ಎಂದು ಸುಮತಿ ಹೇಳುವಾಗ ಆ ತರುಣ ವೈದ್ಯನ ಕಣ್ಣಲ್ಲಿ ನೀರೂರತೊಡಗಿತು

"ನನ್ನದು ತಪ್ಪಾಯಿತು mis—understand ಮಾಡಿಕೊಳ್ಳಬೇಡಿ, ಪ್ಲೀಸ್ ಪ್ಲೀಸ್ " ಎಂದು ಆತ ಅಲ್ಲಿಂದ ಪಾರಾಗುವ ಬಗೆ ಹೇಗೆಂದು ಚಿಂತಿಸುತ್ತಿದ್ದ ಅವನಿಗೆ ಕಪಾಳ ಮೋಕ್ಷಕ್ಕಿಂತ ಹೆಚ್ಚಿನ ವೇಧನೆ ಯನ್ನು ಸುಮತಿಯ ದಿಟ್ಟತನದ ಮಾತುಗಳುಂಟು ಮಾಡಿದವು

"ನಾನೇನು ನಿಮ್ಮನ್ನು ಇನ್ಸಲ್ಟ್ ಮಾಡುವುದಿಲ್ಲ . ನಿಮ್ಮ

ಬಗ್ಗೆ ನನಗೆ ಕನಿಕರ ಹುಟ್ಟುತ್ತದೆ ನನ್ನ ಬಗ್ಗೆಯೂ ಕೆಡಕೆನಿಸುತ್ತದೆಂದು ಹೇಳುವುದಕ್ಕಿಂತ—ನನ್ನಂಥವರ ಬಗ್ಗೆ ಹೆಚ್ಚು ಕೆಡಕೆನಿಸುತ್ತೆ—ನನಗೆ! ನಾನು ಎಂದಿನಿಂದಲೋ ದೇಹಾಂತ ಪರ್ಯಂತ ಪುರುಷ ಪರಿಗ್ರಹಣ ಮಾಡಿ ಕೊಳ್ಳುವುದಿಲ್ಲೆಂದು ಶಪಥತೊಟ್ಟಿದ್ದೇನೆ ನನ್ನ ಸರ್ವಸ್ವವನ್ನು ನಿಮ್ಮಂಥ ವರಿರುವ—ನನ್ನಂಥವರಿರುವ ಜಗತ್ತಿಗೆ ಮೀಸಲಿಟ್ಟಿದ್ದೇನೆ ಆದ್ದರಿಂದ ನೀವು ನನ್ನ ಮೇಲೆ ಇಟ್ಟ ಕಾಮನೆಯನ್ನು ತೊರೆಯಬೇಕು ನನ್ನ ಬಾಳಿನಲ್ಲಿ ಅದರ ಅನುಭವ ಸಾಕಷ್ಟು ಆಗಿದೆ ಆದರಿಂದಲೇ ನಾನು ಹೀಗಾಗಿ ದ್ದೇನೆ ಇರಲಿ ಆ ವಿಚಾರ ನಿಮಗೆ ಹೇಳುವುದಿಲ್ಲ ಆದರೂ ನೀವು ನನಗೆ ಇಲ್ಲಿಯ ತನಕ ವಿದ್ಯಾದಾನ ಮಾಡಿದ ನಿಮ್ಮ ಶ್ರಮಕ್ಕೆ ನಾನು ನಾಳೆಯೇ ನಿಮಗೆ ಯೋಗ್ಯ ಪ್ರತಿಫಲ ಧನವನ್ನು ಗೌರವ ಪೂರ್ವಕ ಅರ್ಪಿಸುತ್ತೇನೆ ಇನ್ನು ಮುಂದೆ ನೀವು ನನಗೆ ಮೊದಲಿನಷ್ಟು ಮನಸ್ಸು ಗೊಟ್ಟು—ಶ್ರಮಪಟ್ಟು ಕಲಿಸುವುದು ಬೇಡ ಆದರೆ ನೀವೇನು ತಪ್ಪು ತಿಳಿದು ಕೊಳ್ಳಬಾರದು ನಿಮ್ಮಲ್ಲಿಯ ಅಂತೇ ನನ್ನಲ್ಲಿಯ ಸುಗುಣ ನಿಮ್ಮಲ್ಲಿ ಸೇರ ಬೇಕು ಮಾನವ ಮಾನವನಿಂದ ಕಲಿಯುವುದು—ಪಡೆಯುವುದು ಇದೇ-- ಫಲವನ್ನು ಒಬ್ಬರ ಕೆಟ್ಟಗುಣದಿಂದ ಮತ್ತೊಬ್ಬರಿಗೆ ಕೆಡಕಾಗುವುದಕ್ಕಿಂತ ಅವರಿಗೇ ಅದರಿಂದ ಕೆಡಕಾಗುತ್ತದೆ" ಎಂದು ಸುಮತಿ ಆವೇಶಗೊಂಡು ನಿರರ್ಗಳವಾಗಿ ನುಡಿಯುವಾಗ ಆ ವೈದ್ಯ ಬೆಚ್ಚಿ ಬಿದ್ದಂತೆ ಕುಳಿತುಬಿಟ್ಟ!

ಎಷ್ಟೋ ಹೊತ್ತಿನವರೆಗೆ ಅವಳ ಮುಖ ನೋಡಲಿಕ್ಕೂ ಅವನಿಗೆ ಧೈರ್ಯ ಸಾಲಲಿಲ್ಲ ಆ ಮೇಲೆ ಸಾವಕಾಶವಾಗಿ ಚೇತರಿಸಿಕೊಂಡು ಮಾತಾ ಡಲಿಕ್ಕೆ ಪ್ರಾರಂಭಿಸಿದನಾತ

"Angel ನೀವು ನನಗೆ ಅಮರ ಪಾಠ ಕಲಿಸಿದಿರಿ ನೀವು ನಿಜಕ್ಕೂ ದೇವಿ! ನಿಮ್ಮಂಥವರಿಗೆ ನನ್ನಂಥ ಅಜ್ಞ ಕಲಿಸಲು ಬಂದದ್ದು ಪಾಪ-ಮೋಕ್ಷ ಕ್ಕಾಗಿ—ವಿಮೋಚನೆಗಾಗಿ ನಿಮ್ಮ ಪ್ರಖರವಾದ ವ್ಯಕ್ತಿತ್ವದ ಮುಂದೆ ನನ್ನ ಕಾಮನೆಗಳು ನೀರಾಗಬೇಕಿತ್ತು ಆದರೆ ನಿಮ್ಮ ದರ್ಶನದಿಂದ ಅದು ಇಂದಾದರೂ ಆದದ್ದು ನನ್ನ ಪುಣ್ಯ ನೀವು ನನಗೆ ಅರ್ಪಿಸುವ ಗುರುದಕ್ಷಿಣೆ ಗಿಂತ ನಾನು ನಿಮಗೆ ಅರ್ಪಿಸಬೇಕಾದ ದಕ್ಷಿಣೆ, ಗೌರವ—ಸಾಲ ಎಷ್ಟೋ— ಯಾರು ಬಲ್ಲ? ನೀವು ನನ್ನ ಹೃದಯ ಜ್ಯೋತಿಯನ್ನು ಬೆಳಗಿಸಿದವರು.

ಆ ಪತ್ರವನ್ನು ಇತ್ತ ಕೊಡಿ ದಯವಿಟ್ಟು ಕೊಡಿರಿ ಇಲ್ಲದಿದ್ದರೆ ನೀವು ನನಗೆ ದ್ರೋಹ ಬಗೆದಂತಾಗುತ್ತದೆ ”

“ ನೀವದನ್ನು ತೆಗೆದುಕೊಂಡು ಏನು ಮಾಡುತ್ತೀರಿ ? ” ಎಂದು ಸುಮತಿ ಅನುಮಾನಿಸಿಯಾದರೂ ಪತ್ರವನ್ನು ಅವನ ಆಗ್ರಹದ ಮೇರೆಗೆ ಕೊಟ್ಟಳು

“ ಏನು ಮಾಡುತ್ತೇನೆಂದು ನಿಮ್ಮ ಕಣ್ಣಮುಂದೆ ತೋರಿಸುತ್ತೇನೆ ” ಎಂದಾತ ಅಲ್ಲಿಂದ ಎದ್ದು ಹತ್ತಿರದಿಂದಲೇ ಬೆಂಕಿಪೆಟ್ಟಿಗೆಯನ್ನು ತಂದನು

ಸುಮತಿ ಅವನತ್ತ ಮಂತ್ರಮುಗ್ಧಳಾಗಿ ನೋಡುತ್ತಿದ್ದಳು! ಅವನೇನು ಮಾಡುತ್ತಾನೆಂದು ಅವಳಿಗೆ ತಿಳಿಯಲಿಲ್ಲ

“ What is over is over ಆದದ್ದು ಆಯಿತು ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ ” ಎಂದಾಕೆ ಅವನನ್ನು ಸಂತೈಸಲೆತ್ನಿಸಿದಳು

“ ಆ್ಯಂಜಿಲ್, ನಾನೀ ಸುವರ್ಣ ಸನ್ನಿವೇಶವನ್ನು ನನ್ನ ಜೀವಂತ ಪರ್ಯಂತ ನೆನಪಿನಲ್ಲಿಟ್ಟುಕೊಳ್ಳುವಂತಾಗಬೇಕು ನಾನು ಅಮರ ಪಾಠವನ್ನು ಕಲಿತುಕೊಂಡೆ ನಾನೇನು ಮಾಡುತ್ತೇನೆ ನೋಡಿ ” ಎಂದಾತ ನಾಲ್ಕು ಫೂಲ್ಸ್‌ಕ್ಯಾಪ್ (Foolscap) ಹಾಳೆಗಳಲ್ಲಿ ತುಂಬ ಬರೆಯಲ್ಪಟ್ಟ ತನ್ನ ಪ್ರೇಮಪತ್ರಕ್ಕೆ ಅಷ್ಟು ಸೀಮೆ ಎಣ್ಣೆ ಹಾಕಿ, ಕಡ್ಡಿ ಕೊರೆದು ಬೆಂಕಿಕೊಟ್ಟನು

ಅವನೇನು ಮಾಡುತ್ತಾನೆಂದು ಸುಮತಿಗೆ ಇನ್ನೂ ತಿಳಿಯದಾಯಿತು “ ದೇವಿ—ನೀವೀ ಸ್ಥಳವನ್ನು ಬಿಟ್ಟು ಹೋಗಿರಿ ನನಗೆ ಒಬ್ಬಂಟಿಗನಾಗಿರಲು ಅವಕಾಶ ಕೊಡಿ ನಾನೇನು ಮಾಡುತ್ತೇನೆ—ಈ ಅಗ್ನಿಯಿಂದ ಎಂಬುದನ್ನು ತಾವು ಹೊರಗೆ ನಿಂತು ಕಾಣಬಹುದು ” ಎಂದು ಆತ ಹೇಳಿದಾಗ ಸುಮತಿ ಮಾತಿಲ್ಲದೆ ಹೊರಗೆ ಹೋದಳು !

ಅವನು ಕೋಣೆಯ ಬಾಗಿಲು ಮುಚ್ಚಿಬಿಟ್ಟ

ಒಳಗೆ ಆ ಕಾಗದದ ಉರಿ ಎದ್ದಿತ್ತು !

ಸುಮತಿ ಹೊರಗೆ ನಿಂತಿದ್ದಳು ಅವಳ ಮುಖದಲ್ಲಿ ವಿಕಟ ನಗುವೂ ಮೂಡಲಿಲ್ಲ

ಅರ್ಧ ಗಂಟೆಯ ಮೇಲೆ ಆತ ತನ್ನ ಬಲಗೈಗೆ ಬ್ಯಾಂಡೇಜು ಕಟ್ಟಿ

ಕೊಂಡು ಬಾಗಿಲು ತೆರೆದ

ಸುಮತಿ ಕೋಣೆಯನ್ನು ಪ್ರವೇಶಿಸಿದಳು

ಅಲ್ಲಿ ಕಾಗದದ ಬೂದಿ ಹಬ್ಬಿತ್ತು !

" ನೀವು ನಿಮ್ಮ ಬೆರಳುಗಳನ್ನು ಸುಟ್ಟುಕೊಂಡಿರಿ ! "

" Yes certainly angel " ಎನ್ನುತ್ತ ಗಂಟು ಮೂಟೆಗಳನ್ನು ಕಟ್ಟತೊಡಗಿದ ಎಡಗೈಯಿಂದ ಆತ ಕೆಲಸ ಮಾಡುತ್ತಿರುವುದನ್ನು ಸುಮತಿ ಕಂಡಳು ಅವನೊಡನೆ ಸಹಕರಿಸಲಿಕ್ಕೂ ಅವಳಿಗೆ ಮನಸ್ಸು ಬರಲಿಲ್ಲವೆಂದು ಕಾಣುತ್ತದೆ ಅವನೂ ಅವಳನ್ನು ಕರೆಯಲಿಲ್ಲ ವಾಯುವೇಗದಿಂದ ತನ್ನ ಸಾಮಾನು—ಸರಂಜಾಮುಗಳನ್ನೆಲ್ಲ ಪ್ಯಾಕ್ ಮಾಡಿಯಾಯಿತು ! ಸುಮತಿ ಸುಮ್ಮನೆ ಇದ್ದಳು !

" ಆ್ಯಂಜಿಲ್ ನಾನು ಹೊರಟೆ ನನ್ನ ಜೀವಮಾನ ಪರ್ಯಂತ ನಿಮ್ಮನ್ನು ನೆನಪಿಡುವಂತೆ ನನಗೆ ಮಹದುಪಕಾರ ಮಾಡಿದಿರಿ ಮನಸ್ಸಿನಲ್ಲಿ ನೀವು ಸದಾ-ಸರ್ವದಾ ನನ್ನ ಆ್ಯಂಜಿಲ್ ಆಗಿ ಉಳಿಯುವುದರಲ್ಲಿ ಸಂಶಯ ವಿಲ್ಲ ಆದರೆ ಈ ಭೌತಿಕ ದೇಹಕ್ಕೂ ನಿಮ್ಮ ಚಿಂತನೆಯ ಕುರುಹೊಂದು ಬೇಕೆಂದು ಕೈಬೆರಳುಗಳನ್ನು ಸುಟ್ಟುಕೊಂಡಿದ್ದೇನೆ ! ಇನ್ನೇನು ಆ್ಯಂಜಿಲ್—ನನಗೆ ಗುಡ್‌ವಿಶಸ್ ಕೊಡಿ , ನಿಮಗೆ ಗುಡ್‌ಬಾಯ್— ರಾಯರಿಗೆ ಚೀಟಿ ಬರೆದಿದ್ದೇನೆ ಅದನ್ನು ಅವರು ನಾಳೆ ನೋಡುತ್ತಾರೆ ನಾನಿನ್ನು ಈ ಊರಲ್ಲಿ ಇರಲಾರೆ—ಆ್ಯಂಜಿಲ್, ನಿಮ್ಮ ಅಥವಾ ನನ್ನ ಪುಣ್ಯ ದಿಂದ ನಮ್ಮ ಭೇಟಿ ಇನ್ನೊಮ್ಮೆ ಆಗಲಿ—ನಾನು ಹೊರಟೆ ಅಚ್ಛಾ-ಟಾಟ್ಟಾ!" ಎಂದು ಆತ ಹೊರಟೇ ಬಿಟ್ಟ ಹತ್ತಿರದಲ್ಲಿ ಹೋಗುತ್ತಿದ್ದ ಮೋಟಾರೂ ಅವನನ್ನು ಹತ್ತಿಸಿಕೊಂಡಿತು.

" ನಿಮಗೆ ಶುಭವಾಗಲಿ ! " ಎಂದು ಅವನನ್ನು ಸುಮತಿಯೂ ಸಾಗು ಹಾಕಿದಳು

* * * * *

ಕೃಷ್ಣರಾಯರಿಗೆ ಆ ವೈದ್ಯನ ಪಾಡು ಕೇಳಿ ತುಂಬವ್ಯಥೆಯಾಯಿತು ಜಗತ್ತಿನಲ್ಲಿ ಎಂಥೆಂಥ ನೊಂದ ಜೀವಿಗಳು ಇರುತ್ತಾರೆಂಬ ವಿಷಯ ಅವರಿಗೆ

ಅಪಾರವಾದ ಅನುಭವದಿಂದ ಎಂದೋ ಆಗಿತ್ತು ಕ್ಷಣ ಹೊತ್ತು ಅವನ ಬಗ್ಗೆ ಚಿಂತಿಸಿದರೂ ಅವನಿಗಾಗಿ ತಲೆಕೆಡಿಸಿಕೊಳ್ಳಲಿಲ್ಲ ಕೊನೆಗೆ ಸುಮತಿಗೆ ಇಂಗ್ಲೀಷಿನ ಜ್ಞಾನವನ್ನಾದರೂ ಮಾಡಿಕೊಟ್ಟು ಹೋದನೆಂದು ಕೃಷ್ಣ ರಾಯರೂ, ಶಂಕರನೂ ಅವನ ಬಗ್ಗೆ ಆದರವನ್ನೆ ವ್ಯಕ್ತ ಪಡಿಸಿದರು ಅವನ ಮನೆತನದ ಒಳನೋಟದ ಅರಿವಿಲ್ಲದ ಇವರಿಗೆ ಅವನ ಬಗ್ಗೆ ಹೆಚ್ಚಿನ ಸಂಗತಿ ಗಳ ಪರಿಚಯವಾಗಲಿಲ್ಲ ಅವನ ವೃತ್ತಾಂತಕ್ಕೆ ಅಂತ್ಯವನ್ನೂ ಕೊಡ ಬೇಕಾಯಿತು

ಸುಮತಿಯ ಆಗ್ರಹವೂ ಶಂಕರನಿಗೆ 'ನೀನು ಒಳ್ಳೆಯ ಹೆಣ್ಣನ್ನು ಮದುವೆಯಾಗು' ಎಂದು ಪ್ರಾರಂಭವಾಯಿತು ತಾಯಿ, ತಂಗಿ, ರಾಯರು, ಸುಮತಿ—ಎಲ್ಲರೂ ತನ್ನ ಮದುವೆಗಾಗಿ ಹಾತೊರೆಯುತ್ತಿರುವುದು ಅವನಿಗೂ ಆ ಬಗ್ಗೆ ಹೆಚ್ಚಿನ ಆಲೋಚನೆ ಮಾಡುವಂತೆ ಬಲವಂತಗೊಳಿಸಿತು

ರಾಯರ ಸಂಪಿಗೆಯ ದವಾಖಾನೆಯಲ್ಲೆ ಒಂದು ಒಳ್ಳೆಯ ಹೆಣ್ಣು ದಾದಿಯ ಕೆಲಸಕ್ಕಿದ್ದಳು ಸಾಕಷ್ಟು ವಿದ್ಯೆಯನ್ನು ಕಲಿತಿದ್ದಳು ಅಂಥ ವಳನ್ನು ಮದುವೆಯಾಗುವುದು ಅವನ ತಾಯಿಗೆ ಮೊದಲು ನೇರಿ ಬಾರ ದಿದ್ದರೂ ರಾಯರ ಮಾತಿನ ಮೋಹಿನೀ ಜಾಲದಿಂದ ಆಕೆ ಒಪ್ಪಿದಳು—ಆ ಮೇಲೆ ಯಾವ ಆಡಂಬರವಿಲ್ಲದೆ ಶಂಕರನ ಮದುವೆಯ ಶಾಸ್ತ್ರವೂ ಮುಗಿ ಯಿತು ಯಾವುದೋ ಒಂದು ಅವ್ಯಕ್ತ ಶಕ್ತಿ ಶಂಕರನು ಹೆಂಡತಿಗೆ "ಸುಮಾ" ಎಂದು ಹೆಸರಿಡುವಂತೆ ಮಾಡಿ ತನ್ನ ಲೀಲಾಜಾಲವನ್ನು ಪ್ರಕಟಪಡಿಸಿತು

ಮಗನ ಮದುವೆ ನೋಡಿ ಸಾಯುತ್ತೇನೆಂದು ಕಾದು ಕುಳಿತ ಸುಬಿ ಸಾಯಲಿಲ್ಲ! ಅವಳ ವಯಸ್ಸಿನ ಅನೇಕರು ಪಂಚತ್ವ ನೇರಿದ್ದರು ಅವಳಿಗೂ ಶಂಕರನ ಮಡದಿಯ ವಿನಯಜ್ಞತೆ ಬಹಳ ಸೇರಿಕೆಯಾಗಿತ್ತು ಆದರೆ ಇಂದಿನ ಸುಮತಿಯ ಪ್ರಖರ ಪಾಂಡಿತ್ಯದ ಮುಂದೆ ಸುಬ್ಬಿಯ ಜ್ಞಾನದ ನುಸಿ ಸುಟ್ಟು ಸುಣ್ಣವಾಗುತ್ತಿತ್ತು ಅವಳ ತಲೆಯನ್ನೂ ಶಿವರಾಯ ಬಂದು ಕೆಡಿಸಿ ಸತ್ತ ನೆಂದು ಅವಳು ಭಾವಿಸಿದ್ದಳು ಸೊಸೆಯನ್ನು ಮನೆಯಲ್ಲೆ ಕೆಲ ದಿವಸ ರಾಣಿಯಂತೆ ನಡೆಸಿದರೂ ಸುಮಾ ಬಹಳ ದಿನ ಕೆಲಸವಿಲ್ಲದೆ ಕೂಡಲು ಕೇಳಲಿಲ್ಲ ತಾನೂ ಶಂಕರನೊಡನೆ ದುಡಿಯುತ್ತೇನೆಂದು ಸಂಪಿಗೆಯ ದವಾಖಾನೆಯಲ್ಲಿ ತನ್ನ ಮೊದಲಿನ ಕೆಲಸಕ್ಕೆ ಕೂಡಿಕೊಂಡಳು

ಸಾಯಂಕಾಲ ಮಗ ಮತ್ತು ಸೊಸೆ ಹಾಗೂ ಸುಮತಿಯರು ಮನೆಗೆ ಬರುವುದನ್ನೇ ಸುಬ್ಬಿ ಕಾಯುತ್ತಿದ್ದಳು ಬಂದೊಡನೆ ಮೂವರಿಗೂ ಅವಳ ಅಸ್ಪೃಶ್ಯ ಆದರದ ಸ್ವಾಗತ ಸಿದ್ಧವಿರುತ್ತಿತ್ತು

ಒಮ್ಮೆ ಶಂಕರನ ತಾಯಿ "ಸುಮಾ" ಮತ್ತು "ಸುಮತಿ" ಯರಲ್ಲಿ ಕೇವಲ "ತಿ"ಯಲ್ಲಿ ಅಷ್ಟೆ ವ್ಯತ್ಯಾಸ ಎಂದಿದ್ದಳು

ಆಗ ಒಮ್ಮೆಲೆ ಸುಮತಿ, "ತಿಯಲ್ಲಿ ಅಲ್ಲ "ಮತಿ" ಯಲ್ಲಿ" ಎಂದು ಹೇಳಿದ್ದಳು

ಆ ಮಾತು ಸುಮಾಳಿಗೆ ಶಲ್ಯದಂತೆ ಇರಿದಿತ್ತು! ಅವಳ ಅಭಿಮಾನವೆ ಅದರಿಂದ ಕಳಚಿತೆಂದು ಆಕೆ ತಿಳಿದುಕೊಂಡಂತೆ ಇತ್ತು!

ಶಂಕರನಿಗೂ ಈ ಸಂಗತಿ ತಿಳಿಯಿತು ಆತ ಆ ಬಗ್ಗೆ ನೊಂದುಕೊಂಡು ಸುಮತಿಯ ವಿಷಯಕ್ಕೆ ತನ್ನ ಪತ್ನಿಯಲ್ಲಿ ಯಾವ ಪೂರ್ವಗ್ರಹದೋಷವೂ ಉಳಿಯದಂತೆ ಮಾಡಿದ್ದ ತನ್ನ ಉದ್ದೇಶವನ್ನೆ ಅವಳಿಗೆ ತಿಳಿಯಪಡಿಸಿದ್ದ ಅವಳನ್ನು ಆಕೆ ಸವತಿಯಂತೆ ತಿಳಿಯಬಾರದು ಅವಳೂ ತನ್ನ ಒಬ್ಬ ಪುರುಷ ಸ್ನೇಹಿತಳೆಂದು ತಿಳಿದುಕೊಳ್ಳಬೇಕು ಅವಳ ಬಗ್ಗೆ ತನಗೆ ಆದರ—ಪ್ರೇಮ ವಿಶ್ವಾಸವಿದೆಯೇ ಹೊರತು ಅವಳನ್ನು ನರಕಾಮುಕನಾಗಿ ತಾನು ಉಪಯೋಗಿಸಲಾರೆನೆಂದು ಸುಸ್ಪಷ್ಟವಾಗಿ ಶಂಕರ ಸುಮಾಳಿಗೆ ಹೇಳಿದ ಮೇಲೆ ಸುಮಾ ಸುಮತಿಯನ್ನು ಗೌರವ ಭಾವನೆಯಿಂದ ನೋಡತೊಡಗಿದಳು

ಅಂದಿನಿಂದ ಸುಮಾಳ ಹೃದಯದಲ್ಲಿ ಸುಮತಿಯ ಬಗ್ಗೆ ಯಾವ ಕೆಟ್ಟ ಕಲ್ಪನೆಯ ನೆರಳೂ ಹಾಯಲಿಲ್ಲ ಸುಮಾಳು ಆಕೆಯ ದಿವ್ಯಜ್ಞಾನದ ಲೀಲೆಗಳನ್ನು ಕಂಡು ಬೆರಗಾಗಿದ್ದಳು ಅವಳ ಮೈಯಲ್ಲಿ ಕರ್ತವ್ಯಪಿಶಾಚಿ ಸೇರಿದಂತೆ ಸುಮಾಳಿಗೆ ಅನಿಸುತ್ತಿತ್ತು ದಿನದ ಒಂದು ನಿಮಿಷವನ್ನೂ ಹಾಳು ಮಾಡದೆ ಸರ್ವಸ್ವವನ್ನೂ ಒಳ್ಳೆಯ ಉದ್ದೇಶಕ್ಕಾಗಿ ವ್ಯಯಗೊಳಿಸುವ ಸುಮತಿಯನ್ನು ಕಂಡು ಎಲ್ಲರೂ ಬೆರಗಾಗಿದ್ದರು ಸುಮಾ ಅವಳ ಬಗ್ಗೆ ಶಂಕರನೊಡನೆ ದಿನದಿನವೂ ಹೊಗಳದೆ ಮಲಗುತ್ತಿದ್ದಿಲ್ಲ

ಇಷ್ಟೆಲ್ಲ ಘನಸ್ಥಿತಿಕೆಗೆ ತಲುಪಿದ ಸುಮತಿಯು ತನ್ನ ಮಾವನ ಮನೆಯವರ ಬಗ್ಗೆ ಕಣ್ಣುಮುಚ್ಚಿ ಕೂಡಲಿಲ್ಲ, ತನಗೂ ನ್ಯಾಯವಾದ ಆಸ್ತಿಯ, ಸೊತ್ತಿನ ಪಾಲು ಬರಬೇಕೆಂದು ಟೊಂಕಕಟ್ಟಿ ವಾದಿಸಿದಳು ಶಿವರಾಯನ

ಅಣ್ಣತಮ್ಮಂದಿರು ಈ ತಂಟೆ ತೀರಿಸಲು ಪುನಾದಿಂದ ಊರಿಗೆ ಬರಬೇಕಾಯಿತು ಇಲ್ಲದಿದ್ದರೆ ತಾನೇ ಅಲ್ಲಿಗೆ ಬರುತ್ತೇನೆಂದು ಸುಮತಿಯು ಇಂಗ್ಲೀಷಿನಲ್ಲಿ ಬರೆದ ಪತ್ರವು ಅವರಿಗೆ ತಲಪಿತ್ತು ಇಂಗ್ಲೀಷಿನಲ್ಲಿ ವಕಾಲತ್ತು ಮಾಡುವ ತಾಟಕಿ ಯಾರಿವಳು ನೋಡೋಣವೆಂದು ಅವರೂ ಬಂದರು

ಸುಮತಿಯ ಮುಂದೆ ನಿಲ್ಲಲಿಕ್ಕೂ ಅವರಿಗೆ ದುಗುಡವೆನಿಸದಿರಲಿಲ್ಲ ಹಿಂದೆ ದಕ್ಕಿಸಿಕೊಂಡ ಚಿನ್ನಾಭರಣವನ್ನೆಲ್ಲ ಅವರು ಕಕ್ಕಬೇಕಾಯಿತು ಅಲ್ಲದೆ ನ್ಯಾಯವಾದ ಆಸ್ತಿ–ಸೊತ್ತಿನ ಪಾಲಿನ ಹಣವನ್ನೂ ಸುಮತಿಗೆ ಅವರು ಕೊಡಬೇಕಾಯಿತು ಕೋರ್ಟಿಗೆ ಹೋಗದೆ ಅವರು ಸಾಮೋಪಾಯದಿಂದಲೇ ಸುಮತಿಯ ನ್ಯಾಯವಾದ ಪಾಲನ್ನು ಕೊಟ್ಟರು ಸುಮತಿಗೆ ಇದರಿಂದ ಸಾಕಷ್ಟು ಹಣವೂ ಸಿಕ್ಕಿತು! ಆಕೆಗೆ ಸ್ವತಂತ್ರಳಾಗಿ—ದಿಟ್ಟೆಯಾಗಿ ಜೀವಿಸಲು ರಾಮಬಾಣದಂಥ ಹಣದ ಶಕ್ತಿಯೂ ಸಿಕ್ಕಂತಾಯಿತು

ಬಂದ ಹಣದಲ್ಲಿ ಸರಿಯಾಗಿ ಅರ್ಧವನ್ನು ತನ್ನ ಅಣ್ಣ ರಾಘವೇಂದ್ರನಿಗೆ ಹೊನ್ನಪ್ಪಯ್ಯನವರ ಸಮ್ಮುಖದಲ್ಲೆ ಕೊಡಹೋದಳು ಐದು ಸಾವಿರ ರೂಪಾಯಿಗಳನ್ನು ಕಂಡು ಹೊನ್ನಪ್ಪಯ್ಯನವರ ಬಾಯಿಯಲ್ಲೂ ದ್ರವವೂರಿತು! ಮಗಳ ಪುರುಷ ಶಕ್ತಿಯನ್ನು ಕಂಡು ಅವರು ಬೆರಗಾದರು!

ರಾಘವೇಂದ್ರ ಆ ಹಣ ಬೇಡವೆಂದರೂ ಸುಮತಿ ಕೇಳಲಿಲ್ಲ! ಈಗ ರಾಘವೇಂದ್ರನೇ ಊರಲ್ಲಿಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದ. ಹೊನ್ನಪ್ಪಯ್ಯ ವೃದ್ಧಾಪ್ಯದಿಂದ ಹಣ್ಣಾಗಿದ್ದರು

"ನನಗಾಗಿ ನೀನು ಪಟ್ಟ ಬವಣೆಗೆ ಈ ಹಣವೆಂದು ತಿಳಿಯಬೇಡ ಅದನ್ನು ನಾನು ಈ ಜನ್ಮದಲ್ಲಿ ಸಲ್ಲಿಸಲಾರೆ ಆದರೂ ನೀನು ನಿನ್ನ ಕಷ್ಟಾರ್ಜಿತ ಧನವನ್ನು ವ್ಯಯ ಮಾಡಿರುವೆ ಆದ್ದರಿಂದ ನಿನಗಿದು ಇರಲಿ" ಎಂದು ಐದು ಸಾವಿರ ರೂಪಾಯಿ ಸುಮತಿ ಕೊಟ್ಟಾಗ ರಾಘವೇಂದ್ರ ಮೀನಮೇಷ ಮಾಡಿದ

"ನಿನ್ನ ಹೆಸರಿನಲ್ಲಿ ಬೇಂಕಿನಲ್ಲಿ ಇಟ್ಟು ಬಿಡು" ಎಂದು ಏನೋ ಅನುಮಾನಿಸುತ್ತ ಹೇಳಿ

"ಐದು ಸಾವಿರ ರೂಪಾಯಿ ನನ್ನ ಹೆಸರಿನಲ್ಲಿ ಇಟ್ಟಿದ್ದೇನೆ! ಇದು ನಿನ್ನ ಲೆಕ್ಕದ್ದು" ಎಂದಳು ಸುಮತಿ

"ನನಗೇಕೋ ನಿನ್ನ ಹಣ ಪಡೆಯಲು ಮನಸ್ಸು ಬಾರದಲ್ಲಾ— ಸುಮತಿ!"

"ಮತ್ತೇನು ಮಾಡುವಿ? ಯಾಕೆ?"

"ಹಣ ಮಾನವರ ಗುಣಕ್ಕೆ ರೋಗ ಹಚ್ಚುವ ಪಿಶಾಚಿ! ಸುಮತೀ— ನೀನು ಇಷ್ಟು ಹಣ ನನ್ನ ಎದೆಯ ಮೇಲೆ ಹಾಕಿ ನನ್ನ—ನಿನ್ನ ಋಣವನ್ನು ಕಡಿದುಕೊಳ್ಳಲು ಈ ಹಂಚಿಕೆ ಹೂಡಿದಿಯಾ?" ಎಂದು ಕಣ್ಣೀರು ತುಂಬಿಸಿ ರಾಘವೇಂದ್ರ ಕೇಳುವಾಗ ಸುಮತಿಗೂ ನೋವಾಗದಿರಲಿಲ್ಲ!

"ಹಾಗೆಂದೂ ಇಲ್ಲ ಅಣ್ಣಾ!"

"ನಿನ್ನ ಬಗ್ಗೆ ಲೋಕ ಬೇಕಾದಷ್ಟು ಅಂದಿರಬಹುದು! ನಮ್ಮ ಸ್ವತಃ ತಂದೆಯವರೇ ನಿನಗೆ ಚಿತ್ರಹಿಂಸೆ ಕೊಟ್ಟಿರಬಹುದು! ಆದರೆ ನಾನು ನಿನ್ನ ಸಲುವಾಗಿ ಕೆಡಕು ಮಾಡಿಲ್ಲವಲ್ಲ ನಾನು ನಾಲ್ಕು ತಾವ್ರದ ದುಡ್ಡು ನಿನ್ನ ಸಲುವಾಗಿ ಖರ್ಚು ಮಾಡಿದ್ದೇನೆ ನಿಜ! ನನ್ನ ತಂಗಿಯ ಸಲುವಾಗಿ ನಾನು ಖರ್ಚುಮಾಡಿದರೆ ನೀನು ಅದನ್ನು ಹೀಗೆ ಹಿಂದೆ ನನ್ನ ಎದೆಯ ಮೇಲಿಟ್ಟು ಋಣಮುಕ್ತಳಾಗ ಬಯಸುತ್ತಿಯಾ?"

"ಅಂಥ ಮಾತು ಆಡದಿರು ಅಣ್ಣಾ! ನನ್ನ ಕಿವಿಯು ಇನ್ನೊಮ್ಮೆ ಆ ಮಾತುಗಳನ್ನು ಕೇಳಲಾರದು"

"ಸುಮತೀ! " ಎಂದು ನೋಟಿನ ಪೆಂಡಿಯನ್ನು ರಾಘವೇಂದ್ರ ಆತ್ತ ಸರಿಸಿಬಿಟ್ಟ

"ಅಣ್ಣಾ—ನೀನು ದುಃಖಿಸಬೇಡ ಧೈರ್ಯತಾಳು ನನಗೆ ಲೋಕವೇ ದ್ರೋಹ ಬಗೆದಿರಬಹುದು ಆದರೆ ನಾನದನ್ನು ನೆನೆಸಲಾರೆ ಅದಕ್ಕಾಗಿ ದುಃಖಿಸಲಾರೆ ನನ್ನ ಹೃದಯದಲ್ಲೂ ಯಾರನ್ನೂ ದೂಷಿಸಲಾರೆ ನನ್ನ ತಂದೆ ಯಾವಾಗಲೂ ನನ್ನ ತಂದೆಯೇ ಅವರು ಮಾಡಿದ್ದೆಲ್ಲ ನನ್ನ ಒಳಿತಿಗಾಗಿಯೇ ಆಯಿತಲ್ಲ!" ಎಂದು ಸುಮತಿ ಹೇಳುವಾಗ ಹೊನ್ನಪ್ಪಯ್ಯ ಬೆಪ್ಪಾಗಿ ಅವಳತ್ತ ನೋಡುತ್ತಿದ್ದರು ಅವರು ಉಕ್ತಿಹೀನರಾಗಿದ್ದರು

ರಾಘವೇಂದ್ರನೂ ಮೂಕನಾಗಿದ್ದ

ಸುಮತಿಯೇ ಪುನಃ ಮಾತಿಗೆ ಪ್ರಾರಂಭಿಸಿದಳು

"ನಿನಗೆ ಈ ಹಣ ಬೇಡವಾದರೆ ಬಿಡು ಅಪರೂ ನನಗಾಗಿ ತೋರಿಸಿದ

ಪ್ರೇಮಕ್ಕಾಗಿ—ವಾತ್ಸಲ್ಯಕ್ಕಾಗಿ—ನಾನು ಈ ಹಣವನ್ನು ನನ್ನ ಪ್ರೇಮದ ಪಾರಿತೋಷಕವೆಂದು ನಿನಗೆ ಅರ್ಪಿಸಿರುತ್ತೇನೆ ನಿನ್ನ ಋಣ ತೀರಿಸಲು ನಾನೆಷ್ಟರವಳು ? ನಿನ್ನ ಸಂಬಂಧವನ್ನು ನಾನೆಂತು ಕತ್ತರಿಸಿಕೊಳ್ಳಲಿ ? ಇನ್ನಾದರೂ ನೀನು ನನ್ನ ಜೀವನದ ಬಟ್ಟೆಯಲ್ಲಿ ಆಸರೆಯನ್ನೊದಗಿಸಲು ನೆರವಾಗಬೇಕು ನಿನಗೂ ನನ್ನ ಉಪಯೋಗ ಬೀಳಬಹುದು ನನ್ನ ಉಪಯೋಗ ಉಪಕಾರ ನಿನಗೊಬ್ಬನಿಗೇ ಅಲ್ಲ ನಿನ್ನ ಉಪಕಾರ—ಉಪ ಯೋಗವೂ ನನಗೊಬ್ಬಳಿಗೇ ಅಲ್ಲ ನಾಲ್ಕು ಜನರಿರುವ ಸುತ್ತುಮುತ್ತಲಿನ ಕ್ಷೇತ್ರಕ್ಕೇ ನಮ್ಮ ದೇಣಿಗೆ—ಕಾಣಿಕೆಗಳ ಅಗತ್ಯವಿದೆ ಅದರಂತ ನಾವು ಅಲ್ಲಿಂದ ಪಡೆಯುವುದೂ ಅನಂತವಲ್ಲದಿದ್ದರೂ—ಸಾಧನೆಯಿಂದ ಪಡೆದು ಕೊಳ್ಳಬಹುದಾದದ್ದು ಅಪಾರವಿದೆ !

"ಅಣ್ಣಾ, ನಿನಗೆ ಈ ಹಣ ಬೇಡವಲ್ಲ ? ಹಾಗಾದರೆ ನಿನ್ನ ಹೆಸರಿನಲ್ಲಿ ಇದನ್ನು ಸಂಪಿಗೆಯ—ಪ್ರಶಸ್ತವಾದ ಜಾಗೆಯಲ್ಲಿ ಈಗ ರಾಯರ ದವಾಖಾನೆ ಇರುವಲ್ಲಿ ಒಂದು "ಪ್ರೇಮನಿಲಯ"ವನ್ನು ಕಟ್ಟಿಸೋಣ ಅದರ ಸ್ಥಾಪ ನೆಯ ಕಾರ್ಯಕ್ಕೆ ನೀನಿಷ್ಟು ಹಣವನ್ನು ಕೊಟ್ಟಂತಾಗುತ್ತದೆ!" ಎಂದು ಹೇಳುವಾಗ ಅವಳಿಗೆ ಅಭಿನಂದನೆ ಸಲ್ಲಿಸಿ ಬೇಕಾದರೆ ಇನ್ನೂ ಐದು ಸಾವಿರ ರೂಪಾಯಿ ಕೊಡಬಲ್ಲೆನೆಂಬ ಸಮ್ಮತಿಯನ್ನು ಸೂಚಿಸಲಿಕ್ಕೂ ರಾಘವೇಂದ್ರ ನಿಗೆ ಬಾಯಿಯಲ್ಲಿ ದ್ರವವಿಲ್ಲವೆಂದು ಅನಿಸಿತು

ಅವಳೆಂದುದಕ್ಕೆ ಆತ ತನ್ನ ಸಮ್ಮತಿಯನ್ನು ಕೊಟ್ಟನೆಂತೂ ಸರಿಯೆ ಆದರೆ ಅಂದಿನಿಂದ ಅವನಿಗೆ ತಂಗಿಯೆಂದರೆ ಒಬ್ಬಳು ದೇವಿಯಂತೆ ಕಾಣ ತೊಡಗಿದಳು

ತನ್ನ ವಿಚಾರವನ್ನು ಅರುಹಿ ಆ ಹಣವನ್ನು ಡಾಕ್ಟರ ಕೃಷ್ಣರಾಯರ ವಶಕ್ಕೆ ಕೊಟ್ಟಳು "ಪ್ರೇಮನಿಲಯ" ಕಟ್ಟಿಸಲು ಅವರೂ ಆಲೋಚನೆ ಹಾಕಿದರು ಆದರೆ ಶೀಘ್ರದಲ್ಲೆ ಆ ಶುಭಕಾರ್ಯಕ್ಕೆ ಕೈಹಾಕಿ ದುಡುಕಲು ಹೋಗಲಿಲ್ಲ ಎಲ್ಲವನ್ನು ಅಚ್ಚುಕಟ್ಟಾಗಿ ಹಿಂದುಮುಂದಿನ ಯೋಚನೆ ಮಾಡಿ ವ್ಯವಸ್ಥಿತವಾಗಿ ಕೈಕೊಳ್ಳುವ ರಾಯರು ಆ ಕಾರ್ಯವನ್ನು ಕೆಲ ದಿವಸಗಳಲ್ಲೆ ಕೈಕೊಳ್ಳಬೇಕೆಂದು ನಿರ್ಧರಿಸಿದರು

ಕೆಲ ಕಾಲದಲ್ಲೆ ಸುಮತಿಯೂ ಸಂಪಿಗೆಯ ದವಾಖಾನೆಯಲ್ಲಿ

ದಾದಿಯ ಕೆಲಸಕ್ಕೆ ನಿಂತಳು ಅವಳ ಆರೈಕೆ—ಉಪಚಾರ ಮಾತೃಪ್ರೇಮ ದಂತೆ ಸುಖಕರವಾಗಿರುತ್ತದೆಂದು ರೋಗಿಗಳು ಹೇಳುತ್ತಿದ್ದರು ಎಷ್ಟು ಆತ್ಮ ಗಳಿಗೆ ಆಕೆ ಶಾಂತಿಯನ್ನು ಇತ್ತಳೆಂದು ಹೇಳಲಾಗದು ಆದರೂ ಆಕ ವೈದ್ಯ ಕೀಯವನ್ನು ಶಾಸ್ತ್ರೀಯವಾಗಿ ಕಲಿಯಲು ಹವಣಿಸುತ್ತಿದ್ದಳು ಹೆಚ್ಚಿನ ಅಭ್ಯಾಸಕ್ಕಾಗಿ—ಮಂಗಳೂರಿಗೋ—ಬೆಂಗಳೂರಿಗೋ — ಬೊಂಬಾಯಿಗೋ ಹೋಗಬೇಕೆಂದು ನಿರ್ಧರಿಸಿದ್ದಳು ಈಗ ಆಕ ಸ್ವತಂತ್ರಳಷ್ಟೆ? ಅಲ್ಲಿ ಹೋಗಿ ಆಸ್ಪತ್ರೆಗಳಲ್ಲಿ ದುಡಿದಾದರೂ ಅಭ್ಯಾಸ ನಡೆಸಿ—ಸಾಧ್ಯವಾದಷ್ಟು ಪ್ರವೀಣಳಾಗಬೇಕೆಂದು ಪಣತೊಟ್ಟು ಆಯಿತು ಶಸ್ತ್ರ ಚಿಕಿತ್ಸೆಯನ್ನೂ ಕೂಲಂಕಷವಾಗಿ ಕಲಿಯಲು ಅವಳ ಆತ್ಮ ಪರಿತಪಿಸುತ್ತಿದ್ದ ಕಾರಣ—ಬೆಂಗಳೂರಿಗೆ ಹೋಗುವ ಮನಸ್ಸು ವಿಪರೀತವಾಯಿತು

ಹಣಕ್ಕಾಗಿ ಅವಳೇನು ಚಿಂತಿಸಬೇಕಾಗಿರಲಿಲ್ಲ ಅವಳು ಹಾಗೆ ಚಿಂತಿಸು ವವಳೂ ಅಲ್ಲ ಈ ವಿಚಾರವನ್ನು ರಾಯರಿಗೆ ತಿಳಿಸಿಯೂ ಆಯಿತು

"ಪಾರಂಗತಳಾಗಿ ಮಾತ್ರ ಅಲ್ಲಿಯೇ ಕೂಡಬೇಡ ಹಳ್ಳಿಹಳ್ಳಿಗೂ ನಮ್ಮ ಸೇವೆ ಸಲ್ಲಬೇಕು ಕೇವಲ ಹಣವೇ ನಮ್ಮ ಗುರಿಯಾಗಬಾರದು ಬೇಕಾದರೆ - ಶಂಕರನೂ ಹೆಚ್ಚಿನ ಅಭ್ಯಾಸಕ್ಕ ಹೋಗಲಿ ಆದರೂ ಅನು ಭವದಿಂದ ಬರುವ ವಿದ್ಯೆ ಹಣಕೊಟ್ಟು ಡಿಗ್ರಿ ಪಡೆಯುವುದರಿಂದ ದೊರೆಯ ಲಾರದು ಹಾಗೆಂದು ನಾನೇನು ನಿನ್ನನ್ನು ಅತ್ತ ಕಳುಹಿಸಲು ಮನಸಿಲ್ಲದವ ನಾಗಿದ್ದೇನೆಂದು ತಿಳಿಯಬೇಡ ಸದ್ಯದಲ್ಲೆ ಎರಡು ವ್ಯಾನುಗಳನ್ನು ಕೊಳ್ಳ ಬೇಕೆಂದು ಇದ್ದೇವೆ ಅದರಿಂದ 'ಸಂಚಾರೀ ಚಿಕಿತ್ಸಾಲಯ'ವನ್ನೂ ನಡೆಸಬಹುದು ನಮ್ಮ ಸಂಸ್ಥೆಯ ಮೇಲೆ 'ಮಾಬಾಪ' ಸರಕಾರಕ್ಕೂ ಕರುಣೆ ಹುಟ್ಟಿ ಗ್ರ್ಯಾಂಟನ್ನೂ ಅನುಗ್ರಹಿಸಿರುತ್ತದೆ" ಎಂದು ಮೊದಲಾಗಿ ರಾಯರು ಸಮಸ್ತವನ್ನೂ ವಿವರಿಸಿದರು

ಮುಂದೆ ಸುಮತಿ ತಿಂಗಳಲ್ಲೆ ಸಂಪಿಗೆಯನ್ನು ಬಿಟ್ಟು ಬೊಂಬಾಯಿಗೆ ಹೋಗುವವಳಿದ್ದಳು ಶಂಕರ ಮಾತ್ರ ಹೆಚ್ಚಿನ ವಿದ್ಯಾಭ್ಯಾಸ ತನಗೆ ಬೇಡ ವೆಂದು ಕುಳಿತುಕೊಂಡ ಬೊಂಬಾಯಿಗೆ ಬಾಯೆಂದು ಆಕೆ ಸ್ವಾಗತಿಸಿದರೂ ಅವನು ಹೋಗಲಿಲ್ಲ "ನಿನ್ನ ಕೋರ್ಸ್ (Course) ಮುಗಿದ ಮೇಲೆ ಪತ್ನೀಸಮೇತನಾಗಿ ಬರುತ್ತೇನೆ ಒಂದು ಸ್ಟಡಿ ಟೂರ್ (Study Tour)

ಮಾಡಿ ಬಿಡುವ ಸಾಧ್ಯವಾದಷ್ಟು ಹೊಸ-ಹೊಸ ಸ್ಥಳಗಳನ್ನು ನಿಮಗೆ ತೋರಿಸುತ್ತೇನೆ ಅಂದರೆ ನೀನು ಸ್ಪೈಟಿಂಗೇಲ್ ಆಗಬಹುದು ” ಎಂದು ಆತ ಹೇಳುತ್ತ ನಾಲಗೆ ಕಚ್ಚಿಕೊಂಡ ಅವಳ ಹುಲಿಬಾಯಿಗೆ ತಾನೆಲ್ಲಿ ಆಹುತಿಯಾಗಬೇಕಾಗುತ್ತದೋ ಎಂಬ ಹೆದರಿಕೆಯೂ ಅವನಿಗುಂಟಾ ಯಿತು

“ ನೀನೇನೋ ತಿಳಿದುಕೊಂಡಿರಬಹುದು—ಶಂಕರಾ ! ಆದರೆ ನಾನು ಮುಂಬರುವ ಯಾವುದೋ ಒಂದು ಘೋರಘಟನೆಯನ್ನು ಎದುರಿಸುವುದರ ಸಲುವಾಗಿ ಈ ತೆರದಿಂದ ಸಜ್ಜಾಗುತ್ತಿದ್ದೇನೆಂಬ ಅರಿವಿನಿಂದ ನನ್ನ ಅಂತ ರಾತ್ಮ ಮಿಡಿಯುತ್ತಿದ್ದಾನೆ ! ಅದು ಇಡೀ ದೇಶಕ್ಕೆ ಬಂದರೂ ಬರಬಹುದು ನಮ್ಮ ಜನಾಂಗಕ್ಕೆ ಬಂದರೆ ಬರಬಹುದು ಅಥವಾ ನಮ್ಮ ಊರಿಗಷ್ಟೆ ಅಥವಾ—ಅದೆಲ್ಲ ಬಿಟ್ಟು ಕೇವಲ ನನ್ನೊಬ್ಬಳಿಗೆ ಬಂದರೂ ಸರಿಯೇ ! ”

“ ಯಾವ ಮಾರಿಯನ್ನೋ ಎದುರಿಸಲು ತಯಾರಾಗುವ ತಾಟಕಿ ಯಂತೆ ಮಾತಾಡುತ್ತಿರುವೆ ? ” ಎಂದು ಶಂಕರ ಪ್ರಶ್ನಿಸಿದ

“ ದೇಶವನ್ನೇ-ಮಾನವ ಜೀವನವನ್ನೆ ರಕ್ಷಿಸುವ ಹಟತೊಟ್ಟ ನನ್ನನ್ನು ಹೀಯಾಳಿಸುವೆಯಾ ? ” ಎಂದು ಸುಮತಿ ಕಣ್ಣು ಕೆರಳಿಸಿ ಅವನತ್ತ ನೋಡಿದಳು

“ ಇಲ್ಲ ದೇವಿ ! ” ಎಂದು ದೈನ್ಯದಿಂದ ನುಡಿದ ಇವಳಲ್ಲಿ ಯಾವುದೋ ಅವ್ಯಕ್ತ ಶಕ್ತಿ ಗುಪ್ತಕಾರಸ್ಥಾನ ನಡೆಸುತ್ತಿದೆಯೆಂದು ಅವನು ತಿಳಿದುಕೊಂಡ ಅವಳನ್ನು ಕಂಡೊಡನೆ ಅವನಿಗೆ ಗೌರವಭಾವನೆ ತಲೆ ದೋರತೊಡಗಿತ್ತು ಹಿಂದಿನ ನರಕಾಮ ಈಗ ಅವನ ಮನೋರಂಗಕ್ಕೆ ಇಣುಕುತ್ತಲೇ ಇರಲಿಲ್ಲ

“ ನಾನು ಬಡಾಯಿ ಕೊಚ್ಚುತ್ತಿದೇನೆಂದು ತಿಳಿಯಬೇಡ ಶಂಕರಾ ನನ್ನದನ್ನೆ ನಾನು ಹೇಳುತ್ತಿದ್ದೇನೆಂದು ಗ್ರಹಿಸಬಾರದು ನೀನು ! ಯಾಕಂದರೆ ನೀನು ನನ್ನನ್ನು ಅರ್ಥಮಾಡಿ ಕೊಂಡಿರುತ್ತಿಯೆಂದು ನನಗೆ ವಿಶ್ವಾಸವಿದೆ ನನ್ನ ಕೋರ್ಸ್ ( Course ) ಮುಗಿಸಿಕೊಂಡು ನಾನು ಮತ್ತೆ ಇಲ್ಲಿಗೆ ಬರುವವಳು ಅಲ್ಲಿಗೆ ಹೋಗಿ ನೇವೆಗೆ ನವಶಕ್ತಿಯನ್ನು ಗಳಿಸಿಕೊಂಡು ಬರು ತ್ತೇನೆ ನಾನು ಪಡೆದುದೆಲ್ಲವನ್ನು ಕೊಡುತ್ತೇನೆ ಪಡೆದದ್ದನ್ನು ಕೊಡು

ವುದು ನಿಸರ್ಗನಿಯಮ ಹಾಗೆ ಕೊಡದಿದ್ದರೆ ಅವನ ಜೀವನ ಅವಳ ಜೀವನ ವಿಶಾಲಿಸುವುದಿಲ್ಲ ತಾಯಿ ಮಗುವನ್ನು ಪ್ರೀತಿಸುತ್ತಾಳೆ ಅವಳು ತನ್ನನ್ನು ಚಿಕ್ಕಂದಿನಲ್ಲಿ ಪ್ರೀತಿಸಿದ್ದಾಳೆ ಸಲಹಿದ್ದಾಳೆ–ಎಂದು ಮಗು ಅವಳನ್ನಷ್ಟೆ ಪ್ರೀತಿಸುವುದಿಲ್ಲ ಅದು ಬೇರೆಯವರನ್ನೂ ಪ್ರೀತಿಸುತ್ತದೆ ತಾಯಿಯನ್ನೂ ಪ್ರೀತಿಸುತ್ತದೆ ತಾಯಿಯಿಂದ ಪಡೆದದ್ದನ್ನು ಜಗನ್ಮಾತೆಗೆ ಅದು ದೊಡ್ಡದಾದ ಮೇಲೆ ಅರ್ಪಿಸುತ್ತದೆ ನಾವು ಪಡೆಯುವುದೆಲ್ಲ ಕೊಡುವುದಕ್ಕೆ! ಆದರಿಂದ ನಮಗೆ ಸಿದ್ಧಿ, ವೃದ್ಧಿಯಾದಂತೆ ಲೋಕಕ್ಕೂ ಸಿದ್ಧಿ ವೃದ್ಧಿಯಾಗುತ್ತದೆ" ಎಂದು ಹೇಳುವಾಗ ಸುಮತಿಯ ಜ್ಞಾನಪಿಶಾಚಿಯ ಭೂತಾವತಾರ ಶಂಕರನಿಗ ಕಂಡಿತು

## ೧೧

ಐದು ವರುಷಗಳ ಕಾಲಚಕ್ರ ಉರುಳಿ ಹೋಯಿತು ಸುಮತಿ ತನ್ನ ವಾಂಛಿತದಂತೆ ಮುಂಬೈ ಸೇರಿದ್ದಳಷ್ಟೆ ಅಲ್ಲಿ ಅವಳ ವೈದ್ಯಕೀಯ ಕೋರ್ಸು (Course) ಮುಗಿದಿತ್ತು ಆದರೂ ಬೇರೆ ಒಬ್ಬ ತಜ್ಞ ವೈದ್ಯರಲ್ಲಿ ವೈದ್ಯಕೀಯದ ನವೀನ ಪ್ರಯೋಗಗಳನ್ನು ಕಲಿಯಲು ಆಕೆ ಬಯಸಿದ್ದಳು ಅವರು ವಯೋವೃದ್ಧರಾದುದರಿಂದ ಅವರ ನೇತ್ರತ್ವದಲ್ಲಿ ಸುಮತಿ ಹೆಚ್ಚು ವಿದ್ಯೆ ಗಳಿಸುವುದೂ ಸುಲಭವಾಗಿರಲಿಲ್ಲ ಆದ್ದರಿಂದ ಆಕೆ ಸದ್ಯದಲ್ಲೆ ಮರಳಿ ತನ್ನೂರಿಗೆ ಬರುವುದನ್ನೂ ನಿಶ್ಚಯಿಸಬೇಕಾಯಿತು

ಶಂಕರನಿಗೂ ಕಾಗದ ಬರೆದಳು ಅವನನ್ನೂ ಅತ್ತ ತಾನಿದ್ದ ಮಹಾನಗರದವರೆಗೆ ಬರಬೇಕೆಂದು ಆಹ್ವಾನಿಸಿದಳು ಆತನೂ ಸಕುಟುಂಬ–ಸಪರಿವಾರ ಸಮೇತ ಹೋಗಬೇಕೆಂದು ನಿರ್ಧರಿಸಿದ್ದ ಅವನ ಅಭೀಪ್ಸೆ ನೆರವೇರುವುದರಲ್ಲಿತ್ತು ಡಾಕ್ಟರರೂ ಅವನಿಗೆ ಒಂದು ತಿಂಗಳ ಮಟ್ಟಿಗೆ ಬಿಡುವನ್ನೂ ದಯಪಾಲಿಸಿದ್ದರು

ಇಷ್ಟು ಕಾಲಾವಾಧಿಯಲ್ಲಿ ಶಂಕರ ಕಲ್ಯಾಣಿ ಮುತ್ತಿನಂಥ ಮೂರು ವರುಷ ಪ್ರಾಯದ 'ಸಿದ್ಧಾರ್ಥ' ನಾಮದ ಗಂಡುಗುವರನ ಪಿತನಾಗಿದ್ದ ನ ಬ್ಬಿರಯೂ ಸುಖವಾಗಿದ್ದಳು ಮೊಮ್ಮಗನನ್ನು ಮುದ್ದಿಡುವುದೇ ಅವಳ ಜೀವನವಾಗಿತ್ತು ಸಾಕಷ್ಟು ವಯಸ್ಸೂ ಅವಳ ಚಟುವಟಿಕೆಯನ್ನು ಕುಂದಿ ಸಿತ್ತು ವಯಸ್ಸು ಕಬಳಿಸಿದ್ದ ಉತ್ಸಾಹ – ಉಮೇದುವಾರಿಕೆಯನ್ನು ಮೊಮ್ಮಗ ಚಿಗುರಿಸಿದ್ದ

ಅವಳನ್ನೂ ತನ್ನೊಡನೆ ಅಖಿಲ ಭಾರತ ಸಂಚಾರಕ್ಕೆ ಕರೆದೊಯ್ಯಬೇ ಕೆಂದು ಶಂಕರನೆಣಿಸಿದ್ದ ಆದರೆ ಅವಳೇ ತಾನಿದ್ದ ನೆಲವನ್ನು ಬಿಟ್ಟು ಹೊರ ಡಲು ಕೇಳಲಿಲ್ಲ ತಾನು ಹುಟ್ಟಿ ಆಡಿ ನಲಿದ ತಾಣದಲ್ಲೆ ಸಾಯ ಬೇಕು ಕಾಶಿಗೆ ಹೋಗಿ ಸತ್ತರೂ ತನ್ನೂರಲ್ಲಿ ಸತ್ತಷ್ಟು ಸಂತೃಪ್ತಿ ಆತ್ಮಕ್ಕೆ ದೊರೆಯು ಲಾರದು ಎಷ್ಟೆಂದರೂ ತನ್ನದೇ ಎಂಬ ಹಕ್ಕಿನ ನಾಲ್ಕು ಮಾರು ಅಗಲದ ಷ್ಟಾದರೂ ನಂದನವನದಂಥ ಭೂಮಿಯಿದೆ ಅದರಲ್ಲೆ ತನ್ನ ಕೊನೆಯಯಾತ್ರೆ ಮುಗಿಯಬೇಕು ಹೊರತು - ತನ್ನ ದೇಹಾಂತ್ಯಕರ್ಮಕ್ಕೂ ಕ್ರಯಕೊಟ್ಟು ಪರಸ್ಥಳದಲ್ಲಿ ಜಾಗಕೊಳ್ಳುವುದು ಸಲ್ಲದು ತಾನಿಲ್ಲಿ ಸ್ವತಂತ್ರಳಾಗಿ ಸಾಯು ತ್ತೇನೆ ನೀವೆಲ್ಲ ಕಾಶಿ, ರಾಮೇಶ್ವರ, ಕಲ್ಕತ್ತಾ ನೋಡಿಕೊಂಡು ಬರ ಬಹುದು ನೀವು ಹಿಂದುಸ್ಥಾನದ ಯಾತ್ರೆ ಮುಗಿಸಿಕೊಂಡು ಬರುವಾಗ ನಾನು ಇಹಲೋಕದ ಯಾತ್ರೆ ಮುಗಿಸಲು ಸಿದ್ಧಳಾಗಿ ಕೂತಿರುತ್ತೇನೆಂದು ತನ್ನ ಹೃದಯಂತರಾಳದಲ್ಲಿ ಹುದುಗಿದ್ದ ವಿಚಾರಗಳನ್ನೆಲ್ಲ ವ್ಯಕ್ತಪಡಿಸಿದ್ದಳು

ಕಾರಣ, ತಾಯಿಯನ್ನು ಬಿಟ್ಟೇ ಪ್ರಯಾಣ ಕೈಕೊಳ್ಳುವುದೆಂದು ಶಂಕರ ಯೋಚನೆ ಮಾಡಿದ್ದ ತಾನು, ತನ್ನ ಚಿರಂಜೀವಿ ಹಾಗೂ ಸುಮಾ ಕೂಡಿ ಸೀದಾ ಬೊಂಬಾಯಿ ಸೇರುವುದು — ಅಲ್ಲಿ ಸುಮತಿಯೊಡನೆ ನಾಲ್ಕು ದಿನ ಇದ್ದು – ಆ ಮೇಲೆ ಅಖಿಲ – ಭಾರತ ಸಂಚಾರಕ್ಕೆ ನಾಲ್ವರೂ ಹೊರಡುವ ದೆಂಬ ಕಾರ್ಯಕ್ರಮ ಹೂಡಿಯಾಯಿತು

ಪ್ರಯಾಣದ ಸಕಲ ಸಿದ್ಧತೆಯೂ ಮುಗಿಯಿತು ಸ್ವತಃ ಡಾಕ್ಟರರೇ ಶಂಕರನನ್ನು ಬೀಳ್ಕೊಟ್ಟರು

ಶಂಕರ ಪ್ರಯಾಣ ತೊಡಗಿದ ಅವನು ಅಖಿಲ ಭಾರತ ಸಂಚಾರ ಹೊರಟುದರ ಉದ್ದೇಶ ವಿವಿಧಮುಖದ್ದಾಗಿತ್ತು ಹೆಚ್ಚು ಕಡಿಮೆ ಶಂಕರ ಈ

ಮೊದಲೆ ಅಖಿಲಭಾರತ ಸಂಚರಿಸಿದ್ದನೆಂದರೂ ತಪ್ಪಲ್ಲ ಗಂಗಾನದಿಯ ದಿವ್ಯ ಪುಳಿನಪೀಠಗಳ ಮೇಲೆ ಕೂತು ತಪಸ್ಸು ಮಾಡಿದ್ದ ಶಂಕರನೂ ಈಗ ಹೊರಟಿದ್ದ ಶಂಕರನೇ ಆಗಿದ್ದ ಅಂದಿನ ಭಾವ ಬೇರೆ, ಇಂದಿನ ಜೀವ ನವೆ ಬೇರೆ ವಿರಕ್ತಮಾರ್ಗದಲ್ಲಿ ತೊಡಗಿದ ಜೀವನ ಸಂಸಾರಿಕ—ನಿಲ್ದಾಣ ವನ್ನು ತಲಪಿಯಾಗಿದೆ

ಅವನ ತಲೆಯಲ್ಲಿ ಮತ್ತೆ ಗಾಢ ಸಮಸ್ಯೆಗಳು—ಉತ್ತರಗಳು ಏಳತೊಡ ಗಿದ್ದವು ಅದಕ್ಕಾಗಿ—ತನ್ನ ಆತ್ಮವನ್ನು ಶಾಂತಿಯ ನಿಲುಗಡೆಗೆ ಪ್ರಯಾಣ ದಿಂದಲಾದರೂ ತಂದು ನಿಲ್ಲಿಸಲಿಕ್ಕೆ ಸಾಧ್ಯವಿದೆಯೇ ಎಂದು ಯೋಚಿಸಿ— ಯೋಚಿಸಿ ಆ ಪಯಣ ತೊಡಗಿಬಿಟ್ಟಿದ್ದ ಹಿಂದಿನ ತನ್ನ ಸಖರು ಭೇಟಿ ಯಾದರೆ ಅವರಿಗೆ ತನ್ನ ಬಾಳಿನ ಕಥೆಯನ್ನು ಹೇಗೆ ನಿವೇದಿಸಬೇಕೆಂದು ಆತ ಚಿಂತಿಸದಿದ್ದರೂ—ಅದನ್ನು ಅವರಿಗೆ ಹೇಳುವ ಮಾರ್ಗವೇ ಅವನಿಗೆ ತೋಚ ದಾಯಿತು

ಇಷ್ಟು ವರುಷಗಳ ಕಾಲಾವಧಿಯಲ್ಲಿ ತಾನು ಸಾಧಿಸಿದ್ದೇನು ? ಎಂಬ ಪ್ರಶ್ನೆ ಅವನ ತಲೆಯಲ್ಲಿ ನಲಿಯತೊಡಗಿತೆಂದರೆ—ಆತ ನಿರ್ವಿಣ್ಣನಾಗುತ್ತಲೂ ಇದ್ದ

ತನ್ನ ವ್ಯಕ್ತಿತ್ವದ ಪ್ರತಿಭೆ, ಉತ್ಸಾಹ—ಉಬ್ಬು—ಆರೋಹಗಳು ಒಂದು ಹೆಣ್ಣಿನ ಪ್ರಖರವಾದ ಪರಿವರ್ತನದ ಮೂಲಕ ಕುಂದಿತೇ ? ಉಡುಗಿತೇ ? ಕಬಳಿಸಿತೇ ? — ಎಂಬ ಘೋರ ವಿವೇಚನೆಗೆ ಆತ ಪ್ರಯಾಣ ಕಾಲದಲ್ಲಿ ವಶವಾಗಿ ಬಿಟ್ಟ !

ಡಾಕ್ಟರರ ಪ್ರಖರ ವ್ಯಕ್ತಿತ್ವ—ಕರ್ತೃತ್ವಗಳ ಪ್ರಚಂಡ ಜ್ವಾಲೆ ತನ್ನ ದನ್ನು ಮುಸಳಿಸಿತೇ ?

ಅದೆಂದಿಗೂ ಇಲ್ಲ—ಅಲ್ಲ

ಅವರ ಸಾನಿಧ್ಯದಿಂದ ತನ್ನ ಜೀವಜ್ಯೋತಿ ಬೆಳಕಿಗೆ ಬಂತೇ ವಿನಾ ಕುಂದಲಿಲ್ಲ ಎಂದಾತ ತನ್ನ ಸ್ಥಿರವಾದ ಪ್ರಗತಿಯ ಚಲನೆಯನ್ನು ವಿವೇಚಿ ಸುವುದರಲ್ಲಿ ತೊಡಗಿ ನಿರ್ಧರಿಸಬೇಕಾಯಿತು

ಸಮಾಜದ ಶಕ್ತಿಪುರುಷನೆದುರು ತಾನು ನಿಲ್ಲಲು—ಅಶಕ್ತನಾದೆನೇ ?

ತಾನು ಮಾಡಿದ್ದನ್ನೆಲ್ಲ ಸಮಾಜ ಸುಟ್ಟಿತು ತಾನು ಮಾಡಿದ್ದೇ—

ಅದೆಲ್ಲ ? ಅಲ್ಲ—ಸಮಾಜದಿಂದ ಕೆಗೆದು—ಪಡೆದು ತಾನು ನಿರ್ಮಿಸಿದ್ದು ! ಹಾಗಿದ್ದರೆ ತನ್ನ ಶಕ್ತಿಯ ಹೆಮ್ಮೆ—ಹೆಚ್ಚಳದ ಪ್ರಶ್ನೆ ಅಲ್ಲಿ ಇದೆಯೇ ?

ಇದೆ—ಇತ್ತು !

ತನ್ನ ಅಳಿದುಳಿದ ಉತ್ಸಾಹಗಂಗೆ ಬತ್ತಿಹೋದದ್ದು—ಈ ಸುಮತಿ ಸ್ಫೂರ್ತಿಯ ಸೂರ್ಯನಂತೆ ಪರಿವರ್ತನೆಗೊಂಡು ಧೈರ್ಯಳಂತೆ ಮೆರೆಯ ತೊಡಗಿದ ಮೇಲೆ ! ಅವಳ ವಿಕಸಿತ ವ್ಯಕ್ತಿತ್ವದ ಸೂರ್ಯಪ್ರಭೆಯ ಮುಂದೆ ತನ್ನ ಅಳಿದುಳಿದ ಚೇತನದ ಸೊಡರು ಕಾಂತಿಹೀನವಾಗಿ ಉರಿಯತೊಡಗಿತು ! ಹೌದು ಹೌದು ಖಂಡಿತಕ್ಕೂ ಹೌದು ! ತನ್ನದು ಸ್ಥಿರವಾದ—ಸತ್ಯವಾದ ಸಿದ್ಧಾಂತವಿದು—ಎಂದಾತ ಯೋಚನಾಮಗ್ನನಾಗಿ ನಿರ್ಧರಿಸಿದ

ತನ್ನ ಜೀವನಯಾತ್ರೆಯ ಕೊನೆಯೇ — ಸಮೀಪಿಸುತ್ತಲಿದೆಯೆಂದು ಅವನಿಗೆ ಭಾಸವಾಗದಿರಲಿಲ್ಲ ತಾನು ಸಾಲೆ— 'ಕಲಾನಿಕೇತನ' ಸ್ಥಾಪಿಸಿದ್ದೇ ತನ್ನ ಜೀವನದೊಳಗಿನ ಶಿಖರ ಕಾಲ ಅದಕ್ಕೂ ಹೆಚ್ಚಿನ ಶಿಖರವನ್ನು ಏರಲು ಸಾಧ್ಯವಾಗಲಿಲ್ಲ ಅಲ್ಲಿಂದಲೇ—ತಾನು ಕೆಳಗೆ ಇಳಿದು ಬಂದಂತಾಯಿತು ಶಿಖರ ಮುಟ್ಟಿದೆ ! — ಎಂಬ ತೃಪ್ತಿ ಪಟ್ಟುಕೊಂಡರೂ ಪುನಃ ಅಸಂತೃಪ್ತಿ ಅವನನ್ನು ಆವರಿಸುತ್ತಿತ್ತು !

ಆತ್ಮ ಪರಿಶೋಧನೆಯಲ್ಲಿ ತೊಡಗಿದ ಶಂಕರ ಸುಮತಿಯನ್ನು ಕೀಳುಗಳೆಯಲಿಲ್ಲ ಅವಳನ್ನು ತ್ಯಗಳಲೂ ಇಲ್ಲ—ಬದಲು ತನ್ನ ಕೈಯಿಂದ ಆದಷ್ಟು ಸೇವೆ ಮಾಡುವ ಎಂದೇ ನಿಶ್ಚಯಿಸಿದ ಅಂತೇ ಮೇಲು—ಕೀಳು—ಭಾವನೆಗಳನ್ನು ತನ್ನ ತಲೆಯಲ್ಲಿ ತಂದುಕೊಂಡು ತಾನು ತೊಳಲಾಡುತ್ತೇನೆಂಬ ಅರಿವು ಅವನಿಗಾಯಿತು

ವಾರಕ್ಕೊಮ್ಮೆ ಬರುತ್ತಿದ್ದ ಸುಮತಿಯ ಪತ್ರವು ಅವನ ಅಂತರಂಗವನ್ನು ಅಂಥ ಕೀಳರಿಮೆ—ಹೆಗ್ಗರಿಮೆಗಳ ಬಳಲಾಟದಲ್ಲಿ ಬೀಳಗೊಡಲಿಲ್ಲ ತನ್ನ ಕೈಯಿಂದ ಕೊಡಬಹುದಾದಷ್ಟನ್ನು ಸಂತೋಷದಿಂದ ಪಡೆದುಕೊಳ್ಳುವ ಸಹನೆ —ಶಕ್ತಿ ಈ ಜಗತ್ತಿಗಿಲ್ಲವಲ್ಲ—ಎಂದೂ ಆತ ಸುಮತಿಗೆ ಬರೆದಿದ್ದ "ನೀನು ಈಗ ಜೀವನದಲ್ಲಿ ಒಂದು ಸಿದ್ಧಿಯನ್ನು ಪಡೆದುಕೊಂಡ ಹಾಗಾಯಿತು ಯಾವಾತ ಆತ್ಮಪರಿಶೀಲನೆ(Self Criticism)ಯಲ್ಲಿ ತೊಡಗಿ ತನ್ನ ಬಾಳನ್ನು ವಿವೇಚಿಸತೊಡಗಿತ್ತಾನೋ ಅಂಥವನು ಯೋಗಿ" ಎಂದು ಸುಮತಿ ಅವನಿಗೆ

ಪತ್ರಮುಖೇನ ಬರೆದು ಸಂತೈಸಲೆತ್ನಿಸಿದ್ದಳು

ತಾನು ಮಾಡಿದ್ದು—ಪಡೆದುದಕ್ಕಿಂತ ಕಡಿಮೆಯೆಂಬ ಭಾವನೆ ಅವನ ಚಿತ್ತ ಶಿಲೆಯ ಮೇಲೆ ಶಾಸನದಂತೆ ಕೊರೆಯಲ್ಪಟ್ಟಿತ್ತು! ತನ್ನಿಂದ ಸಾಧ್ಯವಾದಷ್ಟನ್ನೆಲ್ಲ ಜಗತ್ತು ಪಡೆದುಕೊಂಡು—ಅದು ತನ್ನನ್ನು ಮುಕ್ತಗೊಳಿಸಲಿ ಆದರಂತೆ ವರ್ತಿಸುವುದೇ ತನ್ನ ನಿತ್ಯ ಕರ್ತವ್ಯ—ಕರ್ಮವೆಂದು ಶಂಕರ ಮತ್ತೊಮ್ಮೆ ನಿರ್ಧರಿಸಿದ್ದ ಅದೇ ಅವನು ಬೊಂಬಾಯಿ ಸೇರಿದಾಗ ಮಾಡಿದ ನಿರ್ಣಯವಾಗಿತ್ತು ತನ್ನ ಇಷ್ಟದಂತೆ ಜಗತ್ತು ತನ್ನಿಂದ ಪಡೆಯಲು ಸಾಧ್ಯವಾದುದನ್ನೆಲ್ಲ ಪಡೆದು ತನ್ನ ಭಾರವನ್ನು ಕಡಿಮೆಮಾಡುತ್ತದೆಂಬ ದೃಢವಿಶ್ವಾಸವೂ ಅಂದು ಆತನಿಗೆ ಬಾರದೆ ಹೋಗಲಿಲ್ಲ!

ಡಾಕ್ಟರರು ಶಂಕರನನ್ನು ಸಂತೋಷದಿಂದ ಬೀಳ್ಕೊಟ್ಟು ಒಂದೆರಡು ವಾರ ದಾಟಿದ್ದವು ಅಷ್ಟರಲ್ಲೇ ಅವರಿಂದ ಇಡೀ ದವಾಖಾನೆಯನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವುದು ಕಷ್ಟವಾಗುತ್ತ ಬಂತು ಆಸ್ಪತ್ರೆಯಲ್ಲಿ ಇದ್ದ ವೈದ್ಯಕೀಯ ಪಡೆಯಿಂದ ಮದ್ದಿಗೆ—ಶುಶ್ರೂಷೆಗೆ ಬರುತ್ತಿದ್ದ ರೋಗಿಗಳನ್ನು ನೀಗಿಸಿಕೊಂಡು ಹೋಗುವುದು ದುಸ್ತರವಾಯಿತು!

† † † † †

ಊರಿಗೇ ಗ್ರಹಚಾರ ಕಾಲ ' ಬಂದೊದಗಿತೆಂದರೂ ತಪ್ಪಲ್ಲ ಎಲ್ಲಿಂದಿಲ್ಲದ ಪ್ಲೇಗು ಸುತ್ತುಮುತ್ತಲಿನ ಹಳ್ಳಿಪಳ್ಳಿಗಳಲ್ಲಿ ಕಾಣಿಸಿಕೊಂಡಿತು

ಪ್ಲೇಗಿನ ರೋಗವನ್ನು ' ಕನ್ನಾನೂರು ಜೈಲಿ ' ನಿಂದ ಅದೇ ಬಿಡುಗಡೆಯಾಗಿ ಬಂದಿದ್ದ ಮುಕ್ತೇಶ್ವರರು ತಂದು ಹಾಕಿದರೆಂದು ಜನ ಆರೋಪಿಸಹತ್ತಿದರು ಮುಕ್ತೇಶ್ವರರು ಒಂದು ಖೂನಿ ಕಟ್ಲೆಯ ಆಪಾದನೆಗೆ ಗುರಿಯಾಗಿ ಆರು ತಿಂಗಳ ಕಠಿಣ ಕಾರಾಗೃಹವಾಸ ಕೈಕೊಂಡಿದ್ದರು!

ಪ್ಲೇಗು ರೋಗ ಹೊತ್ತುಕೊಂಡೆ ಅವರು ಊರು ಸೇರಿದ್ದರು ಜನ ಕೇಳಿದರೆ " ಮಗ್ಗುಲಲ್ಲಿ ಒಂದು ಕುರು (Boil) ಎದ್ದಿದೆ! " ಎಂದು ಹೇಳುತ್ತಿದ್ದರಂತೆ ಅದು ಒಡೆದು ಕೀವು ಸೋರಿ—ಯಾರದೋ ಶುಶ್ರೂಷೆಯಿಂದ ತತ್ಕಾಲಕ್ಕೆ ಗುಣವಾಯಿತು—ಮುಕ್ತೇಶ್ವರರಿಗೆ ಆದರೆ ಊರಲ್ಲಿ ಬೇರೆಯವರನ್ನು ಆ ಪ್ಲೇಗು ಅಂಟಿಕೊಳ್ಳದೆ ಹೋಗಲಿಲ್ಲ ಮೊದಲು ಮುಕ್ತೇಶ್ವರರ

ಹಳ್ಳಿಯಲ್ಲಿ ರೋಗ ಹಬ್ಬಿತು

ಎಷ್ಟೋ ಮನೆಗಳಲ್ಲಿ ಇಲಿ ಬೀಳತೊಡಗಿದ್ದವು! ಜನರಿಗೆ ಆ 'ಪ್ಲೇಗು' ಎಂದರೆ ಒಂದು ಭೀಕರ ಸಾಂಕ್ರಾಮಿಕ ರೋಗವೆಂಬುದೂ ತಿಳಿದಿರಲಿಲ್ಲ ಅಜ್ಞರ ಗುಡಿಸಲನ್ನೆ ಮೊದಲು ಪ್ರವೇಶಿಸಿದ ಪ್ಲೇಗು ಪ್ರಜ್ಞರಾದ ಶ್ರೀಮಂತರ ಅರಮನೆಗಳನ್ನು ಪ್ರವೇಶಿಸಲು ಕೆಲ ದಿನ ತೆಗೆದುಕೊಂಡಿತು

ಮುಕ್ತೇಶ್ವರರ ಮನೆಯಲ್ಲೆ ಅವರೇ ಹೇಳುವ ಅವರ "ಕುರು" ಒಡೆದ ದಿನವೇ ಇಲಿಗಳು ಬಿದ್ದಿದ್ದವು "ಎಂಥ ಕೆಟ್ಟ ಮನುಷ್ಯರಪ್ಪಾ—ನಮ್ಮೂರ ಮುಕ್ತೇಶ್ವರರು! ಪಾಪಿ—ಜೈಲು ಬಿಟ್ಟು ಮನೆಸೇರಿದೊಡನೆ ಇಲಿಗಳೂ ಪ್ರಾಣಬಿಟ್ಟು ಬೀಳಬೇಕೆ? ಪಾಪಿಯ ಮನೆಯಲ್ಲಿ ಇರಬಾರದೆಂದು ಸತ್ತೇ ಬಿಟ್ಟವು! ಬುಟ್ಟಿ—ಬುಟ್ಟಿ ಇಲಿಗಳು ಸತ್ತುಬಿದ್ದವಂತೆ!" ಎಂಬ ಸುದ್ದಿ ವಿಕಟಹಾಸ್ಯದ ರೂಪತಾಳಿ ಊರಲ್ಲಿ ಪ್ರಚುರಗೊಂಡಿತು

ಮರುದಿನವೇ—ಅವರ ನೆರೆಮನೆ—ಕೇರಿ ಎಲ್ಲೆಡೆಗಳಲ್ಲೂ ನಿಷ್ಠುರ ಜ್ವರದಿಂದ ಜನ ಮಲಗಿದರು ಎಷ್ಟೋ ಮನೆಗಳಲ್ಲಿ ಇಲಿ ಬೀಳತೊಡಗಿದವು ಕೆಲವರು "ತಮ್ಮದೂ ಪಾಪದ ಮನಯೇ?" ಎಂದು ಸಂಶಯ ಪಡಬೇಕಾಯಿತು

ಕಂಕುಳ ಹತ್ತಿರ ಗುಳ್ಳೆ ಎದ್ದು—ಭಾರೀ ಜ್ವರ ಕಾಯತೊಡಗಿ ನೂರಾರು ಜನ ನರಳತೊಡಗಿದ್ದರು ಈ ವೇಳೆಗೆ ಮುಕ್ತೇಶ್ವರರು ಒಂದು ಸಲಕ್ಕೆ ಮೃತ್ಯುವಿನ ದವಡೆಯಿಂದ ಪಾರಾಗಿದ್ದರು! ಅಂತೇ ಊರಲ್ಲಿ ತಿರುಗಾಟಕ್ಕೂ ಪ್ರಾರಂಭಿಸಿದ್ದರು ಒಮ್ಮೆ ಅಣ್ಣಪ್ಪಯ್ಯನವರಿಗೂ ಮುಖ ತೋರಿಸಿ ಬಂದಿದ್ದರು

"ನಿಮ್ಮ ಅಣ್ಣ—ಹೊನ್ನಪ್ಪಯ್ಯನವರ ಕಣ್ಣುಗಳು ಎರಡೂ ಕುರುಡಾಗಿ ಬಿಟ್ಟವಂತೆ—ಹೌದೇ?" ಎಂದು ಕೇಳಿದ್ದರು ಮುಕ್ತೇಶ್ವರರು!

"ನಮ್ಮ ನಮ್ಮ ಕರ್ಮ ಮುಕ್ತೇಶ್ವರರೇ! ಏನು ಮಾಡುವುದು? ಮಾಡಬಾರದ್ದು ಮಾಡಿದರೆ ಬರಬಾರದ್ದು ಬರುತ್ತದೆ ರಾಮ—ಕೃಷ್ಣ—ಗೋವಿಂದಾ—ಹರಿಹರಿ " ಎಂದು ಅಣ್ಣಪ್ಪಯ್ಯ ಜಪ ಮಾಡುತ್ತ ಹೇಳಿದ್ದರು!

ತಮ್ಮ "ಕುರು" ಗುಣವಾಗದಿದ್ದರೂ ಅದಕ್ಕೆ ಪಟ್ಟಿ ಕಟ್ಟಿಕೊಂಡೇ ಮುಕ್ತೇಶ್ವರರು ಅಣ್ಣಪ್ಪಯ್ಯವರಲ್ಲಿ ಹೋಗಿದ್ದರು!

"ಇದೇನು ಪಟ್ಟೆ?" ಎಂದು ರಾಮದಾಸ ಕೇಳಿದ್ದಕ್ಕೆ "ಕುರು ಅಪ್ಪಾ ಕುರು" ಎಂದು ಹೇಳಿ ಹೋಗಿದ್ದರು!

ಮರುದಿನವೇ ಅಣ್ಣಪ್ಪಯ್ಯನವರ ಮನೆಯಲ್ಲಿ ಇಲಿ ಬೀಳತೊಡಗಿದವು! ಇಷ್ಟರಲ್ಲೆ ಊರಲ್ಲಿ ಪ್ಲೇಗು ಬಂದ ಸುದ್ದಿ ನಿಮಿಷಮಾತ್ರಗಲ್ಲಿ ಹಬ್ಬಿತ್ತು ಹಲವಾರು "ಕೇಸು" (Case) ಗಳೂ ಆದ ಸುದ್ದಿಯೂ ಬಂದಿತು! "ಹಳ್ಳಿಗಳಿಗೂ ಪ್ಲೇಗೇ!" ಎಂದು ರಾಮದಾಸ ಉದ್ಗಾರ ತೆಗೆಯಬೇಕಾಯಿತು! ಕೂಡಲೆ ಮನೆಯನ್ನು ಖಾಲಿ ಮಾಡಿಸಿದ ಆರೋಗ್ಯ ಖಾತೆಯವರೂ ಬಂದು ಮನೆಯಲ್ಲೆಲ್ಲ 'ಮದ್ದು' ಹಾಕಿ ಹೋದರು ಆ ಮೇಲೆ ಅಣ್ಣಪ್ಪಯ್ಯನವರಿಗೂ ಗೊತ್ತಾಯಿತು—ರೋಗ ತಂದವರು ಮುಕ್ತೇಶ್ವರರೆಂದು! "ಊರಿಗೆ ತಂದವನು ನಮ್ಮಲ್ಲಿಗೂ ತಂದುಕೊಟ್ಟು ಹೋದನಲ್ಲಾ ಕದೀಮ— ಮುಕ್ತೇಶ್ವರ!" ಎಂದು ಅಣ್ಣಪ್ಪಯ್ಯ ಅವರನ್ನು ಥಳಿಸಿದರು--ಮಾತಿನಲ್ಲೆ

ಹೊನ್ನಪ್ಪಯ್ಯನವರಲ್ಲೂ ಇಲಿಗಳು ಬಿದ್ದವಂತೆ! ಅವರ ಮನೆಯನ್ನೂ ಖಾಲಿ ಮಾಡುವ ಪ್ರಸಂಗ ಬಾರದಿರಲಿಲ್ಲ! ಒಟ್ಟಾರೆ ಇಡೀ ಕಾರ್ಕಳ ತಾಲೂಕಿನ ಅರ್ಧ ಭಾಗವನ್ನೆ ಪ್ಲೇಗು ವಶಪಡಿಸಿಕೊಂಡಿತು ಪ್ರತಿಯೊಂದು ಮನೆಯಲ್ಲಿ ಒಂದಿಬ್ಬರು ಪ್ಲೇಗಿನಿಂದ ಮಲಗದೆ ಇಲ್ಲ!

ಹಾಗೆಂದು ಪ್ಲೇಗು ಹೊಕ್ಕದ ಮನೆಗಳೂ ಇದ್ದುವು! ಕಾಂತಪ್ಪನ ಮನೆಯಲ್ಲಿ ಇಲಿಗಳು ಬೀಳಲಿಲ್ಲ ಅಣ್ಣಪ್ಪಯ್ಯನವರಲ್ಲಿ ಇಲಿಗಳು ಬಿದ್ದರೂ ಕೆಲ ದಿನ ಯಾರಿಗೂ ಪ್ಲೇಗು ಬರುವ ಸಂಭವ ಕಾಣಲಿಲ್ಲ

ಮುದಿ—ಸುಬ್ಬಿ ಸುಖವಾಗಿದ್ದಳು! ಅವಳ ಮನೆಯಲ್ಲೂ ಇಲಿ ಬಿದ್ದಿರಲಿಲ್ಲ! "ಅಲ್ಲಿ ಇಲಿಗಳು ಇದ್ದರಲ್ಲ ಸಾಯುವುದು!" ಎಂದು ಅಣ್ಣಪ್ಪಯ್ಯ ಹೇಳುತ್ತಿದ್ದರು "ನಮ್ಮಲ್ಲೂ ಇಲಿಗಳಿಲ್ಲ!" ಎಂದು ಕಾಂತಪ್ಪ ಹೇಳಿದ್ದ!

ಊರು ತುಂಬೆಲ್ಲಾ ಎಲ್ಲರಿಗೂ ಚುಚ್ಚುಮದ್ದು ಕೊಡುವ ಪಡೆಗಳೇ ಹೊರಟಿದ್ದವು ಆರೋಗ್ಯ ಖಾತೆಯವರು ಭಾರೀ 'ಆರಂಭಶೂರತ್ವ' ಪ್ರದರ್ಶಿಸತೊಡಗಿದ್ದರು! ಕಾಂತಪ್ಪ, "ನನಗೆ ಪಿಲೇಗ್ (ಪ್ಲೇಗು) ಬಂದು ಸತ್ತರೂ ಪರವಾ ಇಲ್ಲ—ಆ ಗೋಣಿ ಚೀಲದ ದಬ್ಬಣ(ಸೂಜಿ)ಚುಚ್ಚಿಸಿಕೊಳ್ಳುವುದಿಲ್ಲ!" ಎಂದು ಸ್ಪಷ್ಟವಾಗಿ ಹೇಳಿ—ಇನಾಕ್ಯುಲೇಶನ್ ಮಾಡಿಸಿಕೊಳ್ಳ

ಲಿಲ್ಲ "ಸಾಯುವ ಮುದುಕಿಗೆ—ನನಗೆ ಬೇಡವ್ವಾ!" ಎಂದು ಸುಬ್ಬಿಯೂ ಅದನ್ನು ಚುಚ್ಚಿಸಿಕೊಳ್ಳಲಿಲ್ಲ

ಉಳಿದ ಊರವರಿಗೆಲ್ಲಾ ಚುಚ್ಚುಮದ್ದು ಕೊಡಲಾಗುತ್ತಿತ್ತು! ಆ ಕಾರ್ಯ ಭರದಿಂದ ಸಾಗಿತ್ತು

"ನಮಲ್ಲಿ ಇಲಿಗಳು ಬಿದ್ದಿವೆ—ನನಗೆ ಮೊದಲು ಚುಚ್ಚಿರಿ—ನಮ್ಮಲ್ಲಿ ಎಲ್ಲರಿಗೂ ಚುಚ್ಚಬೇಕು!" ಎಂದು ಅಣ್ಣಪ್ಪಯ್ಯ ಡಾಕ್ಟರರಿಗೆ ಒಂದು 'ಎಳ ನೀರು' ಕುಡಿಸಿ ಆಥಿಥ್ಯ ಮಾಡಿಯೇ ಕೆಲಸ ತೀರಿಸಿಕೊಂಡಿದ್ದರು

"ಯಾರ ಮನೆಯಲ್ಲಿ ಪಾಪ ಹೆಚ್ಚಾಯಿತೋ ಅಲ್ಲಿ ಇಲಿಗಳು ಬೀಳುತ್ತಿವೆ" ಎಂದು ಊರಲ್ಲಿ ಹೊಸ ವಾರ್ತೆಯೂ ಪ್ರಚುರಕ್ಕೆ ಬಂತು ಪ್ಲೇಗಿನ ಇಲಿಗಳು 'ಪಾಪದ ಇಲಿಗಳು' ಆದವು!

ಇತ್ತ ಅಣ್ಣಪ್ಪಯ್ಯನವರನ್ನು ಸಮಾಧಾನ ಪಡಿಸುವುದು ಅವರ ಮನೆಯವರಿಗೆಲ್ಲ ಜೀವಕ್ಕೆ ಬಂತು ಅವರು ಇಂಜಕ್ಷನ್ ಚುಚ್ಚಿಸಿಕೊಂಡ ನಾಲ್ಕು ದಿನದವರೆಗೆ ನಿದ್ದೆ ಮಾಡಲಿಲ್ಲ! "ನನಗೆ ಪಿಲೇಗೇ ಬಂತು! ರಾಮ ರಾಮಾ! ಏ ನನ್ನ ನಾರಾಯಣ . ನನ್ನೀ—ಗಡ್ಡದವನೇ ಬಾ! ನೀನು ಇದ್ದಿದ್ದರೆ ಒಮ್ಮೆ ಬೂದಿ ಮಂತ್ರಿಸಿದ್ದರೆ ಈ ಪಿಲೇಗೇ ಊರು ಬಿಟ್ಟು ಹೋಗುತ್ತಿತ್ತಲ್ಲಾ—ರಾಮ ರಾಮಾ! ಅಯ್ಯೋ ವಿದ್ಯಾಸಾಗರಾ—ಸಂಜೀವೀ ನಾನು ಸಾಯುತ್ತೇನೆ ಈ ಪಿಲೇಗು ನನ್ನನ್ನು ಉಳಿಸುವುದಿಲ್ಲ ನಿಮ್ಮೀ—ದಾಸಾ—ನೀನು ಸಂಜೀವಿಯನ್ನು ಬಿಟ್ಟು ಹಾಕಬೇಡ ವಿದ್ಯಾ-ಸಾಗರನ ಮದುವೆ ವರಲಕ್ಷ್ಮಿಯೊಡನೆ ಆಗಲಿ—ಅದನ್ನು ನೋಡಿ ಸಾಯಬೇಕೆಂಬ ಆಸೆಯಿತ್ತು—ನಾನು ಉಳಿಯುತ್ತೇನೋ ಇಲ್ಲವೋ ಹಾಹ್ಹಾ!" ಎಂದು ಅಣ್ಣಪ್ಪಯ್ಯ ಪ್ಲೇಗು ಬಾರದಿದ್ದರೂ ಹೊಯ್ಕೊಳ್ಳಲಿಕ್ಕೆ ಪ್ರಾರಂಭಿಸಿದ್ದರು

ಒಂದು ದಿನವಂತೂ ಮನೆಯವರಿಗೆಲ್ಲಾ ಕ್ಷಣಕ್ಷಣಕ್ಕೂ ತನ್ನ ಕಂಕುಳ ಹತ್ತಿರ ಕೈಹಿಡಿಯಲಿಕ್ಕೆ ಹೇಳಿ, "ಗಡ್ಡೆ ಏಳುತ್ತಾ ಇದೆಯೆಂದು ಕಾಣುತ್ತದೆ—ರಾಮ ರಾಮಾ!" ಎಂದು ಹೆದರಿಸಿ—ಗಾಭಾಗಾಬರಿ ಮಾಡಿ ಹಾಕಿದ್ದರು—ಅಣ್ಣಪ್ಪಯ್ಯ!

ಕೊನೆಗೆ ಕಾಂತಪ್ಪ ಅವರನ್ನು ಒಂದು ಕೋಣೆಯಲ್ಲಿ ಹಾಕಿ ಅವರ ಹತ್ತಿರ ಕೂತು ಧೈರ್ಯ ಹೇಳಬೇಕಾಯಿತು!

ಹೊನ್ನಪ್ಪಯ್ಯನವರಿಗೆ ಮಾತ್ರ ಪ್ಲೇಗು ಅಂಟಿಕೊಂಡೇ ಬಿಟ್ಟಿತ್ತು! ಅವರ ಸ್ಥಿತಿ ಚಿಂತಾಜನಕವಾಗಿತ್ತು ಅವರ ಆರೈಕೆ ಮಾಡುವುದೂ ಪ್ರಾಣಕ್ಕಿಟ್ಟುಕೊಂಡಿತ್ತು! ಕಣ್ಣು ಬೇರೆ ಕಳೆದುಕೊಂಡು ಹೊನ್ನಪ್ಪಯ್ಯ ಕುರುಡರಾಗಿದ್ದರಷ್ಟೆ? ರಾಘವೇಂದ್ರ ಅವರ ನರಕಸೇವೆ ಮಾಡಿ--ಮಾಡಿ ನೋತು ಹೋಗ ತೊಡಗಿದ್ದ!

ಸುಬ್ಬಿಯೂ ಬಂದು ಹೊನ್ನಪ್ಪಯ್ಯನವರ ಸೇವೆಗೆ ಕುಳಿತಿದ್ದಳು "ಅಂಟು ರೋಗ!" ಎಂದು ಜನ ಭಯಪಡಿಸಿದರೂ ಅವಳು ಹೆದರಲಿಲ್ಲ. "ಪಾಪರೋಗ!" ಎಂದವಳೂ ಹೇಳುತ್ತಿದ್ದಳು

ಊರಿನ ದೆವ್ವ—ಭೂತಗಳಿಗೆ ಹರಕೆ—ಹೊತ್ತದ್ದೇ ಹೊರತು ಸೇವೆ ಸಲ್ಲಿಸಿ ಹರಕೆ ತೀರಿಸುವ ಕಾರ್ಯಕ್ರಮವೆಬ್ಬಿಸಲು ಪ್ಲೇಗು ಬಿಟ್ಟಿರಲಿಲ್ಲ!

ದಿನದಿಂದ ದಿನಕ್ಕೆ ಪ್ಲೇಗಿನ ಬಾಧೆ ಪ್ರಬಲವಾಗುತ್ತ ಹೊರಟಿತ್ತು ಸರಕಾರದ ಆರೋಗ್ಯ ಖಾತೆಯವರ ಆರಂಭಶೂರತ್ವ ಕೊನೆಗೊಂಡಿತು ಚುಚ್ಚುಮದ್ದೇ ಅವರ ವೈದ್ಯರಿಂದ ಕೊಟ್ಟು ಮುಗಿಯಲಿಲ್ಲ! ರೋಗ ಪ್ರಬಲವಾಗಿ ಹಬ್ಬಿರುವಾಗ ಪ್ರತಿಬಂಧಕ ಕಾರ್ಯದಲ್ಲೆ ಮಗ್ನರಾದ ಆರೋಗ್ಯ ಖಾತೆಯ ಮುಖ್ಯತನ ಡಾ॥ ಕೃಷ್ಣರಾಯರ ಹಾಗೂ ಊರಿನ ಅನೇಕ ಮುಂದಾಳುಗಳ ತಲೆ ಕೆಡಿಸಿತು ಶುಶ್ರೂಷೆಯ ಕೇಂದ್ರಗಳನ್ನು ಸರಕಾರ ತೆರೆಯುವ ಸುದ್ದಿಯಲ್ಲೂ ಇರಲಿಲ್ಲ! ಕೆಲ ವೈದ್ಯರು ರೋಗಕ್ಕೆ ಹೆದರಿಯೇ ಊರು ಬಿಟ್ಟರು ಹತ್ತಾರು ಹಳ್ಳಿಗಳಲ್ಲಿ ಪ್ಲೇಗು ಪಸರಿಸಿತು! ಜನ ತಬ್ಬಿಬ್ಬಾದರು! ಊರು ಮರಣದ ದವಡೆಯಲ್ಲಿ ಸಿಕ್ಕಿತು ಎಲ್ಲೆಲ್ಲೂ ಸ್ಮಶಾನ ರೌದ್ರತೆ ತುಂಬಿತು ಅಳು—ರೋಗ—ನೋವು—ಮರಣ—ಎಲ್ಲೆಲ್ಲಿಂದೂ ಕೇಳಬರುತ್ತಿತ್ತು

ಮಾನವರಿಗೆ ಸಾವು--ನೋವುಗಳ ಎರಡು ಪ್ರಸಂಗಗಳಲ್ಲಿ ಮಾತ್ರ ಮಾನವರ ಸಹಾಯ ಬೇಕಾಗುತ್ತದೆಂದು ಕಾಣುತ್ತದೆ ಮಿಕ್ಕ ವೇಳೆಯಲ್ಲಿ ಉಳಿದ ಯಾವ ಶಕ್ತಿಯೂ ಅವರನ್ನು ಸ್ನೇಹ—ಸೌಹಾರ್ದಗಳಿಂದ ಕೂಡುವಂತೆ ಮೋಹಿಸಲಾರದು ಆದರೆ ಸಾವು ನೋವುಗಳ ಕಾಲದಲ್ಲಿ ನನ್ನವರು—ನಮ್ಮವರು—ನಾವು—ನಾಡು—ಎಂಬ ವಿಶಾಲವಾದ ಅರಿವು ಅವರಿಗಾಗುತ್ತದೆ

ೠ೨

ರಾಯರು ವಿಳಂಬ ಮಾಡದೆ ಎಕ್ಸಪ್ರೆಸ್ ತಂತಿ(express telegram) ಬಿಟ್ಟು ಶಂಕರನನ್ನು ಮಿಕ್ಕ ವೈದ್ಯರೊಡನೆ ಸಾಧ್ಯವಿದ್ದರೆ ಕೂಡಿಕೊಂಡು ಊರಿಗೆ ಬರಲು ಆಹ್ವಾನಿಸಿದರು ಸುಮತಿಯೇ ರಾಯರ ತಂತಿ ಓದಿ ಸ್ಟೆಟಂಗೇಲ - ಆದಳು! ಶಂಕರ ತಡಮಾಡದೆ ಹೊರಡುವ ಸಿದ್ಧತೆ ಮಾಡು ತ್ತಿದ್ದ ಈ ಹೊತ್ತಿಗೆ ಅವರು ಆಗ್ರಾ ತಲುಪಿದ್ದರು

ಅವರು ಹೊರಡಲು ಇನ್ನು ಕೇವಲ ಎರಡು ಗಂಟೆ ಸಮಯವುಳಿದಿತ್ತು ನಿಲ್ದಾಣಕ್ಕೆ ಬಂದಿದ್ದರು—ಅಷ್ಟುಬೇಗ ಆಗ ಅಲ್ಲಿ ಅವರಿಗೊಬ್ಬ ಸಾಧುವಿನ ಸಂದರ್ಶನವಾಯಿತು ಆತ ಒಂದು ಗಜಗಡ್ಡ ಬೆಳೆಸಿದ್ದ! ಸಂಪೂರ್ಣಕಾವಿಯಾ ಗಿದ್ದ ಅವನು ಅವರೆಲ್ಲರನ್ನು ಗುರುತಿಸಿದ ಆದರೆ ಅವನ ಪರಿಚಯ ಅವರಿ ಗಾಗಲಿಲ್ಲ

"ಹ್ಯಾಲೋ ಮ್ಯಾಡಮ್!" ಎಂದು ಅವನು ಇಂಗ್ಲಿಷಿನಲ್ಲಿ ಸುಮತಿ ಯನ್ನು ಮಾತಾಡಿಸಿದ

ಸುಮತಿಯ ದೃಷ್ಟಿ ಅವನ ಬಲಗೈ ಬೆರಳುಗಳತ್ತ ಹೋಯಿತು ಅವ ಳಿಗ ಅವುಗಳು ಏನು ಸೂಚಿಸಿದವೋ ತಿಳಿಯದು

"ನಿಮ್ಮ ಸತ್ವಪರೀಕ್ಷೆಯ ಕಾಲ ಬಂದಿದೆ ನಮ್ಮೂರಿಗೆ ಬನ್ನಿ ದೇವರು ನಿಮ್ಮ ಸೇವೆಗಾಗಿ ಕಾದಿದ್ದಾನೆ ವೈದ್ಯಕೀಯ ಬಿಟ್ಟು ವಿರಕ್ತರಾಗಿದ್ದೀರೆ? ಅಡ್ಡಿ - ಇಲ್ಲ ನಮ್ಮೊಡನೆ ಹೊರಡಿರಿ ನಿಮ್ಮಲ್ಲಿ ಬೇರೆಯಾರಾದರೂ ಜನ ಸೇವೆಮಾಡಲು ಸಿದ್ಧರಿದ್ದರೆ ನಮ್ಮೊಡನೆ ಬರಬೇಕು" ಎಂಬ ಸುಮ ತಿಯ ಮಾತುಗಳನ್ನು ಆತ ಕೇಳುತ್ತ "ಧನ್ಯನಾದೆ" ಎಂದ ಸುಮತಿ ಅವನ ಕೈಗೆ ತಾರು ಪತ್ರ – ಎಲ್ಲ ಕೊಟ್ಟಳು ಆತ ಸಮಸ್ತವನ್ನೂ ಅರಿತು ಕೊಂಡ "ಇದೇ ಸಮಯ! ಇಂಥ ಸಮಯ ಬೇರೆ ಬರುವುದಿಲ್ಲ ಜನತಾ ಜನಾರ್ದನನ ಸೇವೆಮಾಡಿ ಸಾಯುವ ನನ್ನೊಡನೆ ಇನ್ನೊಬ್ಬ ನೀಳದೇಹಿ ಸಾಧು ಸತ್ಪುರುಷನಿದ್ದಾನೆ ಅವನಿಗೆ ಭಾರೀ ವೈದ್ಯಕೀಯ

ಚಿರುತ್ತಿ ವೈದ್ಯಕೀಯದಲ್ಲಿ ಆವನ ಕೈ ಹಿಡಿದವರಿಲ್ಲ ಬೆರಳು ಸಿಕ್ಕರೆ ಹಸ್ತ ನುಂಗುವಂಥ ನಿಪುಣ ಮೇಲಾಗಿ ಅತ್ತಲಾಗೆ ನಮ್ಮೂರಿನವನೇ ಅಂತೆ" ಎಂದು ಆತ ಹೇಳಿದೊಡನೆ ಸುಮತಿ ಅವನೊಡಗೂಡಿ ಆ ಸಾಧುವನ್ನೂ ಕರೆ ತಂದೇ ಬಿಟ್ಟಳು

"ನಾರಾಯಣಯ್ಯ !" ಎಂದು ಗಾಢಾಲಿಂಗನ ಗೈದ ಶಂಕರ

"ಭಾವಯ್ಯ !" ಎಂದು ಸುಮತಿ ಕುಣಿವೇ ಬಿಟ್ಟಳು !

"ಹಾ !" ಎಂದು ಆ ವೈದ್ಯ ಸುಮತಿಯತ್ತ ನೋಡಿ ನಿರುತ್ತರನಾಗಿ ನಿಂತು ಬಿಟ್ಟಿದ್ದ !

"ಇವರು ನನಗೆ ಇಂಗ್ಲೀಷು ಕಲಿಸಿದ ವೈದ್ಯರು ನಿನಗೆ ಗುರ್ತು ಸಿಗ ಲಿಲ್ಲವೇ ಶಂಕರ್ ?" ಎಂದು ಸುಮತಿ ಅವನ ಪರಿಚಯವನ್ನು ಶಂಕರನಿಗೆ ಮಾಡಿಕೊಟ್ಟಳು

"ಮೈ ಡಿಯರ್ !" ಎಂದು ಶಂಕರ ಅವನನ್ನು ಅಪ್ಪಿಕೊಂಡನು !

ಅವತಾರ ಪುರುಷ, ಸ್ತ್ರೀ—ಯಂತೆ ಅವರೆಲ್ಲ ಪ್ಲೇಗಿನ ರಾಜ್ಯಕ್ಕೆ ಹೊರ ಟಿದ್ದರು ಜಗತ್ತನ್ನು ಉಳಿಸಲು ಹೊರಟ ಅವಧೂತರೇ ಅವರಾಗಿದ್ದರು.

ಈ ದೃಶ್ಯವನ್ನು ಆಶ್ಚರ್ಯದಿಂದ ನೋಡುತ್ತ ಕಲ್ಲುಗಳಂತೆ ಶಂಕರನ ಮಡದಿ ಮತ್ತು ಸಿದ್ಧಾರ್ಥ ನಿಂತೇ ಬಿಟ್ಟಿದ್ದರು

* * * * *

ಸುತ್ತುಮುತ್ತಲಿನ ಪ್ಲೇಗು ಪೀಡಿತರಿಗೆಲ್ಲ ಸಂಪಿಗೆಯಲ್ಲಿ 'ಕ್ಯಾಂಪು' ಹಾಕಲಾಯಿತು ನೂರಾರು ಸಹಸ್ರಾರು ಪ್ಲೇಗು—ಪೀಡಿತರು ಬಂದು ಬಿದ್ದರು ಸಂಪಿಗೆಯ ಪ್ರಶಸ್ತವಾದ ಮೈದಾನಿನ ತುಂಬೆಲ್ಲ ಕ್ಯಾಂಪುಗಳೇ ಕ್ಯಾಂಪುಗಳು

ಊರಲ್ಲಿ ರೋಗವಿನ್ನೂ ಹತೋಟಿಗೆ ಬಂದಿರಲಿಲ್ಲ ! ಒಂದೇ ರೀತಿ ಯಿಂದ ರೋಗಿಗಳು ಬರುತ್ತಲೇ ಇದ್ದರು ಬಂದವರನ್ನೆಲ್ಲ ಡಾಕ್ಟರ ಕೃಷ್ಣ ರಾಯರು ವಾತ್ಸಲ್ಯಪೂರ್ವಕ ಚಿಕಿತ್ಸಿಸಿ ವ್ಯವಸ್ಥಿತವಾಗಿ ಅವರವರ ಪರಿಸ್ಥಿತಿ ಗನುಸರಿಸಿ—ಅಂದರೆ ರೋಗದ ಅವಸ್ಥೆಗನುಸರಿಸಿ—ವಿಂಗಡಿಸಿ ಮಂಚಗಳಲ್ಲಿ ಮಲಗಿಸಲು ಕಳುಹಿಸುತ್ತಿದ್ದರು ಕೃಷ್ಣರಾಯರ ಅಭೂತಪೂರ್ವ ವ್ಯವಸ್ಥೆಯ

ಈ ಸುದ್ದಿ ಇಡೀ ದಕ್ಷಿಣ-ಕನ್ನಡ ಜಿಲ್ಲೆಯನ್ನಾವರಿಸಿತ್ತು ಸರಕಾರವೇ ಬೆರಗಾಗಿತ್ತು! ಅವರ ಧೈರ್ಯ ಕೇಳಿ ಅನೇಕರು ಮೂಗಿನ ಮೇಲೆ ಬೆರಳಿಟ್ಟಿದ್ದರು

ತನ್ನ ಕೈಯಿಂದ ಅಸಾಧ್ಯವೆಂದು ಬಗೆದ ಆರೋಗ್ಯ ಖಾತೆ ಕೃಷ್ಣರಾಯರಿಗೆ ಪ್ಲೇಗನ್ನು ಹತೋಟಿಗೆ ತರಲು ಸಾಮಗ್ರಿಗಳನ್ನು ಒದಗಿಸಿಕೊಟ್ಟಿತು

ಇಷ್ಟರಲ್ಲಿ—ನಾರಾಯಣಯ್ಯ, ಸಂಪತ್, ಸುಮತಿ, ಶಂಕರ, ಅವನ ಮಡದಿ—ಬಂದು ಸಂಪಿಗೆಯನ್ನು ಸೇರಿದರು!

ರಾಯರ ತಲೆಯ ಮೇಲಿನಿಂದ ಮೇರುಗಿರಿಯೇ ಇಳಿದಂತಾಯಿತು ಪ್ರಶಾಂತವಾದ ರಾಯರ ಮುಖ ಆದರದಿಂದ ಅವರೆಲ್ಲರನ್ನು ಸ್ವಾಗತಿಸಿತು!

ಒಬ್ಬರಿಗಿಂತ ಒಬ್ಬರು ಉತ್ಸಾಹದಿಂದ ವಾಯುವಿನ ಅವತಾರ ತಾಳಿದಂತೆ ಇತ್ತು ಆ ವೈದ್ಯ ಪಡೆಯ ದೃಶ್ಯ!

ಸುಮತಿ ಸಂಪೂರ್ಣ ಬಿಳಿಯ ವಸ್ತ್ರಧಾರಿಯಾಗಿದ್ದಳು! ಅತ್ಯಂತ ಹೋಪಲೆಸ್ ಕೇಸ್‌ಗಳ ಚಿಕಿತ್ಸೆ — ಆರೈಕೆಯನ್ನು ತನ್ನ ವಶಕ್ಕೆ ಸುಮತಿಯೇ ಪಡೆದುಕೊಂಡಳು ಆಕ ದೈತಿಣಿಯಂತೆ ಕೆಲಸತೊಡಗಿದ್ದಳು! ಐದಾರು ವರುಷಗಳ ಹೆಚ್ಚಿನ ವೈದ್ಯಕೀಯದಿಂದ ಕಲಿತುಕೊಂಡ ನಯ—ವಿನಯಗಳೊಂದಿಗೆ ಅಪಾರ ಚಿಕಿತ್ಸಿಕ—ಆರೈಕೆಯ ನೈಪುಣ್ಯವನ್ನು ಬೆರಸಿ ಅವಳು ಶರಗತಿಯಿಂದ ಆ ಪ್ಲೇಗು ಪೀಡಿತರ ಶುಶ್ರೂಷೆಯನ್ನು ನೋಡಿಕೊಳ್ಳತೊಡಗಿದ್ದಳು

ಕೃಷ್ಣರಾಯರಿಗೆ ಯಾವ ಕೆಲಸಕ್ಕೂ ಕೈಯಿಕ್ಕಲು ಹೋಗಬಾರದೆಂದು ಸುಮತಿ ಶಂಕರ—ನಾರಾಯಣಯ್ಯನವರ ಆಜ್ಞೆಯಾಗಿತ್ತು ಅವರು ಕೇವಲ ಮೇಲ್ವಿಚಾರಣೆಯನ್ನು ನೋಡಿಕೊಂಡರೆ ಸಾಕೆಂದು ಅವರಿಗ ಆಗ್ರಹದ ಆಜ್ಞೆಯೇ ಆಗಿತ್ತು!

ವೈದ್ಯ ಸಂಪತ್ ತನ್ನ ಸಾಧು ಸ್ವರೂಪದಲ್ಲಿ ರೋಗಿಗಳ ಆರೈಕೆ ಮಾಡುತ್ತ ತನ್ನ ಜೀವನ ಇಂದು ಪಾವನವಾಯಿತೆಂದು ತಿಳಿದುಕೊಂಡ ತನ್ನ ಮರಣವನ್ನೂ ಆತ ಬಯಸದೆ ಕೂಡಲಿಲ್ಲ!

ಆತ ಮೊದಲು ಬಂದವನೆ ರಾಯರ ಕಾಲಿಗೆ ಸಾಷ್ಟಾಂಗ ನಮಸ್ಕಾರ ಮಾಡಿ "ನನ್ನದು ಸರ್ವಸ್ವವೂ ತಪ್ಪಾಯಿತು! ಸುಮತಿ ಮತ್ತು ನೀವು

ನನ್ನನ್ನು ಕ್ಷಮಿಸಬೇಕು ನನ್ನ ಪ್ರಾಣ ಈ ಕೆಲಸದಲ್ಲಿ ಬಲಿಕೊಡಲು ತಯಾರಾಗಿ ಬಂದಿದ್ದೇನೆ!" ಎಂದು ಹೇಳಿ ಕಣ್ಣೀರು ಸುರಿಸಿದ್ದ

"ನಿನಗೆ ಯಶದೊರೆಯುತ್ತದೆ ನಿನ್ನ ಜೀವನ ಇದರಿಂದ ಸಾರ್ಥಕವಾಗುತ್ತದೆ!" ಎಂದು ಡಾಕ್ಟರ ಕೃಷ್ಣರಾಯರು ಅವನನ್ನು ಮನಃಪೂರ್ವಕ ಹರಸಿದ್ದರು

ಅಲ್ಲಿಯ ರೋಗಿಗಳನೇಕರು—ನಾರಾಯಣಯ್ಯ ಹಾಗೂ ಸಂಪತ್—ಇವರ ಸಾಧು ಸ್ವರೂಪ ನೋಡಿಯೇ ತಮ್ಮ ಜಾಡ್ಯ ಕಡಿಮೆಯಾಯಿತೆಂದು ಹಿಗ್ಗಿದ್ದರು!

ಪ್ರೀತಿಯಿಂದ ಆರೈಕೆ ಮಾಡುವ ಸುಮತಿಯ ಅಪಾರ ಉತ್ಸಾಹವನ್ನು ಕಂಡೇ ರೋಗಿಗಳೆಲ್ಲ ತೃಪ್ತರಾಗಿ—ತಮ್ಮ ಜಾಡ್ಯ ನೀಗಿಸಿಕೊಂಡಂತಿತ್ತು! ಎಲ್ಲರೊಡನೆ ಆಕೆ ನಗು—ನಯ—ವಿನಯದಿಂದಲೇ ವರ್ತಿಸಿ, ಗೊತ್ತಿಲ್ಲದಂತೆ—ನೋವಾಗದಂತೆ ಚಿಕಿತ್ಸೆ ಮಾಡಿ ರೋಗಿಗಳ ಪ್ರಿಯ ಸಖಿಯಾಗಿದ್ದಳು ಸ್ವರ್ಗದಿಂದ ಇಳಿದು ಬಂದ ದೇವತೆಯೇ ಅವಳೆಂದು ಅವರೆಲ್ಲ ತಿಳಿದುಕೊಂಡಂತೆ ಇತ್ತು! ಗಾಳಿಯಂತೆ ಅವಳು ಕ್ಯಾಂಪಿನಿಂದ ಕ್ಯಾಂಪಿಗೆ ಸಂಚರಿಸಿ ರೋಗಿಗಳ ವ್ರಣ—ಒರಸುವುದು, ಪಟ್ಟಿಕಟ್ಟುವುದು-ಕೀವು ತೊಳೆಯುವುದು-ಮಾಡುವುದನ್ನು ಕಂಡರೆ ಆಕೆ ಹೆಣ್ಣು ಎಂದು ಹೇಳುವಂತೇ ಇರಲಿಲ್ಲ.

ಶಂಕರನ ಉತ್ಸಾಹವೃಕ್ಷ ಉಡುಗಿರಲಿಲ್ಲ ಅವನೂ ದೈತ್ಯನಾಗಿ ದುಡಿಯುತ್ತಿದ್ದ ನಾರಾಯಣಯ್ಯನೂ ತನ್ನ ವೈದ್ಯದ ಪ್ರಕಾರ ಚಿಕಿತ್ಸೆಮಾಡಿ ತನ್ನ ಸೇವೆ ಸಲ್ಲಿಸುತ್ತಿದ್ದ!

ಸಂಪತ್ ಮಾತ್ರ ತನ್ನ ಜೀವವನ್ನು ಅರ್ಪಿಸಲಿಕ್ಕೆ ಸಂಪಿಗೆಗೆ ಬಂದನೆಂದು ಹೇಳಬೇಕು "ನಾನು ಹುಟ್ಟಿದ್ದು ಇಲ್ಲಿ ಅಲ್ಲವಾದರೂ ಸ್ವರ್ಗವನ್ನು ಇಲ್ಲಿ ಕಂಡೆ" ಎಂದು ಆತ ಸುಮತಿಯ ಸುಂದರ ಹಸ್ತಗಳನ್ನು ತನ್ನ ಕಣ್ಣಿಗೆ ಒತ್ತಿ—ಒತ್ತಿ ಪ್ರಾಣಬಿಟ್ಟಿದ್ದ! ಸುಮತಿಯ ಕಣ್ಣು ಒದ್ದೆಯಾಗದಿರಲಿಲ್ಲ ಅವನು ಅವಳಿಗೆ ಪ್ರೇಮಪತ್ರ ಬರೆದಲ್ಲಿಂದ ಪ್ರಾರಂಭಿಸಿ—ಇಂದಿನವರೆಗಿನ ಎಲ್ಲ ಸನ್ನಿವೇಶಗಳೂ ಅವಳ ಚಿತ್ತಫಲಕದ ಮೇಲೆ ಮೂಡಿ ಬಂದು ಅವನ ಬಗ್ಗೆ ಆತ್ಮಾದರ ಭಾವನೆ ಹುಟ್ಟಿಸಿತ್ತು! ಅವನೂ ಪ್ಲೇಗಿಗೆ ತುತ್ತಾಗಿದ್ದ!

ಸಂಪತ್ ಸತ್ತಮೇಲೆ ಪ್ಲೇಗು ಕಡಿಮೆಯಾಗುವ ಲಕ್ಷಣ ಕಂಡು ಬರ

ತೊಡಗಿತು—ಮೆಲ್ಲನೆ!

ಸಂಪಿಗೆಯ ಊರಲ್ಲಿ ರೋಗಿಗಳ ಜಾತ್ರೆಯೇ ಆಯಿತು! ವಿಶಾಲವಾದ ಮೈದಾನಿನಲ್ಲಿ ದೃಷ್ಟಿತೂರಿದತ್ತೆಲ್ಲ—ಕ್ಯಾಂಪುಗಳೇ ಕ್ಯಾಂಪುಗಳು!

ಸುಖದ ದಿನಗಳಲ್ಲಿ ಹಾಯಾಗಿ ದಿನಗಳೆಯುತ್ತಿದ್ದ ಜನರು ಒಮ್ಮೆ ಕಾಲನ ಕ್ರೂರಕೃತ್ಯದಿಂದ ಬಳಲಿದಂತಾಯಿತು! ಸುಖದ ಸಾಗರದಲ್ಲಿ ಒಬ್ಬ ರನ್ನೊಬ್ಬರು ತಿಂದು—ಸುಲಿದು ಪ್ರಫುಲ್ಲರಾಗಿ ವಿಹರಿಸುತ್ತಿದ್ದ ಮಾನವ—ಮೀನುಗಳು ಒಮ್ಮೆಲೇ ಈ ಪ್ಲೇಗೆಂಬ ಕಾಲದೂತ—ಮೀನುಗಾರನ ಬಲೆ ಯಲ್ಲಿ ಸಿಕ್ಕು—ತಮ್ಮ ಸೊಕ್ಕು—ಉಕ್ಕು—ಹೊಟ್ಟೆಕಿಚ್ಚುಗಳನ್ನು ಕಳೆದು ಕೊಂಡು—"ಎಲ್ಲರೂ ಒಂದು ನಾವು" ಎಂಬ ಭಾವನೆಯನ್ನು ಹುಟ್ಟಿಸುವಂತೆ ದಡದಲ್ಲಿ ಬಿದ್ದು ಬಳಲುವ ಹಾಗೆ ಅಲ್ಲಿಯ ಘೋರ ದೃಶ್ಯವಿತ್ತು

ಎಂಥ ವೈಚಿತ್ರ್ಯವಡಗಿತ್ತು ಆ ರೋಗಿಗಳ ಕ್ಯಾಂಪಿನಲ್ಲಿ! ಸಂಜೀವಿನಿ ಯಂತೆ ಸುಮತಿಯು ಸರ್ವರನ್ನು ಗುಣಪಡಿಸುತ್ತ ನಡೆದರೂ ತನ್ನ ತಂದೆ ಯನ್ನು ಗುಣ ಪಡಿಸುವುದು ಅವಳಿಗೆ ಅಸಾಧ್ಯವಾಯಿತು

ಯಾರೋ—ಹೇಳಿ ಮಲಗಿದಂತೆ ಅಲ್ಲಿಯ ಕೆಲ ರೋಗಿಗಳ ಮಂಚ ಗಳನ್ನು ನಿಲ್ಲಿಸಲಾಗಿತ್ತು! ಎಲ್ಲರನ್ನು ಚಿತ್ರಗುಪ್ತನ ಯಮನಿಲಯದಲ್ಲಿ ವಿಚಾ ರಣೆಗೆ ನಿಲ್ಲಿಸಿದಂತೆ—ಅಲ್ಲಿಯ ರೋಗಿಗಳಲ್ಲಿ ಅಷ್ಟು ವ್ಯವಸ್ಥಿತವಾಗಿ ಮಲಗಿದ ಕೆಲವರ ಪಾಡಾಗಿತ್ತು

ಕುರುಡ ಹೊನ್ನಪ್ಪಯ್ಯ ಸಾವಿನ ದವಡೆಯಲ್ಲಿ ನರಳುತ್ತಿದ್ದರು!

ಅವರ ಎಡಕ್ಕೆ ಜಾನಕಮ್ಮ "ಅಯ್ಯೋ ಸುಮತಿ ನನ್ನನ್ನು ಉಳಿಸು—ಅನಂತ ಅಪರಾಧ!" ಎಂದು ಮಾತು ಆಡಿ—ಆಡಿ ಈಗ ಸ್ವರ್ಗಕ್ಕೋ—ನರಕಕ್ಕೋ ಹೊರಟಿದ್ದಳು

ಅಲ್ಲಿಯೇ ಹತ್ತಿರದ ಸಾಲಿನಲ್ಲಿ ಫಲಮಾರಿನ ರಂಗಿ, "ನಾನು ಹೊರಟೆ ಮಾಡಬಾರದ್ದು ಮಾಡಿದೆ ಬರಬಾರದ್ದು ಬಂತು ಅಯ್ಯೋ—ಶಿವನೇ! ಪತಿಯೂ ಹೋದರು! ಮಕ್ಕಳಿಲ್ಲದೆ ನಾನು ಸಾಯಬೇಕಾಯಿತು—ನಾರಾ ಯಣಯ್ಯ ನನ್ನನ್ನು ಉಳಿಸು" ಎಂದು ಅಳಿದೇ ಬಿಟ್ಟಳು

ಹೊನ್ನಪ್ಪಯ್ಯನವರ ಬಲಕ್ಕೆ ಅಣ್ಣಪ್ಪಯ್ಯ "ನನ್ನಿ—ನನ್ನ ನನ್ನಿ—ನನ್ನನ್ನು ಬದುಕಿಸು" ಎಂದು ನರಳುತ್ತಿದ್ದರು "ಶಂಕರಾ—ನನ್ನ ಅಪರಾಧ

ಕ್ಷಮಿಸು ” ಎಂದು ಒದರುತ್ತಿದ್ದರು

ಅವರ ಹತ್ತಿರವೇ ಮುಕ್ತೇಶ್ವರರು “ ಹಾ—ಚಿಮಣಿ ಎಣ್ಣೆ—ಶಂಕರನ ಆಸ್ಪತ್ರೆ ” ಎಂದು ಯಮದೂತರೊಡನೆ ಸಂಭಾಷಣೆ ನಡೆಸಿದ್ದರು

ಅಣ್ಣಪ್ಪಯ್ಯನವರಿಗೆ ಕೇಳಿಸುವಂತೆ “ ಅಯ್ಯೋ ಕಾಂತಪಣ್ಣಾ-- ಎಂಥಾ ಅಪರಾಧ ಮಾಡಿದೆ ! ಅನ್ನ ಕೊಟ್ಟು ಸಾಕಿದವರನ್ನು ಕೀಳುಗಳೆದೆ ಅಣ್ಣಪ್ಪಯ್ಯನವರ ಅನ್ನ ಉಂಡು – ಕೊನೇಕಾಲಕ್ಕೆ ಬ್ಯಾರಿಯೂರಿಗೆ ಹೋದೆ ! ” ಎಂದು ತಿಮ್ಮಾಲೆ ನತ್ತೇ ಬಿಟ್ಟಳು !

ಕಾಂತಪ್ಪನಿಗೆ ಅವನ ನಾಲ್ಕಾರು ಗೆಳೆಯರಿಗೆ ಹೆಣ ಹೊತ್ತು ಅವುಗಳ ಅಂತ್ಯಕ್ರಿಯೆ ನಡೆಸುವ ಕೆಲಸದಿಂದ ಹಿಡಿದು ಕ್ಯಾಂಪು ತಯಾರಿಸುವ ಕಾಯಕದವರೆಗೂ ಶ್ರಮಬೀಳುತ್ತಿತ್ತು !

ದಿವಸಕ್ಕೆ ಹತ್ತಾರು ಹೆಣಗಳ ಸಂಸ್ಕಾರವನ್ನು ಅವರು ಮಾಡಬೇಕಾಗುತ್ತಿತ್ತು ವ್ಯಾನುಗಳಲ್ಲಿ ತುಂಬಿ ಅವುಗಳನ್ನು ಬಹುದೂರ ಒಯ್ದು ದಹಿಸ ಬರುತ್ತಿದ್ದರು !

ದಿನಗಳು ಕಳೆದವು ಪ್ಲೇಗು ಹತೋಟಿಗೆ ಬಂದಿತು ಆದರೂ ಊರಲ್ಲಿ ಪ್ಲೇಗು ಅಕಸ್ಮತ್ತಾಗಿ ಒಬ್ಬೊಬ್ಬರಿಗೆ ಅಂಟಿಕೊಳ್ಳದೆ ಇರುತ್ತಿದ್ದಿಲ್ಲ

ಸಂಪಿಗೆಗೆ ಬಂದ ರೋಗಿಗಳಲ್ಲಿ ಮನೆಗೆ ಮರಳಿದವರ ಸಂಖ್ಯೆ ಹೆಚ್ಚಾಗಿದ್ದರೂ ಮರಣ ಕಂಡವರ ಸಂಖ್ಯೆ ಕಡಿಮೆಯೂ ಆಗಿರಲಿಲ್ಲ

ಅಣ್ಣಪ್ಪಯ್ಯ ಉಳಿಯಲಿಲ್ಲ !
ಮುಕ್ತೇಶ್ವರರು ನರಳಿ – ನರಳಿ ಅಳಿದರು
ತಿಮ್ಮಾಲೆ ಎಂದೋ ಸತ್ತಿದ್ದಳು !
ಜಾನಕಮ್ಮ ಇಹಲೋಕ ಬಿಟ್ಟಳು.
ಹೊನ್ನಪ್ಪಯ್ಯ ಮಾತ್ರ ನರಳುತ್ತ ಇದ್ದರು
ಉಳಿಯುವ ಲಕ್ಷಣ ಕಾಣಲಿಲ್ಲ !
ಸುಮತಿಯ ಶುಶ್ರೂಷೆ ಅನ್ಯಾದೃಶವಾಗಿತ್ತು!
ಬೇಗ ಅಳಿಯುವ ಲಕ್ಷಣವೂ ಇಲ್ಲ!
ಅವರ ಕೀವು – ನೋವು ಅಪಾರವಾಗಿತ್ತು
ಸಾಲದುದಕ್ಕೆ ಕುರುಡರಾಗಿದ್ದರು

ಆಸ್ಪತ್ರೆಯಲ್ಲಿ ಅರ್ಧಕ್ಕೆ ಅರ್ಧ ಜನ ಮರಳಿ ಮನೆಸೇರಿದ್ದರು ಹೊನ್ನಪ್ಪಯ್ಯನವರಿಗೆ ' ಸ್ಪೆಶಲ್ ಟ್ರೀಟ್‌ಮೆಂಟು ' ನಡೆದಿತ್ತು ಸುಮತಿಯು ಇದುವರೆಗೆ ಕಲಿತ ಪಾಂಡಿತ್ಯವನ್ನೆಲ್ಲ ಉಪಯೋಗಿಸಿದಳು ಯಾವುದೂ ಉಪಯೋಗಕ್ಕೆ ಬೀಳಲಿಲ್ಲ ! ಅವರು ನರಳುತ್ತಲೇ ಇದ್ದರು !

ರಾತ್ರಿಯ ಹೊತ್ತು ಹೊನ್ನಪ್ಪಯ್ಯ " ಸುಮತೀ! " ಎಂದು ನರದಳಿರು

" ನಿನ್ನನ್ನು ನೋಡುತ್ತ ಇದ್ದೇನೆ ಅಪ್ಪಾ ! "

" ನಿನ್ನನ್ನು ನೋಡಲಾರೆ ಮಗೂ ! ಆದರೂ ನಿನ್ನ ಮುಖ ನನ್ನ ಕಣ್ಣಿಲ್ಲದ ಕಣ್ಣಿಗೆ ಸೂರ್ಯನಂತೆ ಪ್ರಕಾಶವಾಗಿ ಕಾಣುತ್ತದೆ ದೇವರು ನಿನ್ನ ಮುಖ ಈ ಹೊತ್ತಿನಲ್ಲಾದರೂ ನೋಡಲಿಕ್ಕೆ ಒಂದು ನಿಮಿಷ ದೃಷ್ಟಿ ಕೊಟ್ಟು ಒಯ್ಯಬಾರದೇನು ? . ಸುಮತೀ ನಿನ್ನ ಪ್ರತಿಯೊಂದು ರೋಮರಂಧ್ರವೂ ಸೂರ್ಯನಂತೆ .. ಉರಿದು ಪರ್ ಜ್ವ ಲಿಸಿ ದರೂ ನಾ ನು - ನಿನ್ನನ್ನು ನೋಡಲಾರೆ ಪಾ ಪಿ" ಎಂದು ಹೊನ್ನಪ್ಪಯ್ಯ ಪ್ರಾಣಬಿಟ್ಟರು!

ಸುಮತಿಗೆ ತನ್ನ ಮೆಚ್ಚುಗೆಯ ಶೇಕ್ಸಪಿಯರನ ' ರಾಜಾಲಿಯರ್ ' (King Lear) ನಾಟಕದ ದುರಂತತೆ ನೆನಪಿಗೆ ಬಂತು ! ಇಂಥ ದುರಂತ ನೋಡುವುದಕ್ಕಾಗಿಯೇ ತಾನು ಅದನ್ನು ಅಷ್ಟು ಮೆಚ್ಚಿದ್ದೆಂದು ಆಕೆ ತಿಳಿದುಕೊಂಡಳು

ಕಣ್ಣೀರಿನಿಂದ ತಂದೆಗೆ ತರ್ಪಣವಿತ್ತಳು !
ರಾಘವೇಂದ್ರ ಅಲ್ಲಿಯೇ ಇದ್ದ
" ಸುಮತೀ " ಎಂದನು
" ನನ್ನ ಕೈಯಲಿಲ್ಲ ಅಣ್ಣಾ ! "

† † † † †

ಊರಲ್ಲಿಯ ಪ್ಲೇಗು ಬೇನೆ ' ಪಾಪದ ಇಲಿಗಳನ್ನು ' ಬಳೆದುಕೊಂಡು

ಹೋಯಿತು ಊರೆಲ್ಲ ಶಾಂತವಾಯಿತು

ಶಂಕರನು ಅಪಾರವಾದ ಕೆಲಸದಿಂದ ದಣಿದಿದ್ದ ಅವನಿಗೆ ವಿಶ್ರಾಂತಿ ಬೇಕಿತ್ತು ಸುಮತಿಯ ಪಾಡೂ ಅದೇ ಆಗಿತ್ತು

ರೋಗದಿಂದ ಉಳಿದವರಿಗೆ " ಪಾರಾದೆವು " ಎಂದು ಸಂತೋಷವಾದರೆ ಉಳಿಸಿದ ವೈದ್ಯಕೀಯ ಪಡೆಗೆ " ಉಳಿಸಿದೆವಲ್ಲ ! " ಎಂಬ ತೃಪ್ತಿಯೊಡನೆ " ಸತ್ತರಲ್ಲ " ಎಂಬ ಕೊರಗಿತ್ತೇನೋ ನಿಜ ಆದರೆ - ಮನಸ್ಸು ಹೂವಿನಷ್ಟು ಹಗುರವಾಗಿ ಪ್ರಫುಲ್ಲವಾಗಿತ್ತು

ಕಾಲಚಕ್ರ ಭರದಿಂದ ಉರುಳುತ್ತಿತ್ತು ಶಂಕರನ ತಾಯಿ ಪ್ಲೇಗಿಗೆ ತುತ್ತಾದ ಪಾಪದ ಇಲಿಗಳು ಹೋದಂತೆ ಇಹಲೋಕ ಬಿಟ್ಟು ಹೋಗದೆ— ಎಲ್ಲರಿಗೂ " ನಾನು ಶಿವನ ಪಾದ ಸೇರುತ್ತೇನೆ " ಎಂದು ನಗುನಗುತ್ತ ಹೇಳಿ ಶಾಂತಿದೂತಳಂತೆ ಸ್ವರ್ಗಸೇರಿದಳು

ತಾಯಿಯ ಮರಣವಾದ ಮೇಲೆ ನಾಲ್ಕು ತಿಂಗಳು ದಾಟಿದ್ದವು. ಶಂಕರನ ಆತ್ಮಕ್ಕೆ ಅಪಾರ ಶಾಂತಿ ದೊರಕಿದಂತೆ ಇತ್ತು ಉಲ್ಲಾಸದಿಂದ ಆತ ದಿನಗಳೆಯುತ್ತಿದ್ದ ಊರವರು ಅನೇಕರು ಪ್ಲೇಗಿಗೆ ತುತ್ತಾಗಿ ಅಂದು ಅವನಿಂದ ಶುಶ್ರೂಷೆ ಪಡೆಯುವಾಗ ತಮ್ಮ ಮುಖದಮೇಲೆ ತೋರಿಸಿದ ಆದರ ಸ್ನೇಹ - ಕ್ಷಮೆ ಮೊದಲಾದ ದೈವೀಗಣಗುಳನ್ನು ಆತ ಕಂಡಾಗಿತ್ತು. ತನ್ನನ್ನು ಗುರುತಿಸಿ ಅಪರಾಧ ಒಪ್ಪಿಕೊಂಡಂತೆ ಅವರ ನೋಟವಿತ್ತು. ಶಂಕರನ ಮನ ಕರಗಿ ನೀರಾಗಿತ್ತು ! ಈಗ ಅವನಿಗೆ ತಾನಿನ್ನು ಬಹಳ ದಿನ ಉಳಿದೂ ಪ್ರಯೋಜನವಿಲ್ಲವೆಂಬ ಆತ್ಮತೃಪ್ತಿ ಪ್ರಾಪ್ತಿಸಿತ್ತು ಮರಣವಧುವನ್ನು ಆಲಂಗಿಸಲು ಆತ ಸಿದ್ಧನಾಗಿದ್ದ

ಒಂದು ದಿನ ಜಗತ್ತಿಗೆ ಸೂರ್ಯೋದಯವಾಗುತ್ತಿತ್ತು ಶಂಕರ ಯಾವ ಸ್ಮೃತಿ ಚಿಲುಮೆಯಿಂದಲೊ ಸೆಳೆದು ತಂದು ' ಉದಯರಾಗ ' ಹಾಡುತ್ತಿದ್ದ! ತನ್ನ ಕೈಯಿಂದ ನಿರ್ಮಾಣಗೊಂಡ ' ಕಲಾನಿಕೇತನ 'ದಲ್ಲಿ ಆತ ಕುಳಿತು ಕೊಂಡಿದ್ದ !

ಸಹಸ್ರಾರು ಜನರು ಅಲ್ಲಿ ರಾಗಜಯಂತಿ ನೆರವೇರಿಸಲು ಸೇರಿದಂತೆ ಬಂದೇ ಬರುತ್ತಿದ್ದರು ! ಶಂಕರನ ಗಾನಗಂಗೆಯಲ್ಲಿ ಅವರು ತಲ್ಲೀನ

ಗೊಂಡಂತಿತ್ತು ಆ ಗಾನಗಂಗೆಯೇ ಅವನನ್ನು ಶಿವನ ಸಾನಿಧ್ಯಕ್ಕೆ ಒಯ್ದಳು ಅದೇ ಸಂಪಿಗೆಯಿಂದ ರಾಯರು ಧಾವಿಸಿ ಬಂದರು! ಶಂಕರನ ತೇಜಃಪುಂಜವಾದ ಸ್ವರಮೂರ್ತಿ ಕೂತಂತೇ ಇತ್ತು!

ಆ ಕಾಂತೆ ಸುಮತಿಯ ಕಣ್ಣಲ್ಲಿ ನೀರು ಬಂತು ಅದು ಸಂತೋಷ ಸಲಿಲ "ಅಮರನಾದೆ - ಶಂಕರಾ!" ಎಂದಾ ಕಾಂತೆ ನುಡಿದಳು

ಪಾಪಿಗಳನ್ನೆಲ್ಲ ಪುಣ್ಯವಂತರನ್ನಾಗಿ ಪರಿವರ್ತಿಸಿ ಮುಂದೆ ಕಳುಹಿಸಿ ಕೊಟ್ಟು ಹಿಂದೆ ತಾನು ಶಾಂತಿದೂತನಂತೆ ಶಂಕರನು ಸ್ವರ್ಗಕ್ಕೆ ಹೊರಟನೆಂದು—ರಾಯರು ನುಡಿದರು

ಜಗತ್ತನ್ನು ಬೆಳಗಿಸಿದ ಜೀವಜ್ಯೋತಿಯ ಅಗತ್ಯ ಯಾವುದೋ ಲೋಕಕ್ಕೆ ಬೇಕಾಗಿತ್ತೆಂದು ಕಾಣುತ್ತದೆ